# ಮಾನ್ಯಖೇಟ ಪರಿಸರದ ಇತಿಹಾಸ ಮತ್ತು ಪುರಾತತ್ವ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಎಂ.ಫಿಲ್. ಪದವಿಗಾಗಿ ಸಿದ್ಧಪಡಿಸಿದ ಸಂಪ್ರಬಂಧ)

ನೋಂದಣಿ ಸಂಖ್ಯೆ: ೧೬೦೧೦೮೦೩.೦೦೨೦





ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬
೨೦೧೬-೧೭

# ಮಾನ್ಯಖೇಟ ಪರಿಸರದ ಇತಿಹಾಸ ಮತ್ತು ಪುರಾತತ್ವ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)



ಸಂಶೋಧಕರು
**ನೋಂದಣಿ ಸಂಖ್ಯೆ: ೧೬೦೧೦೮೦೩೦೦೨೦**



ಸಮಾಜ ವಿಜ್ಞಾನಗಳ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ-೫೮೩ ೨೭೬
೨೦೧೬-೧೭

# ಪರಿವಿಡಿ

# ೧. ಕರ್ನಾಟಕ ರಾಜ್ಯದ ನಕ್ಷೆ




ಕೃಪೆಃ ಗೂಗಲ್ ಇಮೇಜಸ್

# ೨. ಕಲಬುರಗಿ ಜಿಲ್ಲೆಯ ನಕ್ಷೆ




ಕೃಪೆ: ಗೂಗಲ್ ಇಮೇಜಸ್

# ೩.ಮಾನ್ಯಖೇಟ ಪರಿಸರದ ನಕ್ಷೆ




ಕೃಪೆಃ ಗೂಗಲ್ ಇಮೇಜಸ್

# ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪ ಮತ್ತು ಸಮೀಕ್ಷೆ

**ಪ್ರಸ್ತಾವನೆ**

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವಿಧಾನ

೧.೪. ಅಧ್ಯಯನದ ಸ್ವರೂಪ

೧.೫. ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆ

## ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪ ಮತ್ತು ಸಮೀಕ್ಷೆ

### ಪ್ರಸ್ತಾವನೆ

ಭೂಮಿಯ ಮೇಲೆ ಮಾನವ ಜೀವನ ಪ್ರಾರಂಭವಾದ ಲಕ್ಷಾಂತರ ವರ್ಷಗಳ ಮೇಲೆ ನಾಗರಿಕತೆಯ ಅಂಕುರವಾದುದು. ನಾಗರಿಕತೆ ಬೆಳೆಯುವ ಮೊದಲು ಮಾನವ ಜೀವನ ಹೇಗಿತ್ತೆಂದು ತಿಳಿಯಲು ನಮಗೆ ಆಧಾರಗಳಿಲ್ಲ. ಅಂದಿನ ಮಾನವನಿಗೆ ಬರವಣಿಗೆ ತಿಳಿದಿರಲಿಲ್ಲ. ಬರೆಯುವ ಸಾಮಾಗ್ರಿಗಳು ಇರಲಿಲ್ಲ. ಭೂಮಿಯ ಮೇಲೆ ಮಾನವ ಜೀವನದ ಇಂದಿನ ಸ್ಥಿತಿಯನ್ನು ಅರ್ಥಮಾಡಿಕೊಳ್ಳಬೇಕಾದರೆ ಆದಿಕಾಲದಿಂದಲೂ ಪ್ರಪಂಚದ ಬೇರೆ ಬೇರೆ ಪ್ರದೇಶಗಳಲ್ಲಿ ಮಾನವನ ವಿಕಾಸವನ್ನು ನೋಡಿ ತಿಳಿಯಬಹುದು. ಮಾನವ ಕೇವಲ ೬೫ ಮಿಲಿಯನ್ ವರ್ಷಗಳ ಹಿಂದಷ್ಟೆ ಭೂಮಿಯ ಮೇಲೆ ಕಾಣಿಸಿಕೊಂಡಿರಬಹುದು ಎಂಬ ಊಹೆ ಇದೆ, ಮಾನವ ಇಂದು ಬಹಳ ಮುಂದುವರಿದವನಾಗಿದ್ದಾನೆ. ಲಕ್ಷಾಂತರ ವರ್ಷಗಳ ಹಿಂದೆ ಮಾನವ ಹೇಗೆ ಜೀವಿಸುತ್ತಿದ್ದ ಎಂಬ ವಿಷಯವನ್ನು ತಿಳಿಸುವ ಚಿತ್ರಗಳನ್ನು ನೋಡಿದಾಗ ಮಾತ್ರ ಪ್ರಾರಂಭದ ಮಾನವನ ಜೀವನಕ್ರಮವು ತಿಳಿದುಬರುತ್ತದೆ.

ಮಾನವನು ಪ್ರಾರಂಭದಲ್ಲಿ ಒಂದು ಕಡೆ ನೆಲಸದೆ ಅಲೆಮಾರಿಯಾಗಿ ಅನುಕೂಲಕರ ಪ್ರದೇಶದಲ್ಲಿ ಅಲೆದಾಡುತ್ತಾ ಜೀವನ ಕಳೆಯುತ್ತಿದ್ದ. ನಂತರ ಒಂದೆಡೆ ಶಾಶ್ವತವಾಗಿ ನೆಲೆನಿಂತು ತನಗೆ ಬೇಕಾದ ಆಹಾರ ಪದಾರ್ಥಗಳನ್ನು ತಾನೆ ಬೆಳೆದು ತಿನ್ನಲು ಪ್ರಾರಂಭಿಸಿದ. ಇದು ಮಾನವನ ಅಲೆಮಾರಿ ಮತ್ತು ಕೃಷಿ ಸಂಸ್ಕೃತಿಗಳ ವಿಕಾಸವನ್ನು ಸೂಚಿಸುತ್ತದೆ. ಈ ಬೆಳವಣಿಗೆಗೆ ನಂತರದಲ್ಲಿ ಗ್ರಾಮ, ನಗರ, ಸಂಸ್ಕೃತಿಯಾಗಿ ಮಾರ್ಪಟ್ಟಿರುವುದನ್ನು ಕಾಣಬಹುದು. ಚರಿತ್ರೆಯೆಂದರೆ ರಾಜ, ರಾಣಿ, ಅವರ ಅರಮನೆ ಮತ್ತು ಸಾಮ್ರಾಜ್ಯದ ವರ್ಣನೆ ಎಂದು ಭಾವಿಸಲಾಗಿತ್ತು. ಆದರೆ ಪ್ರತಿಯೊಂದು ಗ್ರಾಮ, ತಾಲೂಕು, ಜಿಲ್ಲೆ ಹಾಗೂ ರಾಜ್ಯಕ್ಕೂ ತನ್ನದೇ ಆದ ಇತಿಹಾಸವಿದೆ. ಕೆಲವು ದಶಕಗಳಿಂದ ಸ್ಥಳೀಯ ಪರಿಸರದ ಚರಿತ್ರೆಯಲ್ಲಿ ಗ್ರಾಮ, ಹೋಬಳಿ, ನಗರ, ತಾಲೂಕು ಹಾಗೂ ಜಿಲ್ಲೆಗಳ ಅಧ್ಯಯನ ನಡೆಯುತ್ತಿವೆ. ಇಂತಹ ಅಧ್ಯಯನಗಳು ಸ್ಥಳೀಯ ಪರಿಸರದ ಚರಿತ್ರೆಯನ್ನು ತಿಳಿಸುವುದರ ಜೊತೆಗೆ ಅಲ್ಲಿನ ರಾಜಕೀಯ ಇತಿಹಾಸ ಮತ್ತು ಸಾಂಸ್ಕೃತಿಕ ಬದುಕಿನ ಚಿತ್ರಣವನ್ನು ಪುನರ್‌ರಚಿಸಲು ಸಹಕಾರಿಯಾಗಿದೆ.

ಇಂತಹ ಕಾರಣಗಳಿಂದ ಪ್ರಸ್ತುತ ಅಧ್ಯಯನವಾದ "ಮಾನ್ಯಖೇಟ ಪರಿಸರದ ಇತಿಹಾಸ ಮತ್ತು ಪುರಾತತ್ವ" ಎಂಬ ವಿಷಯವನ್ನು ಪ್ರಬಂಧಕ್ಕೆ ಆರಿಸಿಕೊಳ್ಳಲಾಗಿದೆ. ಮತ್ತು ಈ ಪರಿಸರಕ್ಕೆ ಕೆಲವು ವಿಶಿಷ್ಟ ಕಾರಣಗಳಿವೆ, ಕರ್ನಾಟಕದ ಉತ್ತರ ಮೈದಾನವಾದ ಪ್ರದೇಶದಲ್ಲಿ ಈ ಮಾನ್ಯಖೇಟವು ಕಂಡುಬರುತ್ತದೆ. ಇಲ್ಲಿ ಕೃಷ್ಣ-ತುಂಗಭದ್ರಾ ನದಿಗಳಂತೆ ಪ್ರಮುಖ ಜೀವನದಿಗಳು ಯಾವುದು ಇಲ್ಲ. ಕೃಷ್ಣ ನದಿಯ ಮಳೆಗಾಲದ ಉಪನದಿಯಾದ ಭೀಮ ನದಿಯು ಕೆಲವು ಭಾಗದಲ್ಲಿ ಕೃಷಿ ನೀರಾವರಿಗೆ ಅನುಕೂಲಕರವಾಗಿದೆ. ಅದೇ ರೀತಿ ಕೇವಲ ಮಳೆಗಾಲದಲ್ಲಿ ತುಂಬಿ ಹರಿಯುವ ಕಾಗಿನ ನದಿಯ ಮೇಲ್ದಂಡೆಯೂ ಇಲ್ಲಿದೆ. ಈ ನದಿ ಪ್ರದೇಶವೆ ಮಾನ್ಯಖೇಟವಾಗಿದೆ. ಇದು ರಾಷ್ಟ್ರಕೂಟರ ರಾಜಧಾನಿಯಾಗಿದ್ದು, ಅದರ ಕುರಿತ ಅಧ್ಯಯನಗಳು ಆಗಿಲ್ಲ. ಈ ಪ್ರದೇಶದಲ್ಲಿ ಸಿಮೆಂಟ್ ತಯಾರಿಸುವ, ವಸತಿ ನೆಲೆಗಳ ನಿರ್ಮಾಣದ ಕಲ್ಲು ಮತ್ತು ಕೇವಲ ಮಳೆಗಾಲದ ಆಧಾರಿತ ಕೃಷಿಯನ್ನು ನಡೆಸಲು ಯೋಗ್ಯವಾದ ವಿಶಾಲವಾದ ಕಪ್ಪುಮಣ್ಣಿನ ಭೂ ಭಾಗವನ್ನು ಹೊರತುಪಡಿಸಿ ಇನ್ನಾವುದೇ ಬೆಲೆಬಾಳುವ ವೈವಿಧ್ಯಮಯ ಸಂಪತ್ತಿನಿಂದ ಈ ಪ್ರದೇಶವು ಕೂಡಿಲ್ಲ. ಇಂತಹ ಪರಿಸರವು ಶಿಲಾಯುಗದ ಮಾನವನ ಅಸ್ತಿತ್ವಕ್ಕೆ ಹಾಗೂ ಆತನ ಜೀವನಕ್ರಮಕ್ಕೆ ಅನುಕೂಲಕರವಾಗಿತ್ತೇ? ಅದಕ್ಕೆ ಸಂಬಂಧಿಸಿದ ಪುರಾವೆಗಳು ದೊರಕಬಹುದೆ? ಪ್ರಾಗಿತಿಹಾಸಿಕ ಕಾಲದಲ್ಲಿ ಇಲ್ಲಿಯ ಜನಜೀವನ ಎಷ್ಟರ ಮಟ್ಟಿಗೆ ಇದ್ದಿರಬಹುದು? ಇಂತಹ ಹಲವಾರು ಪ್ರಶ್ನೆಗಳು ಸಹಜವಾಗಿ ಒಳೆಯುತ್ತವೆ, ಅದರ ನಿಖರತೆಯ ಇರುವಿಕೆಯನ್ನು ಹುಡುಕಲು ಮತ್ತು ಪ್ರಸ್ತುತ ಸಂದರ್ಭದಲ್ಲಿ ಅವುಗಳ ಅರಿವು ಕಡಿಮೆಯಾಗಿರುವುದನ್ನು ಹೊರತರಲು ಈ ಪ್ರಸ್ತುತ ಅಧ್ಯಯನವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ರಾಷ್ಟ್ರಕೂಟರ ರಾಜಧಾನಿಯಾದ ಮಾನ್ಯಖೇಟದ ಈ ಪರಿಸರವು ಬಹುಮಟ್ಟಿಗೆ ಅಲ್ಲಲ್ಲಿ ಗುಡ್ಡ-ಬೆಟ್ಟಗಳಿಂದ ಮತ್ತು ಕಪ್ಪು ಮಣ್ಣಿನಿಂದ ಕೂಡಿದ ಬಹು ವಿಶಾಲವಾದ ಬಯಲು ಪ್ರದೇಶವಿದ್ದು ಮಳೆಗಾಲಕ್ಕೆ ಕೃಷಿಗೆ ಅತ್ಯಂತ ಯೋಗ್ಯವಾದ ಭೂ ಪ್ರದೇಶವನ್ನು ಹೊಂದಿದೆ. ಅಲ್ಲದೆ ಜನರ ಇರುವಿಕೆಗೂ ಅನುಕೂಲಕರವಾದ ವಿಶಾಲವಾದ ಭೂ ಪ್ರದೇಶವಿರುವುದರಿಂದ ಇಲ್ಲಿ ಪ್ರಾಗಿತಿಹಾಸ ಮತ್ತು ಇತಿಹಾಸ ಆರಂಭದ ಕಾಲದ ಪ್ರಾಚೀನ ನೆಲೆಗಳು ಮಾನ್ಯಖೇಟ ಪರಿಸರದಲ್ಲಿ ಕಂಡಬರುವುದರಿಂದ ಮಾನ್ಯಖೇಟ ಪರಿಸರದ ಇತಿಹಾಸವು ತನ್ನದೆ ಆದ ಮಹತ್ವವನ್ನು ಪಡೆದುಕೊಂಡಿದೆ.

ಇಲ್ಲಿನ ರಾಜಕೀಯ ಮತ್ತು ಸಾಂಸ್ಕೃತಿಕ ಬೆಳವಣಿಗೆಯನ್ನು ಮೌರ್ಯರು, ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು ನಂತರ ರಾಷ್ಟ್ರಕೂಟ ಆಳ್ವಿಕೆ ಕಂಡುಬರುತ್ತದೆ. ಈ ಈ ರಾಷ್ಟ್ರಕೂಟರು ಮಾನ್ಯಖೇಟವನ್ನು ರಾಜಧಾನಿಯಾಗಿ ಮಾಡಿಕೊಂಡು ಸುಮಾರು ೧೬೪ ವರ್ಷಗಳ ಕಾಲ ಆಳ್ವಿಕೆ ಮಾಡಿದ್ದಾರೆ. ದಂತಿದುರ್ಗನು ರಾಷ್ಟ್ರಕೂಟ ಸಾಮ್ರಾಜ್ಯದ ಸ್ಥಾಪಕ, ಈತನ ಪೂರ್ವಿಕರು ಬಾದಾಮಿ ಚಾಲುಕ್ಯರ ಸಾಮಂತರಾಗಿ ಚಿಕ್ಕ ಸಂಸ್ಥಾನದಲ್ಲಿ ಆಳುತ್ತಿದ್ದರು. ಕ್ರಿ.ಶ. ೭೫೩ರಲ್ಲಿ ದಂತಿದುರ್ಗನು ಬಾದಾಮಿ ಚಾಲುಕ್ಯರ ಕೊನೆಯ ಅರಸನಾದ ೨ನೇ

ಕರ್ಕಾನನ್ನು ಸೋಲಿಸಿ ಸ್ವತಂತ್ರ ಸಾಮ್ರಾಟನಾಗಿ ರಾಷ್ಟ್ರಕೂಟರ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಈ ಸಾಮ್ರಾಜ್ಯದ ಪ್ರಮುಖ ಅರಸರುಗಳು, ದಂತಿದುರ್ಗ, ೧ನೇ ಕೃಷ್ಣ, ೧ನೇ ಧ್ರುವ, ೩ನೇ ಗೋವಿಂದ, ೧ನೇ ಅಮೋಘವರ್ಷ, ೩ನೇ ಕೃಷ್ಣರು ಅರಸರಾಗಿ ಆಳ್ವಿಕೆ ಮಾಡಿದ್ದಾರೆ. ರಾಷ್ಟ್ರಕೂಟರ ಪ್ರಥಮ ರಾಜಧಾನಿ ಲಾತೂರ್, ೨ನೇ ರಾಜಧಾನಿ ಎಲ್ಲೋರ, ೩ನೇ ರಾಜಧಾನಿ ಮಾನ್ಯಖೇಟವಾಗಿತ್ತು. ಮುಖ್ಯವಾಗಿ ಅಮೋಘವರ್ಷ ನೃಪತುಂಗನು ಈ ಮನೆತನದ ಪ್ರಮುಖ ಅರಸನಾಗಿ ಕಾಣಿಸಿಕೊಂಡು ಸುಮಾರು ೫೦ ವರ್ಷಗಳ ಕಾಲ ಮಾನ್ಯಖೇಟವನ್ನು ರಾಜಧಾನಿಯಾಗಿ ಮಾಡಿಕೊಂಡು ಅಕಂಡ ಕರ್ನಾಟಕವನ್ನು ಆಳ್ವಿಕೆ ಮಾಡಿದ್ದಾನೆ. ತನ್ನ ಆಳ್ವಿಕೆಯ ಅವಧಿಯಲ್ಲಿ ರಾಜಕೀಯ ಮತ್ತು ಸಾಂಸ್ಕೃತಿಕವಾಗಿ ಅತ್ಯುತ್ತಮ ಕೊಡುಗೆಗಳನ್ನು ನೀಡುವುದರ ಮೂಲಕ ಅತ್ಯಂತ ವಿಜೃಂಭಣೆಯ ಕಾಲವಾಗಿ ಕರ್ನಾಟಕದ ಇತಿಹಾಸಕ್ಕೆ ಮಾತ್ರವಲ್ಲದೆ ಭಾರತದ ಇತಿಹಾಸದಲ್ಲು ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದ್ದಾರೆ. ಪ್ರಸ್ತುತ ಪರಿಸರದಲ್ಲಿ ಅಮೋಘವರ್ಷನ ನಂತರ ಇನ್ನೂ ಕೆಲವು ಅರಸರ ಆಳ್ವಿಕೆಯು ಕ್ರಿ.ಶ. ೯೭೩ರ ವರೆಗೆ ಕಾಣಬಹುದು.

ರಾಷ್ಟ್ರಕೂಟರ ಕೊನೆಯ ಅರಸ ೨ನೇ ಕರ್ಕಾನನ್ನು ಸೋಲಿಸಿ ೨ನೇ ತೈಲಪನು ಕಲ್ಯಾಣದ ಚಾಲುಕ್ಯರ ಮನೆತನವನ್ನು ಸ್ಥಾಪಿಸಿದನು. ಪ್ರಾರಂಭದಲ್ಲಿ ಮಾನ್ಯಖೇಟವೆ ರಾಜಧಾನಿಯಾಗಿತ್ತು. ನಂತರ ಪೆಟ್ಲಂಪೇರು, ಯಾದಗಿರಿ ಮತ್ತು ಬೀದರ್‌ನ ಕಲ್ಯಾಣಕ್ಕೆ ರಾಜಧಾನಿಯನ್ನು ವರ್ಗಾಯಿಸಿದರು. ಆದರೆ ಕಲ್ಯಾಣದ ಚಾಲುಕ್ಯರು, ತಮ್ಮ ಆಳ್ವಿಕೆಯ ಅವಧಿಯ ಕ್ರಿ.ಶ. ೧೦ನೇ ಶತಮಾನದಿಂದ ೧೨ನೇ ಶತಮಾನದವರೆಗೆ ರಾಷ್ಟ್ರಕೂಟರಂತೆ ಸಾಂಸ್ಕೃತಿಕವಾಗಿ ಮತ್ತು ರಾಜಕೀಯವಾಗಿ ಪ್ರಭಾವ ಬೀರುವಂತಹ ದೇವಾಲಯಗಳು, ಸ್ಮಾರಕ ಶಿಲ್ಪಗಳು, ಅರಮನೆ, ಕೋಟೆ, ಕೆರೆ–ಬಾವಿ ಮತ್ತು ಶಾಸನಗಳನ್ನು ರಾಜಧಾನಿ ಮಾನ್ಯಖೇಟ ಹಾಗೂ ಸುತ್ತಮುತ್ತಲಿನ ಪರಿಸರದಲ್ಲಿ ನಿರ್ಮಿಸಿದ್ದಾರೆ. ಈ ಪ್ರಸ್ತುತ ಪರಿಸರದಲ್ಲಿ ಮುಂದುವರಿದು ಕಲಚೂರಿಗಳು, ಹೈಹಯರು, ಬಹುಮನಿ ಅರಸರು, ವಿಜಯನಗರ ಅರಸರು, ಕುತುಬ್ ಷಾಹಿಗಳು, ಹೈದ್ರಾಬಾದ್ ನಿಜಾಮರು ಮತ್ತು ಬ್ರಿಟಿಷರ ಆಳ್ವಿಕೆ ಕಾಲದವರೆಗೆ ಗುರುತಿಸಬಹುದು.

ಈ ಮಾನ್ಯಖೇಟ ಪರಿಸರದಲ್ಲಿ ಕಂಡುಬರುವ ಹೆಚ್ಚಿನ ಪ್ರಮಾಣದ ದೇವಾಲಯಗಳು ಶೈವ, ವೈಷ್ಣವ ದೇವಾಲಯಗಳು, ಶಾಕ್ತ ಮತ್ತು ಇತರ ಪಂಥದ ದೇವಾಲಯಗಳು ಹಾಗೂ ಜೈನ ಧರ್ಮಕ್ಕೆ ಸಂಬಂಧಿಸಿದ ಬಸದಿಗಳಾಗಿವೆ. ಪ್ರಸ್ತುತ ಪರಿಸರದ ಹಲವು ಶಾಸನಗಳು ಮತ್ತು ದೇವಾಲಯಗಳ ಕುರಿತು ಕೆಲವು ವಿದ್ವಾಂಸರು ಅಧ್ಯಯನ ಮಾಡಿ ಇಲ್ಲಿಯ ಇತಿಹಾಸ ಮತ್ತು ಪುರಾತತ್ವ ಅವಶೇಷಗಳಿಗೆ ಸಂಬಂಧಿಸಿದಂತೆ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯನ್ನು ಹೊರತಂದಿದ್ದಾರೆ. ಇಲ್ಲಿರುವ ದೇವಾಲಯಗಳು ಹಾಗೂ ಶಾಸನಗಳು ಆಯಾ ರಾಜಮನೆತನಗಳ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಕಲಾಪರಂಪರೆಯನ್ನು ಬಿಂಬಿಸಿ ಇತಿಹಾಸದ ಪುನರ್‌ರಚನೆಗೆ ಸಹಕಾರಿಯಾಗುತ್ತವೆ.

ಪ್ರಸ್ತುತ ಗುಲ್ಬರ್ಗಾ ಜಿಲ್ಲೆಯಲ್ಲಿರುವ "ಮಾನ್ಯಖೇಟ ಪರಿಸರದ ಇತಿಹಾಸ ಮತ್ತು ಪುರಾತತ್ವ" ಎಂಬ ಶೀರ್ಷಿಕೆಯ ಅಡಿಯಲ್ಲಿ ಇಡೀ ಮಾನ್ಯಖೇಟ ಪರಿಸರದಲ್ಲಿನ ಇತಿಹಾಸ ಮತ್ತು ಪುರಾತತ್ವೀಯ ಅವಶೇಷಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿ ಅಧ್ಯಯನ ಮಾಡಲಾಗುವುದು.

### ೧.೧. ಅಧ್ಯಯನದ ಉದ್ದೇಶ

ಯಾವುದೇ ಒಂದು ಅಧ್ಯಯನವು ಒಂದು ನಿರ್ದಿಷ್ಟವಾದ ಉದ್ದೇಶ ಹಾಗೂ ಗುರಿಯನ್ನು ಹೊಂದಿರುತ್ತದೆ. ಆ ಗುರಿ ಎಂದರೆ ನಿರ್ದಿಷ್ಟಪಡಿಸಿದ ಸಮಸ್ಯೆಗೆ ಪರಿಹಾರವನ್ನು ಹುಡುಕುವುದಾಗಿದೆ. ಮಾನ್ಯಖೇಟ ಪರಿಸರದಲ್ಲಿ ಕಂಡುಬರುವ ದೇವಾಲಯಗಳು, ಕೋಟೆ-ಕೊತ್ತಲಗಳು, ಶಾಸನ, ಸ್ಮಾರಕ ಶಿಲ್ಪಗಳ ಕುರಿತು ತಳಸ್ಪರ್ಶೀಯ ಅಧ್ಯಯನ ಕೈಗೊಳ್ಳುವ ಉದ್ದೇಶದಿಂದ "ಮಾನ್ಯಖೇಟ ಪರಿಸರದ ಇತಿಹಾಸ ಮತ್ತು ಪುರಾತತ್ವ" ಎಂಬ ವಿಷಯವನ್ನು ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ.

ಮಾನ್ಯಖೇಟ ಪರಿಸರವು ಅಲ್ಲಲ್ಲಿ ಬೆಟ್ಟ-ಗುಡ್ಡ, ಹಳ್ಳ-ಕೊಳ್ಳ ವಿಶಾಲವಾದ ಫಲವತ್ತಾದ ಕಪ್ಪು ಭೂಮಿಯು ನೈಸರ್ಗಿಕವಾದ ಭೌಗೋಳಿಕ ಲಕ್ಷಣಗಳಿಂದ ಕೂಡಿದ್ದಾಗಿದೆ. ಈ ಪರಿಸರದಲ್ಲಿ ಸಣ್ಣ ಪುಟ್ಟ ಹಲವು ಸಂಸ್ಥಾನಗಳು ಆಳ್ವಿಕೆ ಮಾಡಿರುವುದನ್ನು ಕಾಣುತ್ತೇವೆ. ಇಲ್ಲಿಯ ಪ್ರಾಚೀನತೆಯನ್ನು ಪ್ರಾಗಿತಿಹಾಸ ಕಾಲಘಟ್ಟದಿಂದ ಗುರಿತಿಸುವಂತ ಕುರುಹುಗಳು ಈ ಪರಿಸರದಲ್ಲಿ ಕಂಡುಬಂದಿವೆ. ಭಾರತದ ಮೊದಲ ಅರಸು ಮನೆತನವಾದ ಮೌರ್ಯರಿಂದ ಹಿಡಿದು ಹೈದ್ರಾಬಾದ್ ನಿಜಾಮರ ಆಳ್ವಿಕೆಯವರೆಗೂ ವಿವಿಧ ಸಂತತಿಗಳು ಆಳ್ವಿಕೆ ನಡೆಸಿರುವುದನ್ನು ಗುರುತಿಸಬಹುದು. ಬಹುಮುಖ್ಯವಾಗಿ ಮಾನ್ಯಖೇಟ ಪರಿಸರವು ರಾಷ್ಟ್ರಕೂಟರ ಆಳ್ವಿಕೆಯ ರಾಜಧಾನಿಯಾಗಿ ಗುರುತಿಸಿಕೊಂಡಿದೆ. ಸುಮಾರು ೨೨೦ ವರ್ಷಗಳ ಕಾಲ ಅವರ ಆಳ್ವಿಕೆಗೆ ಒಳಪಟ್ಟಿದೆ. ಇದರಿಂದ ಈ ಪರಿಸರದಲ್ಲಿ ಬಹುಸಂಖ್ಯೆ ಅವಶೇಷಗಳು ಇವರ ಕಾಲಘಟ್ಟಕ್ಕೆ ಸೇರಿದವುಗಳಾಗಿವೆ. ರಾಜಧಾನಿ ಪ್ರದೇಶಗಳಾಗಿ ಮೆರೆದ ಬನವಾಸಿ, ಬಾದಾಮಿ, ದ್ವಾರಸಮುದ್ರ ಮತ್ತು ಹಂಪಿ ಪ್ರದೇಶಗಳ ಕುರಿತಂತೆ ಇತಿಹಾಸ ಮತ್ತು ಪುರಾತತ್ವದ ನೆಲೆಯಲ್ಲಿ ವಿದ್ವಾಂಸರಿಂದ ಅಧ್ಯಯನಗಳು ನಡೆದಿವೆ. ಆದರೆ ರಾಷ್ಟ್ರಕೂಟರ ರಾಜಧಾನಿಯಾದ ಮಾನ್ಯಖೇಟ ಪರಿಸರದಲ್ಲಿ ಕಂಡುಬರುವ ದೇವಾಲಯಗಳು, ಅರಮನೆ, ಶಾಸನ, ಸ್ಮರಣಶಿಲ್ಪಗಳು ಮತ್ತು ಕೆರೆ-ಬಾವಿಗಳ ಕುರಿತಾಗಿ ಅಧ್ಯಯನಗಳು ಅಷ್ಟಾಗಿ ನಡೆದಿರುವುದು ಕಂಡುಬರುವುದಿಲ್ಲ.

ಕೆಲವು ವಿದ್ವಾಂಸರು ಅಲ್ಲಲ್ಲಿ ಬಿಡಿ ಲೇಖನಗಳ ಮೂಲಕ ಮಾನ್ಯಖೇಟ ಪರಿಸರದ ಚರಿತ್ರೆಯನ್ನು ಹೊರತರುವ ಪ್ರಯತ್ನ ಮಾಡಿದ್ದಾರೆ. ಆದರೆ ಇವರ ಅಧ್ಯಯನಗಳಿಂದ ಈ ಪರಿಸರದ ಚರಿತ್ರೆಯನ್ನು ಇಡಿಯಾಗಿ ನೋಡುವುದು ಅಸಾಧ್ಯವೆನಿಸುತ್ತದೆ. ಈ ಹಿನ್ನೆಲೆಯಲ್ಲಿ ಮಾನ್ಯಖೇಟದಲ್ಲಿ ಕಂಡುಬರುವ ಅವಶೇಷಗಳ ಕುರಿತು ಒಂದು ಇಡಿಯಾದ ಚರಿತ್ರೆಯನ್ನು ಕಟ್ಟಿಕೊಡುವ ಉದ್ದೇಶದಿಂದ ಪ್ರಸ್ತುತ ಅಧ್ಯಯನಕ್ಕೆ "ಮಾನ್ಯಖೇಟ ಪರಿಸರದ ಇತಿಹಾಸ ಮತ್ತು ಪುರಾತತ್ವ" ಎಂಬ ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

## ೧.೨. ಅಧ್ಯಯನದ ವ್ಯಾಪ್ತಿ

ಒಂದು ಅಧ್ಯಯನ ಇಲ್ಲವೆ ಸಂಶೋಧನೆ ಯಶಸ್ವಿಯಾಗಬೇಕೆಂದರೆ ಅದಕ್ಕೊಂದು ನಿರ್ದಿಷ್ಟ ಚೌಕಟ್ಟು ಇಲ್ಲವೆ ವ್ಯಾಪ್ತಿ ಇರಬೇಕಾಗುತ್ತದೆ. ಏಕೆಂದರೆ ನಿರ್ದಿಷ್ಟ ವ್ಯಾಪ್ತಿ ಇಲ್ಲದ ಅಧ್ಯಯನವು ಗೊಂದಲಮಯವಾಗಿ ಸಂಶೋಧನ ಮಿತಿಯನ್ನು ತೀವ್ರಗೊಳಿಸಿ ಅದರ ಹಾದಿಯನ್ನು ತಪ್ಪಿಸುತ್ತದೆ. ಪ್ರಸ್ತುತ ಅಧ್ಯಯನವು ಭೌಗೋಳಿಕವಾಗಿ ಮಾನ್ಯಖೇಟ ಪರಿಸರದಲ್ಲಿ ಬರುವ ಸುಮಾರು ೨೫ ಹಳ್ಳಿಗಳಿಗೆ ಸೀಮಿತಗೊಂಡರು ನೆರೆಹೊರೆಯ ಇತರ ಹಳ್ಳಿಗಳನ್ನು ಆಂಶಿಕವಾಗಿ ಆಯಾಯ ವಿಷಯದ ಸಂದರ್ಭಗಳಲ್ಲಿ ಬಳಸಿಕೊಳ್ಳಲಾಗುವುದು. ಕಾಲಾವಧಿ ಹಿನ್ನೆಲೆಯಲ್ಲಿ ಪ್ರಾಗಿತಿಹಾಸ ಕಾಲಘಟ್ಟದಿಂದ ಕ್ರಿ.ಶ. ೧೨ನೆಯ ಶತಮಾನದ ಅವಧಿವರೆಗಿನ ಕಾಲಾಮಿತಿಯನ್ನು ನಿಗದಿಪಡಿಸಿಕೊಳ್ಳಲಾಗಿದೆ. ಮಾನ್ಯಖೇಟ ಪರಿಸರದ ೨೫ ಹಳ್ಳಿಗಳಲ್ಲಿ ಕಂಡುಬರುವ ದೇವಾಲಯ, ಕೋಟೆ, ಅರಮನೆ, ಶಾಸನ ಮತ್ತು ಸ್ಮರಣ ಶಿಲ್ಪಗಳನ್ನು ಅಧ್ಯಯನಕ್ಕೆ ಒಳಪಡಿಸಿ ಈ ಪರಿಸರದ ಅವಶೇಷಗಳ ವಾಸ್ತುವಿನ್ಯಾಸ, ತಂತ್ರಗಾರಿಕೆ ಇತ್ಯಾದಿ ಅಂಶಗಳ ಕುರಿತಾಗಿ ಅವುಗಳ ಮಹತ್ವವನ್ನು ವಿಶ್ಲೇಷಣೆಗೆ ಒಳಪಡಿಸಲಾಗುವುದು.

## ೧.೩. ಅಧ್ಯಯನದ ವಿಧಾನ

ಒಂದು ಕಾರ್ಯ ಯಶಸ್ವಿಯಾಗಬೇಕಾದರೆ ಕ್ರಮಬದ್ಧತೆ ಅತಿಮುಖ್ಯ. ಹಾಗಾಗಿ ಸಂಶೋಧನ ಕಾರ್ಯಕ್ಕೂ ವ್ಯವಸ್ಥಿತ ಅಧ್ಯಯನ ಬಹಳ ಅವಶ್ಯವಾದದ್ದು. ಅಧ್ಯಯನವನ್ನು ವೈಜ್ಞಾನಿಕವಾಗಿ ಕ್ಷೇತ್ರಕಾರ್ಯವನ್ನು ಕೈಗೊಂಡು ಪೂರೈಸಲಾಗುವುದು. ಸಂಶೋಧನೆಗಾಗಿ "ಮಾನ್ಯಖೇಟ ಪರಿಸರದ ಇತಿಹಾಸ ಮತ್ತು ಪುರಾತತ್ವ" ಎನ್ನುವ ವಿಷಯವನ್ನು ಆಯ್ದುಕೊಂಡು ಸರಕಾರಿ ಕಚೇರಿಗಳಿಂದ ನಕಾಶೆ ಮತ್ತು ಇತರೆ ಮಾಹಿತಿಯನ್ನು ಪಡೆದು, ಸ್ಮಾರಕ, ದೇವಾಲಯ, ಮೂರ್ತಿಶಿಲ್ಪ, ಶಾಸನ ಇತ್ಯಾದಿ ವಿವರ ಸಂಗ್ರಹಿಸಿಕೊಂಡು ಈವರೆಗಿನ ಅಧ್ಯಯನಗಳನ್ನು ಗಮನಿಸಿ ಅಧ್ಯಯನ ಮಾಡಲಾಗುವುದು. ಅಲ್ಲದೆ ಅವುಗಳ ಛಾಯಾಚಿತ್ರಗಳನ್ನು ತೆಗೆದುಕೊಳ್ಳುವುದರ ಜೊತೆಗೆ ಅಗತ್ಯ ನಕ್ಷೆಗಳನ್ನು ರಚಿಸಿಕೊಳ್ಳಲಾಗುವುದು. ಮಾನ್ಯಖೇಟ ಪರಿಸರದಲ್ಲಿ ಇರುವಂತಹ ಪ್ರಾಗಿತಿಹಾಸ ಕಾಲದಿಂದ ಆರಂಭಿಸಿ ಮಧ್ಯಯುಗೀನ ಕಾಲದವರೆಗೆ (ಕ್ರಿ.ಶ. ೧೨–೧೩ನೇ ಶತಮಾನ) ಮಾನವನ ವಾಸದ ನೆಲೆಗಳು ಮತ್ತು ಕುರುಹುಗಳನ್ನು ದಾಖಲಿಸಿ ವಿಶ್ಲೇಷಿಸಲಾಗುವುದು. ಹೀಗೆ ಮಾನ್ಯಖೇಟ ಪರಿಸರದ ಭೌಗೋಳಿಕ, ಪುರಾತತ್ವೀಯ, ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಕ್ಷೇತ್ರಕಾರ್ಯ ಮೂಲಕ ದಾಖಲಿಸಿಕೊಳ್ಳುವುದು. ಕ್ಷೇತ್ರಕಾರ್ಯದ ಮಾಹಿತಿಯಿಂದ ಸಂಶೋಧನೆಗೆ ಪ್ರಾಥಮಿಕ ಆಕರ ಸಂಗ್ರಹ ಮಾಡಿ ಇದಕ್ಕೆ ಪೂರಕವಾಗಿ ಆನುಷಂಗಿಕ ಆಕರಗಳನ್ನು ಸಂಗ್ರಹಿಸಿ ವಿಮರ್ಶೆಗೆ ಒಳಪಡಿಸಿ ವಿಶ್ಲೇಷಿಸಿ ಪ್ರಬಂಧವನ್ನು ರಚಿಸಲಾಗುವುದು.

## ೧.೪ ಅಧ್ಯಯನದ ಸ್ವರೂಪ

ಪ್ರಸ್ತುತ ಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಆರು ಅಧ್ಯಾಯಗಳಾಗಿ ವಿಭಾಗಿಸಿಕೊಳ್ಳಲಾಗಿದೆ.

## ೧.೨. ಅಧ್ಯಯನದ ವ್ಯಾಪ್ತಿ

ಒಂದು ಅಧ್ಯಯನ ಇಲ್ಲವೆ ಸಂಶೋಧನೆ ಯಶಸ್ವಿಯಾಗಬೇಕೆಂದರೆ ಅದಕ್ಕೊಂದು ನಿರ್ದಿಷ್ಟ ಚೌಕಟ್ಟು ಇಲ್ಲವೆ ವ್ಯಾಪ್ತಿ ಇರಬೇಕಾಗುತ್ತದೆ. ಏಕೆಂದರೆ ನಿರ್ದಿಷ್ಟ ವ್ಯಾಪ್ತಿ ಇಲ್ಲದ ಅಧ್ಯಯನವು ಗೊಂದಲಮಯವಾಗಿ ಸಂಶೋಧನ ಮಿತಿಯನ್ನು ತೀವ್ರಗೊಳಿಸಿ ಅದರ ಹಾದಿಯನ್ನು ತಪ್ಪಿಸುತ್ತದೆ. ಪ್ರಸ್ತುತ ಅಧ್ಯಯನವು ಭೌಗೋಳಿಕವಾಗಿ ಮಾನ್ಯಖೇಟ ಪರಿಸರದಲ್ಲಿ ಬರುವ ಸುಮಾರು ೨೫ ಹಳ್ಳಿಗಳಿಗೆ ಸೀಮಿತಗೊಂಡರು ನೆರೆಹೊರೆಯ ಇತರ ಹಳ್ಳಿಗಳನ್ನು ಆಂಶಿಕವಾಗಿ ಆಯಾಯ ವಿಷಯದ ಸಂದರ್ಭಗಳಲ್ಲಿ ಬಳಸಿಕೊಳ್ಳಲಾಗುವುದು. ಕಾಲಾವಧಿ ಹಿನ್ನೆಲೆಯಲ್ಲಿ ಪ್ರಾಗಿತಿಹಾಸ ಕಾಲಘಟ್ಟದಿಂದ ಕ್ರಿ.ಶ. ೧೨ನೆಯ ಶತಮಾನದ ಅವಧಿವರೆಗಿನ ಕಾಲಾಮಿತಿಯನ್ನು ನಿಗದಿಪಡಿಸಿಕೊಳ್ಳಲಾಗಿದೆ. ಮಾನ್ಯಖೇಟ ಪರಿಸರದ ೨೫ ಹಳ್ಳಿಗಳಲ್ಲಿ ಕಂಡುಬರುವ ದೇವಾಲಯ, ಕೋಟೆ, ಅರಮನೆ, ಶಾಸನ ಮತ್ತು ಸ್ಮರಣ ಶಿಲ್ಪಗಳನ್ನು ಅಧ್ಯಯನಕ್ಕೆ ಒಳಪಡಿಸಿ ಈ ಪರಿಸರದ ಅವಶೇಷಗಳ ವಾಸ್ತುವಿನ್ಯಾಸ, ತಂತ್ರಗಾರಿಕೆ ಇತ್ಯಾದಿ ಅಂಶಗಳ ಕುರಿತಾಗಿ ಅವುಗಳ ಮಹತ್ವವನ್ನು ವಿಶ್ಲೇಷಣೆಗೆ ಒಳಪಡಿಸಲಾಗುವುದು.

## ೧.೩. ಅಧ್ಯಯನದ ವಿಧಾನ

ಒಂದು ಕಾರ್ಯ ಯಶಸ್ವಿಯಾಗಬೇಕಾದರೆ ಕ್ರಮಬದ್ಧತೆ ಅತಿಮುಖ್ಯ. ಹಾಗಾಗಿ ಸಂಶೋಧನ ಕಾರ್ಯಕ್ಕೂ ವ್ಯವಸ್ಥಿತ ಅಧ್ಯಯನ ಬಹಳ ಅವಶ್ಯವಾದದ್ದು. ಅಧ್ಯಯನವನ್ನು ವೈಜ್ಞಾನಿಕವಾಗಿ ಕ್ಷೇತ್ರಕಾರ್ಯವನ್ನು ಕೈಗೊಂಡು ಪೂರೈಸಲಾಗುವುದು. ಸಂಶೋಧನೆಗಾಗಿ "ಮಾನ್ಯಖೇಟ ಪರಿಸರದ ಇತಿಹಾಸ ಮತ್ತು ಪುರಾತತ್ವ" ಎನ್ನುವ ವಿಷಯವನ್ನು ಆಯ್ದುಕೊಂಡು ಸರಕಾರಿ ಕಚೇರಿಗಳಿಂದ ನಕಾಶೆ ಮತ್ತು ಇತರೆ ಮಾಹಿತಿಯನ್ನು ಪಡೆದು, ಸ್ಮಾರಕ, ದೇವಾಲಯ, ಮೂರ್ತಿಶಿಲ್ಪ, ಶಾಸನ ಇತ್ಯಾದಿ ವಿವರ ಸಂಗ್ರಹಿಸಿಕೊಂಡು ಈವರೆಗಿನ ಅಧ್ಯಯನಗಳನ್ನು ಗಮನಿಸಿ ಅಧ್ಯಯನ ಮಾಡಲಾಗುವುದು. ಅಲ್ಲದೆ ಅವುಗಳ ಛಾಯಾಚಿತ್ರಗಳನ್ನು ತೆಗೆದುಕೊಳ್ಳುವುದರ ಜೊತೆಗೆ ಅಗತ್ಯ ನಕ್ಷೆಗಳನ್ನು ರಚಿಸಿಕೊಳ್ಳಲಾಗುವುದು. ಮಾನ್ಯಖೇಟ ಪರಿಸರದಲ್ಲಿ ಇರುವಂತಹ ಪ್ರಾಗಿತಿಹಾಸ ಕಾಲದಿಂದ ಆರಂಭಿಸಿ ಮಧ್ಯಯುಗೀನ ಕಾಲದವರೆಗೆ (ಕ್ರಿ.ಶ. ೧೨-೧೩ನೇ ಶತಮಾನ) ಮಾನವನ ವಾಸದ ನೆಲೆಗಳು ಮತ್ತು ಕುರುಹುಗಳನ್ನು ದಾಖಲಿಸಿ ವಿಶ್ಲೇಷಿಸಲಾಗುವುದು. ಹೀಗೆ ಮಾನ್ಯಖೇಟ ಪರಿಸರದ ಭೌಗೋಳಿಕ, ಪುರಾತತ್ವೀಯ, ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಕ್ಷೇತ್ರಕಾರ್ಯ ಮೂಲಕ ದಾಖಲಿಸಿಕೊಳ್ಳುವುದು. ಕ್ಷೇತ್ರಕಾರ್ಯದ ಮಾಹಿತಿಯಿಂದ ಸಂಶೋಧನೆಗೆ ಪ್ರಾಥಮಿಕ ಆಕರ ಸಂಗ್ರಹ ಮಾಡಿ ಇದಕ್ಕೆ ಪೂರಕವಾಗಿ ಆನುಷಂಗಿಕ ಆಕರಗಳನ್ನು ಸಂಗ್ರಹಿಸಿ ವಿಮರ್ಶೆಗೆ ಒಳಪಡಿಸಿ ವಿಶ್ಲೇಷಿಸಿ ಪ್ರಬಂಧವನ್ನು ರಚಿಸಲಾಗುವುದು.

## ೧.೪ ಅಧ್ಯಯನದ ಸ್ವರೂಪ

ಪ್ರಸ್ತುತ ಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಆರು ಅಧ್ಯಾಯಗಳಾಗಿ ವಿಭಾಗಿಸಿಕೊಳ್ಳಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾವನೆ, ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪ ಹಾಗೂ ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆಗಳನ್ನು ಒಳಗೊಂಡಿದ್ದು ಅಧ್ಯಯನದ ಒಟ್ಟು ರೂಪರೇಷೆಯನ್ನು ಕುರಿತು ಚರ್ಚಿಸಲಾಗಿದೆ.

ಎರಡನೆಯ ಅಧ್ಯಾದಲ್ಲಿ ಭೌಗೋಳಿಕ ಪರಿಸರ ಮತ್ತು ಚಾರಿತ್ರಿಕ ಹಿನ್ನೆಲೆ ಐತಿಹಾಸಿಕ ಸ್ಥಳನಾಮ ಮತ್ತು ಪ್ರಾಗಿತಿಹಾಸವನ್ನು ಕುರಿತು ವಿಶ್ಲೇಷಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ದೇವಾಲಯಗಳು ಹಾಗೂ ಮೂರ್ತಿಶಿಲ್ಪಗಳ ಕುರಿತಾಗಿದ್ದು ವಾಸ್ತುಶಿಲ್ಪ ಭಾಗದಲ್ಲಿ ದೇವಾಲಯದ ಉಗಮ, ವಿಕಾಸದ ಬಗ್ಗೆ ಮತ್ತು ಇಲ್ಲಿಯ ಶೈವ, ವೈಷ್ಣವ ಹಾಗೂ ಶಾಕ್ತ ಮತ್ತು ಇತರೆ ಪಂಥದ ದೇವಾಲಯಗಳು ಎಂದು ವಿಂಗಡಿಸಿಕೊಂಡು ದೇವಾಲಯ ವಾಸ್ತು ಲಕ್ಷಣಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಉದಾಹರಣೆಗೆ: ಲೋಕೇಶ್ವರ, ನೀಲಕಂಠ ಕಾಳೇಶ್ವರ, ಶಂಕರಲಿಂಗ, ಶಂಭುಲಿಂಗೇಶ್ವರ, ಅನಂತಶಯನಗುಡಿ, ಮಲ್ಲಿಕಾರ್ಜುನ ದೇವಾಲಯಗಳು.

ನಾಲ್ಕನೆಯ ಅಧ್ಯಾಯದಲ್ಲಿ ಶಾಸನಗಳು ಮತ್ತು ಸ್ಮಾರಕಶಿಲ್ಪಗಳ ಕುರಿತು ಅಧ್ಯಯನ ಮಾಡಲಾಗುವುದು. ಮಾನ್ಯಖೇಟ ಪರಿಸರದಲ್ಲಿ ಇದುವರೆಗೂ ಪತ್ತೆ ಹಚ್ಚಲಾದ ಶಾಸನಗಳು ಮತ್ತು ಅಧ್ಯಯನದಲ್ಲಿ ಕಂಡುಬರುವ ನೂತನ ಶಾಸನಗಳನ್ನು ಗುರುತಿಸಿ ಆ ಶಾಸನಗಳ ಪಾಠದ ಸಹಾಯದಿಂದ ಅವುಗಳ ಸಾರಾಂಶವನ್ನು ವಿಶ್ಲೇಷಿಸಲಾಗಿದೆ. ಹಾಗೂ ಶಾಸನ ಪ್ರಕಾರಗಳಲ್ಲಿ ಒಂದಾದ ಶಾಸನ ಸ್ಮಾರಕ ಶಿಲ್ಪಗಳನ್ನು ಅವುಗಳ ಪ್ರಕಾರಗಳಾದ ವೀರಗಲ್ಲು, ಮಾಸ್ತಿಗಲ್ಲು, ವೀರಮಾಸ್ತಿಗಲ್ಲು ಮತ್ತು ನಿಷಿಧಿಗಲ್ಲುಗಳನ್ನು ಅಧ್ಯಯನ ಕ್ಷೇತ್ರದಲ್ಲಿ ಕಂಡುಬರುವ ಸ್ಮಾರಕಶಿಲ್ಪಗಳ ಸಹಾಯದಿಂದ ವಿವರಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶಿಕ್ಷಣ ಮತ್ತು ಸಾಹಿತ್ಯವನ್ನು ಕುರಿತು ಪ್ರಸ್ತುತವಾಗಿ ಮಾನ್ಯಖೇಟ ಪರಿಸರದಲ್ಲಿರುವ ಸಾಮಾಜಿಕ ವ್ಯವಸ್ಥೆ ಧಾರ್ಮಿಕ ಸ್ಥಿತಿಗತಿ ಪ್ರಸ್ತುತ ಶಿಕ್ಷಣದ ಮಟ್ಟವನ್ನು ಹಾಗೂ ಸಾಹಿತ್ಯವನ್ನು ಕುರಿತು ಚರ್ಚಿಸಲಾಗುವುದು.

ಆರನೆಯ ಅಧ್ಯಾಯವು ಸಮಾರೋಪವಾಗಿದ್ದು ಇದು ಇಡೀ ಅಧ್ಯಯನದಲ್ಲಿ ಕಂಡುಕೊಂಡ ಒಟ್ಟಾರೆ ಸಂಶೋಧನೆಯ ಫಲಿತಾಂಶಗಳನ್ನು ನೀಡಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಂಡ ಕೃತಿ, ಲೇಖನ, ಶಾಸನ ಸಂಪುಟ, ಅಪ್ರಕಟಿತ ಸಂಶೋಧನ, ಪ್ರೌಢ ಪ್ರಬಂಧ ಮುಂತಾದ ವಿವರಗಳನ್ನು ಗ್ರಂಥಋಣದಲ್ಲಿ ನೀಡಲಾಗುವುದು. ಅಧ್ಯಯನಕ್ಕೆ ಸಂಬಂಧಿಸಿದಂತೆ ಛಾಯಾಚಿತ್ರಗಳು, ಅಗತ್ಯ ನಕ್ಷೆಗಳನ್ನು ಅನುಬಂಧದಲ್ಲಿ ಸೇರಿಸಲಾಗಿದೆ.

### ೧.೫ ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆ

ಮಾನ್ಯಖೇಟ ಪರಿಸರಕ್ಕೆ ಸಂಬಂಧಿಸಿದಂತೆ ಇದುವರೆಗೆ ಕೆಲವು ಪರಿಚಯಾತ್ಮಕ ಕೃತಿ, ಬಿಡಿ ಲೇಖನ, ಎಂ.ಫಿಲ್. ಮತ್ತು ಪಿಎಚ್.ಡಿ. ಮಹಾಪ್ರಬಂಧಗಳು ಅಧ್ಯಯನಕ್ಕೆ ಪೂರಕವಾಗಿ

ಹೊರಬಂದಿವೆ. ಮತ್ತು ಗುಲ್ಬರ್ಗಾ ಜಿಲ್ಲಾ ಗ್ಯಾಜಿಟಿಯರ್ ಹಾಗೂ ಗುಲ್ಬರ್ಗಾ ಜಿಲ್ಲಾ ದರ್ಶನ, ಸೇಡಂ ತಾಲೂಕಿನ ದರ್ಶನವನ್ನು ಪ್ರಸ್ತುತ ಅಧ್ಯಯನಕ್ಕೆ ಪ್ರಮುಖ ಆಕರವನ್ನಾಗಿ ಬಳಸಿಕೊಳ್ಳಲಾಗಿದೆ.

ಈ ಮಾನ್ಯಖೇಟ ಪರಿಸರದಲ್ಲಿ ಈವರೆಗೆ ಕೆಲವು ವಿದ್ವಾಂಸರು ಪುರಾತತ್ವ ಸಂಶೋಧನ ಕಾರ್ಯಗಳನ್ನು ಮಾಡಿದ್ದಾರೆ. ಅವುಗಳು ಈ ಕೆಳಗಿನಂತಿವೆ.

ಆರ್. ಗೋಪಾಲ್ ಅವರ "ಗುಲ್ಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ" ಎಂಬ ಸಂಪಾದಿತ ಕೃತಿಯಲ್ಲಿ ಮಾನ್ಯಖೇಟ ಪರಿಸರದ ಪ್ರಾಗಿತಿಹಾಸಕ್ಕೆ ಸಂಬಂಧಿಸಿದ ಲೇಖನಗಳನ್ನು ಒಳಗೊಂಡಿವೆ. ಡಿ.ಎನ್. ಅಕ್ಕಿ ಅವರ ಕೃತಿಯಲ್ಲಿ ಸೇಡಂ ತಾಲೂಕಿನ ಜೈನ ಶಾಸನಗಳು, ಬಸದಿಗಳ ಬಗ್ಗೆ ವಿವರಿಸಿದ್ದಾರೆ. ಶ್ರೀಶೈಲ ಬಿರಾದಾರ ಅವರ "ಸೇಡಂ ಒಂದು ಸಾಂಸ್ಕೃತಿಕ ಅವಲೋಕನ" ಕೃತಿಯಲ್ಲಿ ಮಾನ್ಯಖೇಟ ಪರಿಸರದ ಪಂಚಲಿಂಗೇಶ್ವರ, ಶಾಂತಿನಾತ ಬಸದಿ ಮತ್ತು ಮಾಣಿಕೇಶ್ವರ ಗುಡಿಯ ಮುಂದಿರುವ ಬಾಣತಿ ಕಂಬದ ಬಗ್ಗೆ ಪೂರಕ ಮಾಹಿತಿ ನೀಡುತ್ತದೆ. ಎಂ.ಎಂ. ಪಾಟೀಲ ಅವರ "ಚಿತ್ತಾಪೂರ ತಾಲೂಕಿನ ಇತಿಹಾಸ" ಕೃತಿಯಲ್ಲಿ ಕೊಲ್ಲೂರಿನ ದೇವಾಲಯವನ್ನು ಪರಿಚಯಿಸಿದೆ. ಎಚ್. ತಿಪ್ಪೇರುದ್ರಸ್ವಾಮಿ ಅವರ "ಕರ್ನಾಟಕ ಸಂಸ್ಕೃತಿ ಸಮೀಕ್ಷೆ" ಗ್ರಂಥವು ಮಾನ್ಯಖೇಟ ಪರಿಸರದ ನಾಗಾವಿ ಘಟಿಕಾಸ್ಥಾನದ ಬಗ್ಗೆ ತಿಳಿಸುತ್ತದೆ.

ಮೂಡಬಿ ಗುಂಡೇರಾವ್ ಅವರ "ಸೇಡಂ ತಾಲೂಕು ದರ್ಶನ"ದಲ್ಲಿ ಕಲ್ಯಾಣ ಚಾಲುಕ್ಯರು ಬರೆಸಿದಂತಹ ಶಾಸನಗಳು ಹಾಗೂ ನಿರ್ಮಿಸಿದಂತಹ ದೇವಾಲಯಗಳ ಪರಿಚಯವಿದೆ. ಮತ್ತು ಸೇಡಂ ತಾಲೂಕಿನ ಮಾಹಿತಿಯನ್ನು ವಿವರಿಸಲಾಗಿದೆ. ಎಂ. ಚಿದಾನಂದಮೂರ್ತಿ ಅವರ "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಕೃತಿಯಲ್ಲಿ ಮಾನ್ಯಖೇಟ ಪರಿಸರದ ನಾಗಾವಿ ಘಟಿಕಾಸ್ಥಾನದ ಕುರಿತಿದೆ. "ಚಿಣ್ಣರ ಜಿಲ್ಲಾ ದರ್ಶನ ಗುಲ್ಬರ್ಗಾ ಜಿಲ್ಲೆ" ಕೃತಿಯಲ್ಲಿ ನಾಗಾವಿ, ಕಾಳಗಿ, ಸೇಡಂ, ಹಂದರಕಿ ಗ್ರಾಮಗಳಲ್ಲಿನ ದೇವಾಲಯಗಳನ್ನು ಪರಿಚಯಿಸಿದೆ. "ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ, ಪ್ರೊವಿನ್ಸಿಯಲ್ ಸಿರೀಸ್ ಹೈದ್ರಾಬಾದ ಸ್ಟೇಟ್" ಕೃತಿಯಲ್ಲಿ ಈ ಭಾಗದ ಪ್ರಾಚೀನ ಅವಶೇಷಗಳನ್ನು ಉಲ್ಲೇಖಿಸುವುದರಿಂದ ಪ್ರಸ್ತುತ ಅಧ್ಯಯನದ ಪ್ರಾಗಿತಿಹಾಸಿಕ ನೆಲೆಗಳನ್ನು ಗುರುತಿಸಿದೆ. ಆದ್ದರಿಂದ ಅಧ್ಯಯನಕ್ಕೆ ಪೂರಕವಾಗಿದೆ. ಕೆ.ಬಿ. ಶಿವತಾರಕ ಅವರ "ಕರ್ನಾಟಕದ ಪುರಾತತ್ವ ನೆಲೆಗಳು" ಕೃತಿಯಲ್ಲಿ ಗುಲ್ಬರ್ಗಾದ ಮತ್ತು ಅದರಲ್ಲಿ ಪ್ರಸ್ತುತ ಅಧ್ಯಯನವಾದ ಮಾನ್ಯಖೇಟ ಪರಿಸರದ ಹಳೇಶಿಲಾಯುಗದ ನೆಲೆಗಳು, ಬೃಹತ್‌ಶಿಲಾಯುಗದ ನೆಲೆಗಳು, ಇತಿಹಾಸ ಆರಂಭಯುಗದ ನೆಲೆಗಳಲ್ಲಿ ದೊರೆತ ಅವಶೇಷಗಳ ಕುರಿತು ಈ ಕೃತಿಯಲ್ಲಿ ಚರ್ಚಿಸಲಾಗಿದೆ. ಉದಾ. ಕೊಲ್ಲೂರು, ಆದಿ ಹಳೇಶಿಲಾಯುಗದ ನೆಲೆಯೆಂದು, ಸನ್ನತಿ ಆದಿ ಹಳೇಶಿಲಾಯುಗ, ಮಧ್ಯಶಿಲಾಯುಗ ಮತ್ತು ಇತಿಹಾಸದ ಆರಂಭಯುಗದ ನೆಲೆಯೆಂದು ಗುರುತಿಸಿದೆ.

ವಿ. ಶಿವಾನಂದ ಅವರ "ಕಲಬುರಗಿ ಜಿಲ್ಲೆಯ ಶಿಲಾಶಾಸನಗಳು" ಎಂಬ ಕೃತಿಯಲ್ಲಿ ದಿಗ್ಗಾವಿ, ನಾಗಾವಿ, ಹಂದರಕಿ, ಸೇಡಂ ಮತ್ತು ತೇಂಗಳಿಯ ಶಾಸನಗಳು ಹಾಗೂ ಪ್ರಾಚೀನ ಕಾಲದ ಈ ಪರಿಸರದಲ್ಲಿನ ಆಡಳಿತ ಪದ್ಧತಿಯ ಮಾಹಿತಿಯನ್ನು ನೀಡುವುದರಿಂದ ಪ್ರಸ್ತುತ ಅಧ್ಯಯನಕ್ಕೆ ಪೂರಕ ಮಾಹಿತಿ ನೀಡುತ್ತದೆ.

ಮಹದೇವ ಸಿ., ವಾಸುದೇವ ಬಡಿಗೇರ ಮತ್ತು ರಮೇಶನಾಯಕ (೨೦೧೬) "ಕರ್ನಾಟಕ ದೇವಾಲಯ ಕೋಶ– ಕಲಬುರಗಿ ಜಿಲ್ಲೆ" ಕೃತಿಯು ಕಲಬುರಗಿ ಜಿಲ್ಲೆಯ ಎಲ್ಲಾ ತಾಲೂಕುಗಳ ಸಣ್ಣ ಪುಟ್ಟ ದೇವಾಲಯಗಳನ್ನು ಕೂಡ ಶೋಧಿಸಿ ದಾಖಲಿಸಿ ಅವುಗಳ ವೈಶಿಷ್ಟ್ಯತೆಯನ್ನು ಸಂಕ್ಷಿಪ್ತ ರೂಪದಲ್ಲಿ ನೀಡುತ್ತದೆ. ವಿಶೇಷವಾಗಿ ಈ ಕೃತಿಯು ಮಾನ್ಯಖೇಟ ಪರಿಸರದಲ್ಲಿನ ರಾಷ್ಟ್ರಕೂಟರ ಮತ್ತು ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಅವಧಿಯಲ್ಲಿ ನಿರ್ಮಾಣವಾದ ದೇವಾಲಯಗಳು, ಶಾಸನಗಳು, ಸ್ಮಾರಕಶಿಲ್ಪ, ಕೋಟೆ ಮತ್ತು ಇನ್ನಿತರ ವಿಷಯವನ್ನು ಸವಿವರವಾಗಿ ಚರ್ಚಿಸಿರುವುದರಿಂದ ಪ್ರಸ್ತುತ ಅಧ್ಯಯನಕ್ಕೆ ಪೂರಕವಾದ ಕೃತಿಯಾಗಿದೆ. ಆರ್. ಗೋಪಾಲ್ ಅವರ 'ಗುಲ್ಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ' ಎಂಬ ಸಂಪಾದಿತ ಕೃತಿಯಲ್ಲಿ ಚಿತ್ತಾಪೂರ ತಾಲೂಕಿನ ಐತಿಹಾಸಿಕ ದೇವಾಲಯಗಳ ಇಂದಿನ ಸ್ಥಿತಿ ಮತ್ತು ಸೇಡಂ ತಾಲೂಕಿನ ಐತಿಹಾಸಿಕ ಸ್ಮಾರಕಗಳ ಕುರಿತು ಹಾಗೂ ಸೇಡಂ ಜೈನ ಸ್ಮಾರಕ ನೆಲೆವೀಡು ಎಂಬ ಅಂಶಗಳಿಗೆ ಸಂಬಂಧಿಸಿದ ಲೇಖನಗಳು ಒಳಗೊಂಡಿದೆ.

ಕೂ.ಸ. ಅಪರ್ಣರವರ (೧೯೯೯) "ದೇವಾಲಯ ವಾಸ್ತುಶಿಲ್ಪ ಪರಿಚಯ" ಕೃತಿಯು ಸಾಮಾನ್ಯ ಜನಕ್ಕೆ ತಿಳಿಯುವಂತೆ ದೇವಾಲಯ ಮತ್ತು ಅದರ ಭಾಗಗಳನ್ನು ಪರಿಚಯಿಸುವುದೇ ಈ ಗ್ರಂಥದ ಉದ್ದೇಶ, ದೇವಾಲಯ ಹೊರರಚನೆ ಮತ್ತು ಒಳರಚನೆಯನ್ನು ಹಾಗೂ ಕಂಬ ಮುಂತಾದ ಅಲಂಕಾರ ಭಾಗಗಳನ್ನು ಅವುಗಳ ರೀತಿಗಳನ್ನು ಇದರಲ್ಲಿ ಹೇಳಲಾಗಿದೆ. ಆದ್ದರಿಂದಾಗಿ ದೇವಾಲಯದ ಕಂಬ ಮತ್ತು ಪಟ್ಟಿಕೆಗಳನ್ನು ಗುರುತಿಸಲು ಪ್ರಮುಖವಾಗಿದೆ. ಇಂತಹ ಹಲವು ಕಾರಣಗಳಿಂದ ಪ್ರಸ್ತುತ ಅಧ್ಯಯನಕ್ಕೆ ಪೂರಕ ಮಾಹಿತಿ ನೀಡುವ ಕೃತಿಯಾಗಿದೆ.

ಈ ಮೇಲಿನ ಬಿಡಿ ಬಿಡಿ ಲೇಖನಗಳು, ಕೃತಿಗಳು ಇದುವರೆಗಿನ ಅಧ್ಯಯನಗಳನ್ನು ಗಮನಿಸಿದರೆ ಪ್ರಸ್ತುತ ಅಧ್ಯಯನದ ರಾಜಕೀಯ ಚರಿತ್ರೆ, ಶಿಕ್ಷಣ, ಸಾಹಿತ್ಯ, ಐತಿಹಾಸಿಕ ಸ್ಥಳಗಳ ಪರಿಚಯಾತ್ಮಕ ಅಧ್ಯನಯಗಳು ನಡೆದಿವೆಯೇ ಹೊರೆತು ಇಡಿಯಾಗಿ ನಡೆದಿಲ್ಲವೆಂದು ಕಂಡುಬರುತ್ತದೆ. ಆದುದರಿಂದ ಪ್ರಸ್ತುತ ಅಧ್ಯಯನ ಪ್ರದೇಶದ ಚರಿತ್ರೆಯನ್ನು ವ್ಯವಸ್ಥಿತವಾಗಿ ಕಟ್ಟಿಕೊಡುವ ಪ್ರಯತ್ನ ಇದಾಗಿದೆ.



# ಅಧ್ಯಾಯ : ಎರಡು

# ಭೌಗೋಳಿಕ ಪರಿಸರ ಮತ್ತು ಚಾರಿತ್ರಿಕ ಹಿನ್ನೆಲೆ

೨.೧. ಭೌಗೋಳಿಕ ಪರಿಸರ

೨.೨. ಸ್ಥಳನಾಮ

೨.೩. ಪ್ರಾಗಿತಿಹಾಸ

೨.೪. ಚಾರಿತ್ರಿಕ ಹಿನ್ನೆಲೆ

## ಅಧ್ಯಾಯ: ಎರಡು

# ಭೌಗೋಳಿಕ ಪರಿಸರ ಮತ್ತು ಚಾರಿತ್ರಿಕ ಹಿನ್ನೆಲೆ

### ೨.೧. ಭೌಗೋಳಿಕ ಪರಿಸರ

ಒಂದು ಪ್ರದೇಶದಲ್ಲಿ ವಾಸವಾಗಿರುವ ಮಾನವನಿಗೆ ಆಸರೆ ನೀಡುವ ಭೌಗೋಳಿಕ ಪರಿಸರವು ಅಲ್ಲಿನ ಸಂಸ್ಕೃತಿಯ ಹುಟ್ಟು, ಬೆಳವಣಿಗೆ ಮತ್ತು ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಘಟನೆಗಳ ನಿರ್ಮಾಣಗಳಿಗೆ ಪ್ರೇರಣೆ ನೀಡಿದೆ. ಇಂತಹ ಭೌಗೋಳಿಕ ಅಂಶಗಳಿಂದ ಪ್ರಾಚೀನ ಕಾಲದಿಂದಲೂ ಮಾನವನು ನಿಸರ್ಗದಡಿಯಲ್ಲಿ ಹುಟ್ಟಿ ನಿಸರ್ಗವನ್ನು ಅವಲಂಬಿಸಿದ್ದಾನೆ. ಮಾನವನು ಸಾಂಸ್ಕೃತಿಕ ಅಧ್ಯಯನ ಮಾಡುವಾಗ ಆ ಪ್ರದೇಶದ ಭೌಗೋಳಿಕ ಪರಿಸರ ಮತ್ತು ನೈಸರ್ಗಿಕ ಸಂಪತ್ತಿನ ಪಾತ್ರವನ್ನು ಅರ್ಥಮಾಡಿಕೊಳ್ಳುವುದು ಅತ್ಯಂತ ಅಗತ್ಯ.

ಈ ಹಿನ್ನೆಲೆಯಲ್ಲಿ ಅಧ್ಯಯನ ಕ್ಷೇತ್ರವಾದ ಮಾನ್ಯಖೇಟ ಪರಿಸರವು ಪ್ರಾಗಿತಿಹಾಸ ಕಾಲದಿಂದ ಇಂದಿನವರೆಗೂ ಚಾರಿತ್ರಿಕ ಮತ್ತು ಸಾಂಸ್ಕೃತಿಕವಾಗಿ ಬೆಳೆದುಬಂದಿರುವುದಕ್ಕೆ ಭೌಗೋಳಿಕ ಅಂಶಗಳು ಪ್ರಮುಖ ಕಾರಣವಾಗಿವೆ. ಇಲ್ಲಿ ಪ್ರಾಚೀನ ಕಾಲಘಟ್ಟದ ವಸತಿ ನೆಲೆಗಳು, ಸಮಾಧಿ ನೆಲೆಗಳು, ಪುರಾತತ್ವದ ಅವಶೇಷಗಳು ಕಂಡುಬರುತ್ತವೆ. ನಂತರ ಇತಿಹಾಸ ಕಾಲಕ್ಕೆ ಸಂಬಂಧಿಸಿದವು ಈ ಒಂದು ಪರಿಸರದಲ್ಲಿ ಕಾಣುತ್ತೇವೆ. ಅವು ದೇವಾಲಯ, ಶಾಸನಗಳು, ಕೋಟೆ–ಕೊತ್ತಲು ಮುಂತಾದವುಗಳ ನಿರ್ಮಾಣದ ಹಿಂದೆ ಭೌಗೋಳಿಕ ಪರಿಸರದ ವಿಶೇಷ ಪಾತ್ರವಿದೆ. ಆದ್ದರಿಂದ ಮಾನವನ ಮೂಲ ತಿಳಿಯಲು ಭೌಗೋಳಿಕ ಪರಿಸರದ ಅರಿವು ಅತ್ಯವಶ್ಯಕ.

ಪ್ರಸ್ತುತ ಮಾನ್ಯಖೇಟ ಪರಿಸರವು ಕರ್ನಾಟಕ ರಾಜ್ಯದ ಉತ್ತರ ಭಾಗದಲ್ಲಿದೆ. ರಾಜ್ಯದ ಈಶಾನ್ಯ ಭಾಗದಲ್ಲಿ ಈ ಪರಿಸರವು ವಿಶಾಲವಾಗಿದ್ದು, ಸೇಡಂ ಮತ್ತು ಚಿತ್ತಾಪೂರ ತಾಲೂಕುಗಳನ್ನು ಒಳಗೊಂಡಿದ್ದು ಸೇಡಂ ತಾಲೂಕಿನ ೧೦ ಗ್ರಾಮಗಳು, ಚಿತ್ತಾಪೂರ ತಾಲೂಕಿನ ೧೫ ಗ್ರಾಮಗಳಿವೆ. ಮಾನ್ಯಖೇಟದ ಪೂರ್ವ ರೇಖಾಂಶ ೭೭° ೧೬,೫೯ ಮತ್ತು ೧೭° ೧೦,೫೯ವು ಇದೆ. ಪ್ರಸ್ತುತ ಅಧ್ಯಯನ ಪರಿಸರ ವಿಸ್ತಾರವು ೨,೭೯೦ ಚ.ಕಿ.ಮೀ. ಇದೆ[೧] ಇಂತಹ ಹಲವು ಕಾರಣಗಳಿಂದ ಈ ಪರಿಸರವು ಅತ್ಯಂತ ಪ್ರಾಮುಖ್ಯತೆ ಹೊಂದಿದೆ.

### ವಾಯುಗುಣ ಮತ್ತು ಮಳೆ

ಪ್ರಸ್ತುತ ಈ ಅಧ್ಯಯನದ ಪರಿಸರವು ಸಮುದ್ರ ಮಟ್ಟದಿಂದ ೩೦೦-೪೫೦ ಮೀ ಎತ್ತರದಲ್ಲಿದ್ದು, ವಾಯುಗುಣ ಶುಷ್ಕ ಮತ್ತು ಆರೋಗ್ಯಕರವಾಗಿದೆ. ಇಲ್ಲಿಯ ವಾಯುಗುಣ ಸ್ಥೂಲವಾಗಿ ಡೆಕ್ಕನ್ ಪ್ರಸ್ಥಭೂಮಿ ಮಾದರಿಯಲ್ಲೇ ಇದೆ. ಫೆಬ್ರವರಿಯಿಂದ ಜೂನ್ ಆರಂಭದವರೆಗೆ ಬೇಸಿಗೆ ಕಾಲ, ಅಲ್ಲಿಂದ ಮುಂದೆ ಸೆಪ್ಟೆಂಬರ್ ಅಂತ್ಯದವರೆಗೆ ಮಳೆಗಾಲ ಅನಂತರ ಡಿಸೆಂಬರ್‌ನಿಂದ ಫೆಬ್ರವರಿಯವರೆಗೆ ಚಳಿಗಾಲವಿರುತ್ತದೆ. ಈ ಪ್ರದೇಶದ ಗರಿಷ್ಠ ಉಷ್ಣತೆ ೪೫ ಡಿಗ್ರಿ ಸೆಲ್ಸಿಯಸ್, ಕನಿಷ್ಠ ಉಷ್ಣತೆ ೧೫-೧೧ ಡಿಗ್ರಿ ಸೆಲ್ಸಿಯಸ್ ಇರುತ್ತದೆ. ಈ ಪ್ರದೇಶದಲ್ಲಿ ನೈರುತ್ಯ ಮುಂಗಾರು ಮಾರುತದಿಂದ ಶೇ. ೮೦ ಕ್ಕಿಂತ ಹೆಚ್ಚು ಮಳೆಯಾಗುತ್ತದೆ.

### ನದಿಗಳು

ಈ ಪರಿಸರದಲ್ಲಿ ಪ್ರಮುಖವಾಗಿ ಹರಿಯುವ ನದಿ ಕಾಗಿಣಾ, ಇದನ್ನು ತಾಂಡೂರು ನದಿ ಎಂಬ ಹೆಸರಿನಿಂದ ಕರೆಯಲಾಗಿದೆ.[೩] ಈ ನದಿ ಭೀಮಾ ನದಿಯ ಉಪನದಿಯಾಗಿದೆ. ಆಂಧ್ರಪ್ರದೇಶದ ಕೋಹಿರ್ ಎಂಬಲ್ಲಿ ಹುಟ್ಟಿ ತಾಂಡೂರಿನಲ್ಲಿ ಹರಿದು, ಸೇಡಂ ತಾಲೂಕಿನ ಈಶಾನ್ಯದ ಹಂಚಿನಲ್ಲಿ ಪ್ರವೇಶಿಸಿ ಪಶ್ಚಿಮಾಭಿಮುಖವಾಗಿ ಹರಿದು ಮಾನ್ಯಖೇಟವನ್ನು ಪ್ರವೇಶಿಸಿ, ಅಲ್ಲಿಂದ ನೈರುತ್ಯಾಭಿಮುಖವಾಗಿ ಹನಗುಂಟ ಗ್ರಾಮದ ಹತ್ತಿರ ಭೀಮಾ ನದಿಯನ್ನು ಸೇರುತ್ತದೆ.[೪] ಈ ನದಿಯಲ್ಲದೆ ಮತ್ತೊಂದು ಪ್ರಮುಖ ನದಿಯಾದ ಭೀಮಾ ನದಿ ಈ ಭಾಗದಲ್ಲಿ ಹರಿಯುತ್ತದೆ. ಇದು ಕೃಷ್ಣ ನದಿಯ ಉಪನದಿಯಾಗಿದೆ. ಮಹಾರಾಷ್ಟ್ರದ ಪಶ್ಚಿಮ ಘಟ್ಟಗಳ ಭೀಮಾಶಂಕರದಲ್ಲಿ ಹುಟ್ಟಿ ವಿಜಾಪೂರ ಜಿಲ್ಲೆಯ ಉತ್ತರ ತುದಿಯಲ್ಲಿರುವ ದಸೂರಿನ ಬಳಿ ಕರ್ನಾಟಕದ ಎಲ್ಲೆಯನ್ನು ಪ್ರವೇಶಿಸುತ್ತದೆ. ಅಲ್ಲಿಂದ ಪೂರ್ವ ಮತ್ತು ದಕ್ಷಿಣದ ದಿಕ್ಕುಗಳಿಗೆ ಹಲವು ಕವಲುಗಳಾಗಿ ಹರಿದು, ದಕ್ಷಿಣದಲ್ಲಿರುವ ಸನ್ನತಿಯನ್ನು ಹಾದುಹೋಗುತ್ತದೆ. ಮುಂದೆ ಹರಿದು ಈ ಪರಿಸರದ ಆಗ್ನೇಯದ ಹಂಚಿನ ಶಹಾಪೂರ ತಾಲೂಕಿನ ಸಂಗಮದ ಬಳಿ ಕೃಷ್ಣ ನದಿಯನ್ನು ಕೂಡುತ್ತದೆ.[೫]

ಈ ಎರಡು ನದಿಗಳನ್ನು ಬಿಟ್ಟರೆ ಮಾನ್ಯಖೇಟ ಪರಿಸರದ್ಯಂತ ಚಿಕ್ಕ, ದೊಡ್ಡ ಸುಮಾರು ೫ ಕೆರೆಗಳಿದ್ದು ಅಧಿಕ ಮಳೆಯಾದಾಗ ಮಾತ್ರ ಭರ್ತಿಯಾಗುತ್ತವೆ. ಆದ್ದರಿಂದ ನೀರಾವರಿ ಸೌಲಭ್ಯಕ್ಕೆ ಅಂತರ್ಜಲವೇ ಮೂಲ.

### ಅಂತರ್ಜಲ

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಅಂತರ್ಜಲವೇ ನೀರಾವರಿಗೆ ಮೂಲವಾಗಿದ್ದರೂ ಇದರ ಸ್ಥಿತಿ ಚಿಂತಾಜನಕವಾಗಿದೆ. ಡೆಕ್ಕನ್ ಪ್ರಸ್ಥಭೂಮಿಯ ಭಾಗವಾಗಿದ್ದ ಮಾನ್ಯಖೇಟ ಪರಿಸರವು ಸಮುದ್ರ ಮಟ್ಟ ಸರಾಸರಿ ೭೦೦ ಮೀ. ಎತ್ತರದಲ್ಲಿದ್ದು ಗಡುಸಾದ ಸಾಂದ್ರವಾದ ಸ್ಫಟಿಕ ಶಿಲೆಗಳಿಂದ ರೂಪಿತವಾಗಿದೆ. ವಾಯುಗುಣವು ಹೆಚ್ಚಿನ ಭಾಗದಲ್ಲಿ ಶುಷ್ಕವಾಗಿದ್ದು, ಸರಾಸರಿ

ಮಳೆಯು ೬೦೦ ಮಿ.ಮೀ. ಇರುವುದರಿಂದ ಅಂತರ್ಜಲದ ಅಸ್ತಿತ್ವ ಮತ್ತು ಹರಿವುಗಳು ಕೆಳಮಟ್ಟದಲ್ಲಿವೆ. ಗಟ್ಟಿಶಿಲೆಗಳು ಸಾಕಷ್ಟು ರಂಧ್ರಭರಿತವಲ್ಲದ್ದರಿಂದ ಶಿಲಾ ಪ್ರವಾಹವು ಘನವಾಗಿರದ ಪ್ರದೇಶಗಳಂತೆ, ಹೆಚ್ಚಿನ ಪ್ರಮಾಣದಲ್ಲಿ ಅವು ನೀರನ್ನು ಹಿಡಿದಿಟ್ಟುಕೊಳ್ಳುವುದಿಲ್ಲ. ಈ ಅಂತರ್ಜಲ ಕಡಿಮೆ ಇರುವುದರಿಂದ ಈ ಪ್ರದೇಶದ ಜನರ ಸ್ಥಿತಿಯು ಚಿಂತಾಜನಕವಾಗಿದೆ. ಅಷ್ಟೇ ಅಲ್ಲದೆ, ಈ ಪ್ರದೇಶಗಳಲ್ಲಿ ಬೇಸಿಗೆ ಸಮಯದಲ್ಲಿ ಕುಡಿಯುವ ನೀರಿಗೂ ಸಮಸ್ಯೆ. ಇದರಿಂದ ಮಾನ್ಯಖೇಟ ಪರಿಸರದ ಜನತೆ ಮಳೆಯೊಂದಿಗೆ ಜೂಜಾಟ ಆಡುತ್ತಿದ್ದಾರೆ. ಪ್ರಸ್ತುತ ದಿನಗಳಲ್ಲಿ ಇಲ್ಲಿನ ಎಲ್ಲಾ ಜನತೆ ಕೊಳವೆ ಬಾವಿಗಳನ್ನು ಮತ್ತು ಮಳೆಯನ್ನೇ ಅವಲಂಬಿಸಿದ್ದು ಕಂಡುಬರುತ್ತದೆ.[೬]

**ಶಿಲೆ ಮತ್ತು ಖನಿಜ**

ಈ ಮಾನ್ಯಖೇಟ ಪರಿಸರದಲ್ಲಿ ಆರ್ಥಿಕಾಭಿವೃದ್ಧಿಗೆ ಸಹಾಯಕವಾಗುವ ಕೆಲವು ಶಿಲೆ ಮತ್ತು ಖನಿಜಗಳು ದೊರಕುತ್ತವೆ. ಕೆಲವು ಕಡೆ ಹೆಚ್ಚು ಕ್ಷೋಭೆಗೊಳಗಾಗದ ಮತ್ತು ಮಟ್ಟಸವಾಗಿ ಹರಡಿರುವ ಸುಣ್ಣದ ಕಲ್ಲು ಮತ್ತು ಶೇಲ್ ಪದರದ ಒಂದು ಗುಂಪು ಈ ಪರಿಸರದ ಚಿತ್ತಾಪೂರ, ಸೇಡಂ ತಾಲೂಕಿನಿಂದ ಹಿಡಿದು ಜೇವರ್ಗಿ, ಚಿಂಚೋಳಿ ತಾಲೂಕಿನವರೆಗೂ ವಿಸ್ತರಿಸಿವೆ. ಈ ಜಲಜ ಶಿಲೆಯು ಭೀಮಾ ನದಿಯ ಇಕ್ಕೆಡೆಗಳಲ್ಲಿ ಹೆಚ್ಚಾಗಿ ಕಾಣಬರುವುದರಿಂದ ಇದಕ್ಕೆ 'ಭೀಮಾ ವರ್ಗ'ವೆಂದು ಹೆಸರು ಬಂದಿದೆ. ಅಲ್ಲದೆ ಮತ್ತೊಂದು ವಿಶೇಷವಾದ ಶಾಹಾಬಾದ್‌ನಲ್ಲಿ ಶಾಹಾಬಾದ್ ಹೆಸರು ಇರುವ ಕಟ್ಟಡ ನಿರ್ಮಾಣದ ಬಳಿ ಕಲ್ಲು ದೊರೆಯುತ್ತದೆ. ಇದು ಆರ್ಥಿಕಾಭಿವೃದ್ಧಿಗೆ ಸಹಕಾರಿಯಾಗಿದೆ. ಚಿತ್ತಾಪೂರದಲ್ಲಿ ಕಟ್ಟಡ ನಿರ್ಮಾಣದ ಬಿಳಿಕಲ್ಲು ದೊರೆಯುತ್ತದೆ. ಸೇಡಂ ತಾಲೂಕಿನ ಹಂದರಕಿ, ನಾಚವಾರ, ದುಗನೂರು ಗ್ರಾಮಗಳ ಬೆಟ್ಟದಲ್ಲಿ ಬೆಣಚು ಕಲ್ಲುಗಳು ದೊರೆಯುತ್ತವೆ. ಚಿತ್ತಾಪೂರ ತಾಲೂಕಿನ ಶಹಾಬಾದ್, ಅಲ್ಲೂರ, ರಾಮತೀರ್ಥ, ಹುಳಗೋಳ, ಮಾದವಾರ, ಹಂದರಕಿ ಇತ್ಯಾದಿ ಗ್ರಾಮಗಳಲ್ಲಿ ಕಲ್ಲುಗಣಿಗಾರಿಕೆಯನ್ನು ಕಾಣಬಹುದು.[೭]

**ಕೃಷಿ**

ಮಾನ್ಯಖೇಟ ಪರಿಸರದಲ್ಲಿ ಕೃಷಿಯು ಮಳೆಯಾಧಾರಿತವಾಗಿದ್ದು ಪರಿಸರದಲ್ಲಿ ೨,೧೫,೬೯೪ ಹೆಕ್ಟೇರ್ ಕೃಷಿಯನ್ನು ಹೊಂದಿದೆ.[೮] ಇಲ್ಲಿ ಪ್ರಮುಖವಾಗಿ ಕಪ್ಪು ಭೂಮಿ ವಿಶಾಲವಾಗಿದ್ದು, ಕರೆಕಲ್ಲು ಮಣ್ಣು ಮರಳು ಮಿಶ್ರಿತ ಜೇಡಿಮಣ್ಣಿನಿಂದ ಕೂಡಿದ ಭೂಮಿಯನ್ನು ಕಾಣಬಹುದಾಗಿದೆ. ಕೃಷಿಯಲ್ಲಿ ಪ್ರಮುಖವಾಗಿ ತೊಗರಿ ಅಧಿಕವಾಗಿ ಬೆಳೆಯುತ್ತಾರೆ. ಇದು ಕೇವಲ ಮಳೆಯಾಧಾರಿತ ಬೆಳೆಯಾಗಿದೆ. ಮತ್ತು ಕಪ್ಪು ಮಣ್ಣಿನಲ್ಲಿ ಫಸಲು ಹೆಚ್ಚಿನ ಪ್ರಮಾಣದಲ್ಲಿ ಬರುವುದರಿಂದ ಕರ್ನಾಟಕ ಮತ್ತು ಇತರ ರಾಜ್ಯಗಳಿಗೆ ಸರಬರಾಜು ಮಾಡುವುದರಿಂದ ವ್ಯಾಪಾರ ವಾಣಿಜ್ಯ ಬೆಳೆಯು ತೊಗರಿಯಾಗಿದೆ. ಇದಲ್ಲದೆ ಇನ್ನು ಅನೇಕ ಬೆಳೆಗಳಾದ ಕಡಲೆ, ಎಳ್ಳು, ಔಡಲ, ಹತ್ತಿ, ಸಜ್ಜೆ, ಹೆಸರು, ಉದ್ದು, ಹುರಳಿ, ಶೇಂಗಾ, ಸೂರ್ಯಕಾಂತಿ, ನವಣೆ ಹಾಗೂ ದ್ವಿದಳ ಧಾನ್ಯಗಳನ್ನು ಪ್ರಮುಖವಾಗಿ ಬೆಳೆಯಲಾಗುತ್ತದೆ.

ಕೆಲವು ಕಡೆ ದ್ವಿದಳ ಧಾನ್ಯಗಳು ಮಾತ್ರವಲ್ಲದೆ ನೀರಾವರಿಯೂ ಅನುಕೂಲವಿರುವ ಕಡೆ ಮತ್ತು ಮಳೆಗಾಲದ ಸಮಯದಲ್ಲಿ ಹಣ್ಣು ತರಕಾರಿ ಬೆಳೆಗಳನ್ನು ಬೆಳೆಯುತ್ತಾರೆ. ಈ ರೀತಿಯಾದ ಕೃಷಿಯನ್ನು ಹೊಂದಿರುವುದರಿಂದ ಪ್ರಸ್ತುತ ಅಧ್ಯಯನದ ಪರಿಸರವು ಕೃಷಿಯಿಂದ ಶ್ರೀಮಂತಿಕೆ ಹೊಂದಿದೆ.

**ಬೆಟ್ಟಗಳು**

ಮಾನ್ಯಖೇಟ ಪರಿಸರದಲ್ಲಿ ದೊಡ್ಡ ದೊಡ್ಡ ಬೆಟ್ಟಗಳು ಕಂಡುಬರುವುದಿಲ್ಲ. ಆದರೆ ಈ ಪರಿಸರದ ಪೂರ್ವ, ಪಶ್ಚಿಮ, ಉತ್ತರ ಭಾಗಗಳನ್ನು ಒರತುಪಡಿಸಿ ದಕ್ಷಿಣ ಭಾಗದಲ್ಲಿ ಬರುವ ನಾಲವಾರ ದಂಡಗುಂಡ, ಅಲ್ಲೂರು, ರಾಮತೀರ್ಥ, ಭೀಮನಹಳ್ಳಿ, ಹಂದರ್ಕಿ ಗ್ರಾಮಗಳಲ್ಲಿ ಸಣ್ಣ ಪ್ರಮಾಣದಲ್ಲಿ ಎತ್ತರವಿರುವ ಬೆಟ್ಟಗಳು ಕಾಣಿಸುತ್ತವೆ. ಗಟ್ಟಿ ಕರಿಕಲ್ಲು, ಬೆಣಚುಕಲ್ಲು ಮತ್ತು ಮರಗಿಡಗಳಿಂದ ಕೂಡಿದ್ದಾಗಿದೆ. ಈ ಬೆಟ್ಟಗಳು ಬಿಟ್ಟರೆ ಇತರೆ ದೊಡ್ಡ ಪ್ರಮಾಣದ ಬೆಟ್ಟಗಳು ವಿರಳವಾಗಿವೆ.

## ೨.೨. ಸ್ಥಳನಾಮ

ಈ ಪ್ರಕೃತಿ ಕೋಟ್ಯಾಂತರ ವರ್ಷದಿಂದ ಕೋಟ್ಯಾಂತರ ಜೀವಿಗಳಿಗೆ ಆಶ್ರಯ ತಾಣವಾಗಿದೆ. ಪ್ರತಿ ವಸ್ತುವಿಗೂ ಅದರದ್ದೇ ವೈಶಿಷ್ಟ್ಯ ಇಂದಿಗೂ ಎಂದೆಂದಿಗೂ ಸಾವಿರಾರು ಜೀವಿಗಳಲ್ಲಿ ಮನುಷ್ಯನು ಒಬ್ಬ. ಪ್ರಾಣಿಗಳಂತೆ ವಾಸಿಸುತ್ತಿದ್ದ ಕಾಲದಲ್ಲಿಯೂ ಅವನು ತನಗಾಗಿ ನೆಲೆಗಳನ್ನು ಸ್ಥಾಪಿಸಿಕೊಂಡಿದ್ದ. ಅವುಗಳನ್ನು ಗುರುತಿಸಿಕೊಳ್ಳಲು ಅವುಗಳಿಗೆ ಹೆಸರಿಟ್ಟು ಕರೆಯತೊಡಗಿದ ಸ್ಥಳಗಳಿಗೆ ಆ ರೀತಿ ಹೆಸರು ನೀಡುವ ರೀತಿ ಅಂದಿನಿಂದಲೆ ಆರಂಭವಾಯಿತು. ಕಾಲ ಗತಿಸಿದಂತೆ ಮನುಷ್ಯನ ಬುದ್ಧಿಯೂ ಬೆಳೆಯಿತು. ಅವನು ಕಾಡು ಬಿಟ್ಟು ನಾಡು ಕಟ್ಟಿದ, ನಾಡು ಕಟ್ಟುತ್ತ ನುಡಿ ಬೆಳೆಸಿಕೊಂಡ ಹೀಗೆ ನಾಡು-ನುಡಿಯಲ್ಲಿ ವಾಸಿಸಿದ ಆತ ತಾನು, ತನ್ನ ಸುತ್ತಣವರಿಗಾಗಿ ಸಂಸ್ಕೃತಿಯನ್ನು ನಾಗರಿಕತೆಯನ್ನು ಬೆಳೆಸಿಕೊಂಡ.

ಆದರೆ ಮುಂದೆ ಜನಸಂಖ್ಯೆ ಹೆಚ್ಚಿದಂತೆ ತನ್ನ ನೆಲೆಗಳನ್ನು ವಿಸ್ತಾರ ಮಾಡಿಕೊಂಡ ಅವನು ತನ್ನ ಗುಂಪಿನೊಂದಿಗೆ ಬೆಳೆಸಿಕೊಂಡುಬಂದ ಸಂಸ್ಕೃತಿಗೆ ಅವನು ಬಳಸುತ್ತ ಬಂದ ಭಾಷೆ ಮಾಧ್ಯಮವಾಯಿತು. ತನ್ನ ಭಾವ, ಸಂಸ್ಕೃತಿಗಳನ್ನು ಭಾಷಾ ಸಂಕೇತಗಳ ಮೂಲಕ ತನ್ನ ಸ್ಥಳಗಳಿಗೆ ಅನ್ವಯಿಸತೊಡಗಿದ, ಇದರಿಂದ ತಾನು ನಂಬಿಕೊಂಡು ಬಂದ ನಂಬಿಕೆ, ನಡೆದ ಘಟನೆ ತಾನು ರೂಪಿಸಿಕೊಂಡು ಬಂದ ಪರಿಕಲ್ಪನೆಗಳು, ತನ್ನವರ ಇತಿಹಾಸ ಮುಂತಾದವು ಅವನು ಬಳಸುವ ಸ್ಥಳನಾಮಗಳಿಗೆ ಹಾಸುಹೊಕ್ಕಾಗಿ ನಿಂತವು. ಅಂತೆಯೇ ಸ್ಥಳನಾಮಗಳು ಮಾನವ ಬದುಕಿನ ದೀರ್ಘಕಾಲೀನ ಚರಿತ್ರೆಗೆ, ಅವನ ಸಂಸ್ಕೃತಿಗೆ, ಭಾಷಾ ಸ್ವರೂಪಕ್ಕೆ ಹಿಡಿದ ಕನ್ನಡಿ ಎನಿಸಿದವು.[೮]

ಪ್ರಕೃತಿ ಮತ್ತು ಪ್ರಕೃತಿಯಲ್ಲಿನ ಜನಾಂಗೀಯ ಇತಿಹಾಸ, ಸಂಸ್ಕೃತಿಗಳ ಪ್ರತೀಕವೆ ಸ್ಥಳನಾಮಗಳಾಗಿ ಹೊಮ್ಮಿವೆ. ಹೀಗಾಗಿ ಹೆಚ್ಚಿಗೆ ಸಮುದಾಯಗಳು ವಾಸಿಸುತ್ತಿದ್ದುದು ಬೆಟ್ಟದ ದಿನ್ನೆ ಪ್ರದೇಶ ಮತ್ತು ತಮಗೆ ಅಗತ್ಯವಾಗಿ ಬೇಕಾದಂತಹ ನೀರಿನ ಅನುಕೂಲತೆ ಇರುವಲ್ಲಿ ಜಗತ್ತಿನ ಬಹುತೇಕ ಪ್ರಾಚೀನ ನಾಗರಿಕತೆಗಳು ಆರಂಭವಾದದ್ದು ನದಿದಂಡೆಯ ಮೇಲೆ ಎಂಬುವುಡನ್ನು ಗಮನಿಸಿದರೆ ಸಮುದಾಯಗಳ ನೆಲೆಸುವಿಕೆಯ ಆಯ್ಕೆಯು ಸ್ಪಷ್ಟವಾಗಿ ಗೋಚರಿಸುತ್ತದೆ. ಜನಸಾಮಾನ್ಯರ ನೋವು, ನಲಿವು, ಆಚಾರ-ವಿಚಾರ, ರೂಢಿ-ಸಂಪ್ರದಾಯಗಳಂತಹ ಸಾಂಸ್ಕೃತಿಕ ಅಂಶಗಳು ಕುರಿತು ಸೂಕ್ಷ್ಮ ತರವಾದ ವಿಚಾರಗಳು ದಾಖಲಾಗಿರುವುದು ಆ ಪರಿಸರದ ಜನರಿಂದ ಹೆಸರಿಸಲ್ಪಟ್ಟ ಸ್ಥಳಗಳಿಂದ ಎಂಬುವುದು ವ್ಯಕ್ತವಾಗುತ್ತದೆ.

ಆಯಾಯ ಕಾಲಘಟ್ಟದಲ್ಲಿ ಹೆಸರಿಸಲ್ಪಟ್ಟ ಗ್ರಾಮನಾಮಗಳಲ್ಲಿಯ ಆ ಸ್ಥಳಗಳ ಇತಿಹಾಸ ಮತ್ತು ಪುರಾತತ್ವದ ಅಧ್ಯಯನಕ್ಕೆ ಆಕರವಾಗುವುದರಲ್ಲಿ ಸಂಶಯವಿಲ್ಲ. ಈ ಹಿನ್ನೆಲೆಯಲ್ಲಿ ಸ್ಥಳನಾಮಗಳ ಚಾರಿತ್ರಿಕ ಅಧ್ಯಯನ ಅವಶ್ಯಕವಾಗಿದೆ. ಸ್ಥಳನಾಮಗಳ ಕುರಿತ ಅಧ್ಯಯನ ಮೇಲ್ನೋಟಕ್ಕೆ ಸಾಮಾನ್ಯ ವಿಷಯವಾಗಿದೆ. ಆದರೆ ಅದರಲ್ಲಿ ಎಷ್ಟೋಂದು ಮಹತ್ವಪೂರ್ಣವಾದ ಸಂಗತಿಗಳು ಹುದುಗಿಕೊಂಡಿರುವುದಲ್ಲದೆ ಅದೆಷ್ಟೋ ಅಜ್ಞಾತ ವಿಷಯಗಳು ಬೆಳಕಿಗೆ ಬಂದಿವೆ. ಸೂಕ್ಷ್ಮವಾಗಿ ವಿಮರ್ಶಿಸಿದಷ್ಟು ಹಿಂದೆ ಆಗಿ ಹೋದ ಅನೇಕ ಪ್ರಾಚೀನ ಐತಿಹಾಸಿಕ ಘಟನೆಗಳಿಗೆ ಶಾಸನಗಳಲ್ಲಿ ದೊರೆಯದ ಆಧಾರಗಳು ಸ್ಥಳನಾಮದಲ್ಲಿ ಸಿಕ್ಕುತ್ತವೆ. ಇದು ಸ್ಥಳೀಯ ವಸ್ತು ವ್ಯಕ್ತಿ ಅಥವಾ ಘಟನೆಯ ವಿಶಿಷ್ಟ ಸ್ವಭಾವಗಳನ್ನು ವಿವರಿಸುವುದಾಗಿರುತ್ತದೆ.[೧೦] ಇಂತಹ ಮಹತ್ವದ ಅಂಶಗಳಿಂದ ಕೂಡಿದ ಸ್ಥಳನಾಮವು ಪ್ರಸ್ತುತ ಅಧ್ಯಯನಕ್ಕೆ ಆಕರವಾಗುವುದರ ಮೂಲಕ ಪ್ರಾಮುಖ್ಯತೆ ಪಡೆದುಕೊಂಡಿದೆ.

**ಮಳಖೇಡ ಹೆಸರು**

ಮಳಖೇಡವನ್ನು ಮಾನ್ಯರಕೆರೆ ಮಾಂಕಿರ, ಮಲಯಖೇಟ, ಮಲಯಾಪುರ, ಕೃಷ್ಣನಗರ, ಖೇಟ, ಮಾನ್ಯಖೇಟ ಎಂಬ ಇತ್ಯಾದಿ ಹೆಸರಿನಿಂದ ಕರೆಯುತ್ತಿದ್ದರು.[೧೧] ಇದನ್ನು ಪ್ರಮಾಣಿಸಿ ನೋಡಿದಾಗ, ರಾಷ್ಟ್ರಕೂಟರ ಒಂದು ಕುಟುಂಬವು 'ಮಾನಪುರ' ಎಂಬಲ್ಲಿತ್ತೆಂದು ತಿಳಿದುಬರುತ್ತದೆ. ಕ್ರಿ.ಶ. ೭ನೇ ಶತಮಾನದ ಶಾಸನ ಒಂದರಲ್ಲಿ ಇವರ ವಂಶವೃಕ್ಷವನ್ನು ಮಾನಂಕ ಅವನ ಮಗ ದೇವರಾಜ ಭವಿಷ್ಯ ಹಾಗೂ ಅಭಿಮಾನ್ಯ ಎಂದು ಉಲ್ಲೇಖಿಸುತ್ತದೆ. ಈ ಕಾರಣದಿಂದ ಮಾನಪೂರ, ಅಥವಾ ಮಾನಂಕವೆ ಮಾನ್ಯಖೇಟವಾಗಿರಬಹುದು ಎಂಬುದು ವಿದ್ವಾಂಸರ ಅಭಿಪ್ರಾಯವಿದೆ.[೧೨] ಇದನ್ನು ಇನ್ನು ಪ್ರಮಾಣಿಸಿ ನೋಡಿದಾಗ ಸಾಹಿತ್ಯಾಧಾರಗಳನ್ನು ಗಮನಿಸಿದರೆ ಆದಿಪುರಾಣ ಮತ್ತು ವಡ್ಡರಾಧನೆ ಕೃತಿಗಳಲ್ಲಿ ಜನಪದದ ಗಡಿ ವಿವರಣೆ ಪ್ರಕಾರ 'ಖೇಟ' ರಾಜಧಾನಿಯು ಕಾಗಿಣಾ ನದಿಯ ತಾಟಕದಲ್ಲಿರುವುದು ಉಲ್ಲೇಖವಾಗಿದೆ. ಈ ಕಾರಣದಿಂದ

ಮಳಖೇಡವು ಮಾನ್ಯಖೇಟ ಎಂಬ ಹೆಸರಿನಿಂದ ರಾಷ್ಟ್ರಕೂಟರ ರಾಜಧಾನಿಯಾಗಿತ್ತು ಎಂದು ತಿಳಿದುಬರುತ್ತದೆ.[೧೩]

**ಸ್ಥಳನಾಮಗಳಿಗೆ ಉದಾಹರಣೆ** .

ವಸ್ತು, ವ್ಯಕ್ತಿ, ಪ್ರಾಣಿ–ಪಕ್ಷಿಗಳ ಹೆಸರನ್ನು ಸೂಚಿಸುವ ಪದಕ್ಕೆ ನಾಮಪದ ಎನ್ನುತ್ತೇವೆ. ಇದರಲ್ಲಿ ರೂಢಿನಾಮ, ಅಂಕಿತನಾಮ, ಅನ್ವರ್ಥನಾಮ ಎಂಬ ಅನೇಕ ಪ್ರಬೇಧಗಳಿವೆ. ಅಂಕಿತನಾಮ ವ್ಯಕ್ತಿ, ಪ್ರಾಣಿ–ಪಕ್ಷಿಗಳ ಸ್ಥಳಗಳು ಬಹುಸಂಖ್ಯೆಯಲ್ಲಿದ್ದಾಗ ಅಥವಾ ಅತಿ ಬಳಕೆಯಲ್ಲಿದ್ದಾಗ ಅಂತಹ ಅಂಕಿತನಾಮಗಳು ಸಾಮಾನ್ಯವಾದ ಮಟ್ಟಕ್ಕಿಳಿಯುತ್ತವೆ. ಸ್ಥಳನಾಮಗಳು ಸಾಮಾನ್ಯವಾಗಿ ಅಂಕಿತನಾಮಗಳಾಗುತ್ತವೆ.[೧೪]

**ಸ್ಥಳನಾಮಗಳ ವರ್ಗೀಕರಣ**

ಎ. ಪ್ರಾಕೃತಿಕ ಸ್ಥಳನಾಮ ಬಿ. ಸಾಂಸ್ಕೃತಿಕ ಸ್ಥಳನಾಮ

**ಎ. ಪ್ರಾಕೃತಿಕ ಸ್ಥಳನಾಮ:** ಪ್ರಾಕೃತಿಕ ಸ್ಥಳನಾಮಗಳನ್ನು ಜಲವಾಚಕ, ಶಿಲಾವಾಚಕ, ಭೂವಾಚಕ, ಪ್ರಾಣಿ–ಪಕ್ಷಿವಾಚಕ, ಸಸ್ಯವಾಚಕ, ಪ್ರಮಾಣವಾಚಕ, ದಿಕ್ಕುವಾಚಕ, ಖನಿಜವಾಚಕ ಎಂಬ ವಿವಿಧ ಹೆಸರುಗಳಿಂದ ಸ್ಥಳನಾಮಗಳು ಬಂದಿರುವುದು ತಿಳಿದುಬರುತ್ತದೆ.[೧೫] ಉದಾ. ಏರಿ–ಜಲವಾಚಕ ಪದ, ಆನೆಸಿದ್ರಿ–ಪ್ರಾಣಿವಾಚಕ ಪದ, ಅರಳಿಕಟ್ಟೆ–ಸಸ್ಯವಾಚಕ ಪದ, ಚಿಕ್ಕದು, ದೊಡ್ಡದು–ಪ್ರಮಾಣವಾಚಕ.

**ಬಿ. ಸಾಂಸ್ಕೃತಿಕ ಸ್ಥಳನಾಮ:** ಬಹಳಷ್ಟು ಸ್ಥಳನಾಮಗಳು ವ್ಯಕ್ತಿವಾಚಿಯಾಗಿ ಜಾತಿಯನ್ನು ಸೂಚಿಸುತ್ತಾ ದೇವರನ್ನು ಸೂಚಿಸುವ ಸ್ಥಳನಾಮಗಳು ಸೇರಿವೆ. ಪುರುಷ ಹೆಸರಿನ ಸ್ಥಳನಾಮಗಳು ಹಾಗೂ ಸ್ತ್ರೀ ಹೆಸರಿನ ಸ್ಥಳನಾಮಗಳು ಕಂಡುಬರುವುದು ವಿಶಿಷ್ಟ.[೧೬]

**ಮನುಷ್ಯ ನಿರ್ಮಿತ ಸ್ಥಳನಾಮಗಳು**

ಅನೇಕ ಗ್ರಾಮಗಳಿಗೆ ಅಲ್ಲಿಯ ವಿಶಿಷ್ಟ ಉದ್ದೇಶದಿಂದಾಗಿಯೆ ಹೆಸರಿನ ಮೊದಲ ಭಾಗದ ನಿರ್ಧಾರವಾಗುತ್ತದೆ. ಉದಾಹರಣೆಗೆ ಹಟ್ಟಿಹೊಳಿ ಎನ್ನುವ ಹೆಸರನ್ನು ನೋಡಿರಿ. ಈ ಸ್ಥಳನಾಮವು ಒಂದು ಸಮುದಾಯದ ಸಾಕುಪ್ರಾಣಿಗಳ ಹಟ್ಟಿಯನ್ನು ಸೂಚಿಸುತ್ತದೆ. ಇದರಂತೆ ಕೆಲವೊಂದು ಊರುಗಳಲ್ಲಿ ಅಲ್ಲಿಯ ವ್ಯಾಪಾರದಿಂದಾಗಿ ಪ್ರಥಮ ಪದ ಬರುತ್ತದೆ. ಉದಾಹರಣೆ ಉಪ್ಪಿನಂಗಡಿ, ಅಲ್ಲದೆ ಉದ್ದಿಮೆ, ನೀರಾವರಿ ಸೌಕರ್ಯ ಆಡಳಿತ ಕೇಂದ್ರ ಮೊದಲಾದ ಕಾರಣಗಳಿಂದಾಗಿ ಊರುಗಳು ಹೆಸರುಗಳನ್ನು ಪಡೆಯುತ್ತವೆ.[೧೭] ಇಂತಹ ಅನೇಕ ವಿಷಯಗಳಿಂದ ಸ್ಥಳನಾಮವು ಅತ್ಯಂತ ಮಹತ್ವವನ್ನು ಪಡೆದಿದೆ.

**೨.೩. ಪ್ರಾಗಿತಿಹಾಸ**

ಪ್ರಕೃತಿ ಮಾನವನಿಗೆ ಮೊದಲು ನೀಡಿದ ಕೊಡುಗೆಗಳಲ್ಲಿ ಶಿಲೆಯು ಒಂದಾಗಿದೆ. ಆರಂಭದಲ್ಲಿ ಅಲೆಮಾರಿಯಾಗಿದ್ದ ಮಾನವನಿಗೆ ಗಡ್ಡೆ ಗೆಣಸುಗಳನ್ನು ಅಗೆದು ತೆಗೆಯಲು, ಗಿಡಗಳನ್ನು

ಕಡಿಯಲು, ಬೇಟೆಯಾಡಲು, ಬೇಟೆಯಾಡಿದ ಪ್ರಾಣಿ ಮಾಂಸವನ್ನು ತುಂಡು ಮಾಡಲು ಆಯುಧಗಳನ್ನು ತಯಾರಿಸಲು ಶಿಲೆ ಮಾನವನಿಗೆ ನೆರವಾಗಿದೆ.[೧೮] ಒಟ್ಟಿನಲ್ಲಿ ಅಂದು ಮಾನವ ಜೀವನದ ಒಂದು ಭಾಗವಾಗಿ ಶಿಲೆ ಬಳಕೆಯಾಗುತ್ತಿತ್ತು. ಈ ಕಾಲಾವಧಿಯನ್ನು ಶಿಲಾಯುಗ (ಸ್ಟೋನೇಜ್) ಎಂದು ಕರೆಯುತ್ತಾರೆ. ಅತ್ಯಂತ ದೀರ್ಘವಾದ ಈ ಯುಗವನ್ನು ಕ್ರಮವಾಗಿ ೧. ಹಳೇ ಶಿಲಾಯುಗ ಅದರಲ್ಲಿ ಎ. ಆದಿ ಹಳೇ ಶಿಲಾಯುಗ, ಬಿ. ಮಧ್ಯ ಹಳೇ ಶಿಲಾಯುಗ, ಸಿ. ಅಂತ್ಯ ಹಳೇ ಶಿಲಾಯುಗ, ೨. ಸೂಕ್ಷ್ಮ ಶಿಲಾಯುಗ, ೩. ನವಶಿಲಾಯುಗ, ೪. ಬೃಹತ್ ಶಿಲಾಯುಗ, ಎಂದು ನಾಲ್ಕು ಹಂತಗಳಾಗಿ ವಿಭಾಗಿಸಲಾಗಿದೆ.[೧೯]

ಈ ಪರಿಸರದಲ್ಲಿನ ಪ್ರಾಗಿತಿಹಾಸ ಕಾಲ ಮತ್ತು ನಂತರದ ಕಾಲದ ಪುರಾತತ್ವ ಅವಶೇಷಗಳನ್ನು ೧೯ನೇ ಶತಮಾನದ ಕೊನೆಯಲ್ಲೇ, ಶೋಧಿಸುವ ಪ್ರಯತ್ನಗಳು ಪ್ರಾರಂಭವಾದವು. ಅಂದಿನ ಬ್ರಿಟಿಷ್ ಸರಕಾರದ ಅಧಿಕಾರಿಯಾಗಿದ್ದ ಮೆಡೋಸ್ ಟೈಲರ್‌ನಿಂದ ಆರಂಭಗೊಂಡು ಇಂದಿನವರೆಗೆ ಪ್ರಯತ್ನಗಳು ನಡೆಯುತ್ತಲೇ ಬಂದಿವೆ. ಅವರ ನಂತರ ಪುರಾತತ್ವ ವಿದ್ವಾಂಸರಾದ ಎಂ. ಶೇಷಾದ್ರಿ, ಎಸ್. ನಾಗರಾಜು, ಪಿ.ಬಿ. ದೇಸಾಯಿ, ಎಸ್.ಎಂ. ರೆಹಮಾನ್ ಮತ್ತು ವಿಶೇಷವಾಗಿ ಅ. ಸುಂದರ ಅವರು ಮಾನ್ಯಖೇಟದಲ್ಲಿ ಕ್ರಿ.ಶ. ೧೯೬೮ರಲ್ಲಿ ಸಂಶೋಧನೆ ಮಾಡುವುದರ ಮೂಲಕ ಅನೇಕ ಕುರುಹುಗಳನ್ನು ಮಧ್ಯ ಶಿಲಾಯುಗ ಮತ್ತು ಅಂತ್ಯ ಶಿಲಾಯುಗಕ್ಕೆ ಸಂಬಂಧಿಸಿದ ನೆಲೆ ಎಂದು ಪತ್ತೆ ಹಚ್ಚಿದ್ದಾರೆ. ಮುಂತಾದವರು ಈ ಪ್ರದೇಶದಲ್ಲಿ ಸಂಶೋಧನೆಗಳನ್ನು ಕೈಗೊಂಡಿದ್ದರಿಂದ ಪ್ರಸ್ತುತ ಅಧ್ಯಯನ ಪರಿಸರದ ಪ್ರಾಗಿತಿಹಾಸ ಮತ್ತು ಇತಿಹಾಸದ ಹಲವು ಮಜಲುಗಳನ್ನು ತಿಳಿಯುವಂತಾಗಿದೆ.

೧. **ಹಳೇ ಶಿಲಾಯುಗ:** ಪ್ರಾಗಿತಿಹಾಸ ಕಾಲಕ್ಕೆ ಸಂಬಂಧಿಸಿದಂತೆ ೩ ರೀತಿಯಲ್ಲಿ ವಿವರಿಸಬಹುದಾಗಿದೆ. ಎ. ಆದಿ ಹಳೆ ಶಿಲಾಯುಗ, ಬಿ. ಮಧ್ಯ ಶಿಲಾಯುಗ, ಸಿ. ಅಂತ್ಯ ಶಿಲಾಯುಗ ಎಂದು ವಿಭಾಗಿಸಿ ಒಟ್ಟಿನಲ್ಲಿ ಹಳೆಯ ಶಿಲಾಯುಗವನ್ನು ಪ್ಲೇಸ್ಟೋಸಿನ್ ಯುಗವೆಂದು ಕರೆಯುತ್ತಾರೆ.

### ಎ. ಆದಿ ಹಳೇ ಶಿಲಾಯುಗ

ಆದಿ ಹಳೆಯ ಶಿಲಾಯುಗದ ಇತಿಹಾಸದ ಬಗ್ಗೆ ಕರ್ನಾಟಕದಲ್ಲಿ ವಿಸ್ತೃತವಾದ ಅಧ್ಯಯನಗಳು ನಡೆದಿವೆ. ಕೃಷ್ಣ, ಕಾವೇರಿ, ತುಂಗಭದ್ರಾ ಮತ್ತು ಅವುಗಳ ಉಪನದಿಗಳಾದ ಭೀಮಾ ಹಾಗೂ ಕಾಗಿಣಾ ನದಿಗಳ ಪ್ರದೇಶದಲ್ಲಿ ಹಳೆ ಶಿಲಾಯುಗದ ಮಾನವನ ಬದುಕು ರೂಪಗೊಂಡಿದ್ದನ್ನು ಸಂಶೋಧನೆಯ ಮೂಲಕ ಪತ್ತೆ ಹಚ್ಚಿದ್ದಾರೆ. ಈ ಆದಿ ಹಳೆಯ ಶಿಲಾಯುಗದ ನೆಲೆಗಳು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕೆಲವು ಕಡೆ ಮಾತ್ರವೇ ಅದರ ಅವಶೇಷಗಳು ಕಂಡುಬಂದಿವೆ. ಇದೆ ಪರಿಸರದ ಚಿತ್ತಾಪೂರ ತಾಲೂಕಿನ ಕೊಲ್ಲೂರು, ಸೊಂತಿ (ಸನ್ನತಿ ಭೀಮಾ ಬಲದಂಡೆ) ಈ ಆದಿ ಹಳೆ ಶಿಲಾಯುಗಗಕ್ಕೆ ಸೇರಿದ ಪ್ರಮುಖ ಸ್ಥಳಗಳಾಗಿವೆ.[೨೦] ಇಂತಹ ಕಾರಣಗಳಿಂದ

ಪ್ರಸ್ತುತ ಅಧ್ಯಯನದ ಪರಿಸರವು ಪ್ರಾಗಿತಿಹಾಸದ ನೆಲೆಯಾಗಿದ್ದು ದೃಡಪಡುತ್ತದೆ. ಮಾನ್ಯಖೇಟದಲ್ಲಿ ಆದಿ ಹಳೆ ಶಿಲಾಯುಗಕ್ಕೆ ಸಂಬಂಧಿಸಿದಂತೆ ಯಾವುದೇ ಕುರುಹುಗಳು ಮತ್ತು ನೆಲೆಗಳು ಕಂಡುಬಂದಿಲ್ಲ. ಆದರೆ ಪ್ರಸ್ತುತ ಅಧ್ಯಯನದ ಪರಿಸರದಲ್ಲಿ ಆದಿ ಹಳೇ ಶಿಲಾಯುಗದ ಅವಶೇಷಗಳು ಮತ್ತು ನೆಲೆಗಳು ಕಂಡುಬಂದಿವೆ. ಮುಖ್ಯವಾಗಿ ಸೊಂತಿ (ಸನ್ನತಿ ಭೀಮಾ ಬಲದಂಡೆ) ಆದಿ ಹಳೇ ಶಿಲಾ ಸಂಸ್ಕೃತಿಯ ನೆಲೆಯಿದು. ಇಲ್ಲಿ ಅಶ್ಯೂಲಿಯನ್ ಮಾದರಿಯ ಉಪಕರಣಗಳು ದೊರೆತಿವೆ.[೨೧] ಇದೆ ಪರಿಸರದ ಕೊಲ್ಲೂರಿನಲ್ಲಿ ಸಹ ಕೆಲವು ಆದಿ ಹಳೇ ಶಿಲಾಯುಗದ ಉಪಕರಣಗಳು ದೊರೆತಿವೆ. ಆದ್ದರಿಂದ ಇದು ಸಹ ಆದಿ ಹಳೇ ಶಿಲಾಯುಗದ ನೆಲೆಯಾಗಿದ್ದು ಇಲ್ಲಿಯ ಉಪಕರಣಗಳು ಅಶ್ಯೂಲಿಯನ್ ಮಾದರಿಯಲ್ಲಿವೆ.[೨೨] ಈ ಭೂಪ್ರದೇಶವು ಭೀಮಾ ನದಿಯ ಬಲದಂಡೆಯಲ್ಲಿದ್ದು, ಸ್ಥಳೀಯವಾಗಿ ಸಿಗುವ ಕಲ್ಲನ್ನೇ ಬಳಸಿಕೊಂಡು ಆದಿ ಹಳೇ ಶಿಲಾಯುಗದ ಮಾನವನು ಈ ಪರಿಸರದಲ್ಲಿ ವ್ಯವಸ್ಥಿತವಾದ ಜೀವನ ಸಾಗಿರುವುದು ಕಂಡುಬರುತ್ತದೆ.

**ಬಿ. ಆದಿ ಮಧ್ಯ ಶಿಲಾಯುಗ**

ಈ ಕಾಲದ ನೆಲೆಯನ್ನು ಶೋಧಿಸಿದವರು ರಾಬರ್ಟ್ ಬ್ರೂಸ್‌ಫೂಟ್ ತಮ್ಮ ಸಂಶೋಧನೆಯಲ್ಲಿ ಮಧ್ಯ ಶಿಲಾಯುಗದ ಉಪಕರಣಗಳನ್ನು ಸಂಗ್ರಹಿಸಿದರು. ಮತ್ತು ಆರ್.ಡಿ. ಬ್ಯಾನರ್ಜಿಯವರು ಕರ್ನಾಟಕದಲ್ಲಿ ಈ ಸಂಸ್ಕೃತಿಯು ಇರುವ ಬಗೆಗೆ ೧೯೫೭ರಲ್ಲಿ ಗುರುತಿಸಿದರು. ಆದರೆ ಪ್ರಮುಖವಾಗಿ ೧೯೬೮ರಲ್ಲಿ ಪ್ರಸ್ತುತ ಅಧ್ಯಯನದ ರಾಷ್ಟ್ರಕೂಟ ಸಾಮ್ರಾಜ್ಯದ ರಾಜಧಾನಿಯಾಗಿದ್ದ ಮಾನ್ಯಖೇಟವು ಭೀಮಾ ನದಿಯ ಉಪನದಿಯಾದ ಕಾಗಿಣಾದ ಎಡದಂಡೆಯ ಮೇಲಿದೆ. ಈ ಹಳ್ಳಿಯ ಸುತ್ತಮುತ್ತ ಅ. ಸುಂದರ ಅವರು ನಡೆಸಿದ ಸರ್ವೇಕ್ಷಣೆಯಲ್ಲಿ ಆದಿ ಮಧ್ಯ ಶಿಲಾಯುಗದ ಕಾಲದ ಅವಶೇಷಗಳು ಕಂಡುಬಂದಿವೆ.

ಕಾಗಿಣಾ ನದಿಯ ತಳದಲ್ಲಿ ಮತ್ತು ಎಡದಂಡೆಯ ಮೇಲೆ ಮಧ್ಯ ಶಿಲಾಯುಗದ ಹರೆಚಕ್ಕೆ ಮತ್ತು ಮೊನೆಗಳು ಕಂಡುಬಂದವು. ಇವು ಚರ್ಟಯುಕ್ತ ಜಾಸ್ಪರ್ ಕಲ್ಲಿನಿಂದ ಮಾಡಿದ ಉಪಕಣಗಳು. ಇದೇ ದಂಡೆಯ ಮೇಲೆ ಎತ್ತರಕ್ಕಿರುವ ದುಗ್ಗಮ್ಮನ ಅಣಿ ಎಂಬ ಹೆಸರಿನ ಏರು ದಿಣ್ಣೆಯಲ್ಲಿ ಅಲಗಿನಂತಹ ಕೊಳವೆಯಾಕಾರದ ಮೂಲಶಿಲೆಯ ತಿರುಳು ದೊರೆತಿವೆ.[೨೧] ಇಂತಹ ಕಾರಣದಿಂದ ಪ್ರಸ್ತುತ ಅಧ್ಯಯನ ಪರಿಸರವು ಮಧ್ಯ ಶಿಲಾಯುಗದ ನೆಲೆಯಾಗಿರುವುದು ಕಂಡುಬರುತ್ತದೆ.

ಸೊಂತಿ (ಸನ್ನತಿ ಭೀಮಾ ಬಲದಂಡೆ) ಇದು ಸಹ ಪ್ರಸ್ತುತ ಅಧ್ಯಯನದ ಮಧ್ಯ ಶಿಲಾಯುಗದ ನೆಲೆಯಾಗಿದೆ. ಇಲ್ಲಿ ಈ ಸಂಸ್ಕೃತಿಯ ವಿವಿಧ ಉಪಕರಣಗಳು ದೊರೆತಿವೆ. ಹಾಗೂ ಮಧ್ಯ ಶಿಲಾಯುಗದ ಕಾಲದ ವಾಸ್ತವ್ಯವಿರುವಂತಹ ದಿಬ್ಬವು ಸೊಂತಿಯಲ್ಲಿ ಪತ್ತೆಯಾಗಿದೆ.[೨೨] ಈ ರೀತಿಯಾದ ಅವಶೇಷಗಳು ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಪತ್ತೆಯಾಗಿರುವುದರಿಂದ ಮಾನ್ಯಖೇಟ ಪರಿಸರವು ಪ್ರಾಗಿತಿಹಾಸದ ನೆಲೆಯಾಗಿತ್ತು ಎಂದು ಕಂಡುಬರುತ್ತದೆ.

### ಸಿ. ಅಂತ್ಯ ಹಳೇ ಶಿಲಾಯುಗ

ಹಳೇ ಶಿಲಾಯುಗ ಸಂಸ್ಕೃತಿಯ ಕೊನೆಯ ಹಂತವೇ ಅಂತ್ಯ ಶಿಲಾಯುಗದ ಸಂಸ್ಕೃತಿಯಾಗಿದೆ. ಪ್ರಸ್ತುತ ಅಧ್ಯಯನದ ಪರಿಸರದಲ್ಲಿ ಈ ಹಂತದ ನೆಲೆಗಳು ಸಂಖ್ಯೆಯಲ್ಲಿ ಅತ್ಯಂತ ಕಡಿಮೆಯಾಗಿವೆ. ಪ್ರಸ್ತುತ ಪರಿಸರದ ಚಿತ್ತಾಪೂರ ತಾಲೂಕಿನ ಸನ್ನತಿಯಲ್ಲಿ ಆದಿ ಅಂತ್ಯ ಶಿಲಾಯುಗದ ಕಾಲಕ್ಕೆ ಸೇರಿದ ಉಪಕರಣಗಳು ಸಿಗದೆ ಇದ್ದರೂ ಅದರ ಸುತ್ತಮುತ್ತಲಿನ ಪ್ರದೇಶವಾದ ಭೀಮಾನದಿಯನ್ನು ಸೇರುವ ಸಂಗಮ ಸ್ಥಾನದಲ್ಲಿ ಎಡದಂಡೆಯುದ್ದಕ್ಕೂ, ಬೆಣಚುಕಲ್ಲು, ಸ್ಫಟಿಕಶಿಲೆ ಹಾಗೂ ಚಕಮಕಿ ಕಲ್ಲುಗಳ ದಪ್ಪ ಹಾಗೂ ತೆಳ್ಳನೆಯ ಚಕ್ಕೆಗಳ ಮೇಲೆ ರೂಪಿಸಿದ ವಿವಿಧ ರೀತಿಯ ಹಂತವಾದ ಅಂಚಿನ ನೀಳಚಕ್ಕೆ ಮತ್ತು ಹರೆಚಕ್ಕೆಗಳು ಎಂಬ ಅನೇಕ ಬಗೆಯ ಉಪಕರಣಗಳು ಅಂತ್ಯ ಶಿಲಾಯುಗಕ್ಕೆ ಸಂಬಂಧಿಸಿದವುಗಳಾಗಿವೆ. ಅಂತ್ಯ ಶಿಲಾಯುಗದ ಪ್ರಮುಖ ನೆಲೆಗೆ ಕಾರಣವಾಗಿದ್ದು ಕಂಡುಬರುತ್ತದೆ.[೨೩]

### ೨. ಸೂಕ್ಷ್ಮ ಶಿಲಾಯುಗ

ಹಳೆಯ ಶಿಲಾಯುಗ ಮತ್ತು ನೂತನ ಶಿಲಾಯುಗದ ನಡುವಿನ ಸಾಂಸ್ಕೃತಿಕ ಅಂತರವನ್ನು ಸೂಕ್ಷ್ಮ ಶಿಲಾಯುಗವೆಂದು ಕರೆಯಲಾಗಿದೆ. ಕರ್ನಾಟಕದಲ್ಲಿ ಈ ಸೂಕ್ಷ್ಮ ಶಿಲಾಯುಗದ ನಿವೇಶನಗಳು ೧೯೩೦ರಲ್ಲಿ ಬೆಳಕಿಗೆ ಬಂದವು. ಇಲ್ಲಿ ದೊರೆತ ಉಪಕರಣಗಳ ವೈಜ್ಞಾನಿಕ ಅಧ್ಯಯನ ಆರಂಭವಾದದ್ದು ೧೯೫೦ರಲ್ಲಿ ಪ್ರಸ್ತುತ ಅಧ್ಯಯನ ಪರಿಸರದ ಐತಿಹಾಸಿಕ ನೆಲೆಯಾದ ಚಂದ್ರಲಾಂಬ ದೇವಾಲಯವಿರುವ ಸನ್ನತಿಯು ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ನೆಲೆಯಾಗಿದೆ. ಈ ಸಂಸ್ಕೃತಿಗೆ ಸಂಬಂಧಿಸಿದ ಹಲವು ಉಪಕರಣಗಳು ಇಲ್ಲಿ ದೊರೆತಿವೆ. ಅವು ನೀಳಚಕ್ಕೆ, ಹರೆಚಕ್ಕೆ, ಅರ್ಧಚಂದ್ರಾಕೃತಿ ಹಾಗೂ ನೀಳಗೆರೆಗಳುಳ್ಳ ಮೂಲ ಶಿಲಾಗಟ್ಟಿಗಳು ದೊರೆತಿದ್ದು, ಕ್ವಾರ್ಟ್ಜ್ ಅಗೇಟ್ ಮತ್ತು ಚಾಲ್ಸಿಡೊನಿ ಶಿಲೆಗಳಲ್ಲಿ ರೂಪಿಸಿದ ಅವಶೇಷಗಳು ಪತ್ತೆಯಾಗಿವೆ.[೨೪] ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಒಂದೆ ಸ್ಥಳದಲ್ಲಿ ಈ ಸಂಸ್ಕೃತಿಯ ಅವಶೇಷಗಳು ದೊರೆತಿರುವುದರಿಂದ ಅತ್ಯಂತ ಪ್ರಮುಖ್ಯತೆ ಪಡೆದಿದೆ. ಚಂದ್ರಲಾಂಬ ದೇವಾಲಯ ಎಂದು ತಿಳಿದುಬರುತ್ತದೆ.

### ೩. ನೂತನ ಶಿಲಾಯುಗ

ಕೃಷಿ ಆಧಾರಿತ ಬದುಕನ್ನು ರೂಪಿಸಿಕೊಂಡು ಹಾಗೂ ಪ್ರಾಣಿಗಳನ್ನು ಪಳಗಿಸಿಕೊಂಡು ಒಂದೆಡೆ ನೆಲೆಯಾಗಿ ನಿಂತು ಗ್ರಾಮೀಣ ಬದುಕನ್ನು ಕಟ್ಟಿಕೊಂಡ ಈ ಹಂತದ ಬೆಳವಣಿಗೆಯನ್ನು ಗೋರ್ಡನ್ ಚೈಲ್ಡ್ "ನೂತನ ಶಿಲಾಯುಗ ಕ್ರಾಂತಿ" ಎಂದು ಕರೆದ ಇಂದಿನ ಗ್ರಾಮೀಣ ಬದುಕಿಗೆ ಇದೇ ಮೂಲ ಕಾರಣ ಹಾಗೂ ಪ್ರೇರಣೆಯಾಗಿದೆ ಎನ್ನಬಹುದು. ಈ ಹಂತದ ಉಪಕರಣಗಳು ಕೊಡಲಿ, ಬಾಚಿ, ಉಳಿ, ಸುತ್ತಿಗೆ, ಕೊಡಲಿ, ಕೆತ್ತುಳಿ, ಉಜ್ಜಿಗ, ಅರೆಯುವ ಕಲ್ಲು, ಕವಣಿಕಲ್ಲು, ಉಂಗುರಕಲ್ಲು ಮೊದಲಾದ ಉಪಕರಣಗಳನ್ನು ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಸಿದ್ಧಗೊಳಿಸಲಾಗಿತೆಂದು ತಿಳಿಯುತ್ತದೆ.[೨೫] ಮಣ್ಣಿನ ಮಡಿಕೆಗಳು ಆರಂಭ ಹಂತದಲ್ಲಿ

ಕೈಯಲ್ಲಿ ರೂಪಿಸಲಾಗುತ್ತಿತ್ತು. ನತಂರದಲ್ಲಿ ತಿರುಗಿಸಲ್ಪಡುವ ತಿಗರಿ(ಚಕ್ರ)ಗಳಲ್ಲಿ ತಯಾರಿಸಲಾಗುತ್ತಿತ್ತು. ಹೆಚ್ಚು ತೆಳ್ಳನೆಯ ಮೃತ್‌ಪಾತ್ರೆಯಲ್ಲಿ ಕಂಡುಬರುತ್ತದೆ. ಈ ನೂತನ ಶಿಲಾಯುಗಕ್ಕೆ ಸಂಬಂಧಿಸಿದಂತೆ ಪ್ರಸ್ತುತ ಅಧ್ಯಯನ ಕ್ಷೇತ್ರವಾದ ಮಾನ್ಯಖೇಟ ಪರಿಸರದಲ್ಲಿ ಪ್ರಮುಖವಾಗಿ ಕಾಗಿಣಾ ನದಿಯ ಬಲದಂಡೆಯ ಮೇಲೆ ದುಗ್ಗಮ್ಮನ ಅಣೆಯ ಎದುರಿಗೆ ಇರುವ ಸಮಖೇಡ ಎಂಬ ಸ್ಥಳದಲ್ಲಿ ಬೂದುಬಣ್ಣಥ ಮಡಿಕೆ ಚೂರೊಂದು ಸಿಕ್ಕಿದ್ದು ಇದು ನವಶಿಲಾಯುಗದ ಮಣ್ಪಾತ್ರೆಯ ಲಕ್ಷಣಗಳನ್ನು ಹೊಂದಿರುವುದರಿಂದ ಇಲ್ಲಿ ಅ. ಸುಂದರ ಅವರು ೧೯೬೮ರಲ್ಲಿ ತಮ್ಮ ಸಂಶೋಧನೆಯ ಮೂಲಕ ಇದು ನವಶಿಲಾಯುಗದ ನೆಲೆಯಾಗಿತ್ತು ಎಂದು ಪತ್ತಿಹಚ್ಚಿದ್ದಾರೆ.[೨೬] ಈ ರೀತಿಯಾದ ಕಾರಣದಿಂದ ಮಾನ್ಯಖೇಟವು ಅತ್ಯಂತ ಪ್ರಾಮುಖ್ಯತೆ ಹೊಂದಿದೆ. ಅಲ್ಲದೆ ಇದೆ ಪರಿಸರದ ಮತ್ತೊಂದು ಪ್ರಮುಖ ಸ್ಥಳವಾದ ನಸ್ನಲಿ ಮತ್ತು ಅದರ ಸುತ್ತಮುತ್ತಲಿನ ಪರಿಸರದಲ್ಲಿ ಈ ನವಶಿಲಾಯುಗ ಸಂಸ್ಕೃತಿಯ ಹಲವು ಅವಶೇಷಗಳು ದೊರೆತಿರುವುದರಿಂದ ಮಾನ್ಯಖೇಟ ಮತ್ತು ಸನ್ನತಿ ಈ ಸಂಸ್ಕೃತಿಯಲ್ಲಿ ಅತ್ಯಂತ ಮಹತ್ವ ಪಡೆದ ನೆಲೆಯಾಗಿದೆ.

### ೪. ಬೃಹತ್ ಶಿಲಾಯುಗ

ಈ ಬೃಹತ್ ಶಿಲಾಯುಗ ಸಂಸ್ಕೃತಿಯ ಜನರು ಸತ್ತವರಿಗಾಗಿ ದೊಡ್ಡ ದೊಡ್ಡ ಕಲ್ಲುಗಳನ್ನು ನಿಲ್ಲಿಸಿ ಕುತೂಹಲಕರವಾದ ವಿವಿಧ ಮಾದರಿಯ ಬೃಹತ್ ಶಿಲಾಗೋರಿಗಳನ್ನು ನಿರ್ಮಿಸುತ್ತಿದ್ದರಿಂದ ಈ ಸಂಸ್ಕೃತಿಗೆ ಬೃಹತ್ ಶಿಲಾಯುಗ ಸಂಸ್ಕೃತಿ ಎಂದು ಕರೆಯಲಾಗಿದೆ. ವಿಶಿಷ್ಟ ಬಗೆಯ ಸಂಪ್ರದಾಯದಿಂದ ಕೂಡಿದ ಈ ಮಾನವರು ಮುಖ್ಯವಾಗಿ ಕಬ್ಬಿಣದ ಬಳಕೆಯನ್ನು ರೂಪಿಸಿಕೊಂಡಿದ್ದು ಹಾಗೂ ತನ್ನದೇ ಆದ ರೀತಿಯಲ್ಲಿ ಮಡಿಕೆ ಮಾದರಿಗಳನ್ನು ರೂಪಿಸಿಕೊಂಡಿದ್ದನು. ಈ ಸಂಸ್ಕೃತಿಯ ಹಂತದಲ್ಲಿ ಒಂದು ವಾಸ್ತವ್ಯ ನೆಲೆಯಾದರೆ ಮತ್ತೊಂದು ಗೋರಿ ನೆಲೆಯಾಗಿದೆ. ಶವಸಂಸ್ಕಾರಕ್ಕಾಗಿ ವಿವಿಧ ಸ್ಥಳಗಳಲ್ಲಿ ಕಂಡುಬರುವ ನೂರಾರು ಕಲ್ಲಿನ ಗೋರಿಗಳು ಈ ಸಂಸ್ಕೃತಿಯ ವೈಶಿಷ್ಟ್ಯವನ್ನು ಹೆಚ್ಚಿಸಿವೆ.

ಪ್ರಸ್ತುತ ಅಧ್ಯಯನದ ಪರಿಸರದಲ್ಲಿ ಕಂಡುಬರುವ ಪ್ರಮುಖ ಬೃಹತ್ ಶಿಲಾಯುಗ ನೆಲೆಯೆಂದರೆ ರಾವೂರ್. ಇಲ್ಲಿ ಬೃಹತ್ ಶಿಲಾಯುಗದ ಸಮಾಧಿಗೆ ಸೇರಿದ ಕಲ್ಮನೆಗಳು ಪತ್ತೆಯಾಗಿವೆ.[೨೬] ಪ್ರಸ್ತುತ ಅಧ್ಯಯನ ಪರಿಸರದಲ್ಲಿನ ಪೆಟಶಿರೂರು ಹಾಗೂ ಶಾಹಾಬಾದ್‌ನಲ್ಲಿ ಕೂಡ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳಾಗಿದ್ದು ಶಾಹಾಬಾದ್‌ನಲ್ಲಿ ಈ ಸಂಸ್ಕೃತಿಗೆ ಸಂಬಂಧಿಸಿದ ಕಲ್ಲುಗುಪ್ಪೆಗಳು ಪತ್ತೆಯಾಗಿವೆ.[೨೭] ಈ ನೆಲೆಗಳನ್ನು ಪುರಾತತ್ವಜ್ಞರು ಇಲ್ಲಿ ಗೋರಿಗಳನ್ನು ಪತ್ತೆ ಹಚ್ಚುವುದರ ಮೂಲಕ ಮಾನ್ಯಖೇಟ ಪರಿಸರವು ಬೃಹತ್ ಶಿಲಾಯುಗಕ್ಕೆ ಸೇರಿತ್ತೆಂದು ನಿರ್ಧರಿಸಿದ್ದಾರೆ.

### ಇತಿಹಾಸ

ಮಾನವನ ವಿಕಾಸದ ಹಂತದಲ್ಲಿ ಲಿಪಿಯ ಆವಿಷ್ಕಾರವು ಬಹುಮುಖ್ಯವಾದ ಅಂಶವಾಗಿದೆ. ಲಿಪಿಯ ಆವಿಷ್ಕಾರದ ನಂತರದ ಹಂತವನ್ನು ಅಂದರೆ ಬರವಣಿಗೆಯು ಗೊತ್ತಾದ ಅವಧಿಯನ್ನು

ಇತಿಹಾಸ ಕಾಲವೆಂದು ಕರೆಯಬಹುದು. ಈ ಪ್ರದೇಶದಲ್ಲಿ ಶಾಸನಗಳು ದೊರೆಯುವ ಕಾಲದಿಂದ ಅಂದರೆ ಮೌರ್ಯರಿಂದ ಹಿಡಿದು ಬ್ರಿಟಿಷರ ಕಾಲದವರೆಗೂ ಆಳ್ವಿಕೆ ನಡೆಸಿದ ವಿವಿಧ ರಾಜವಂಶಗಳ ಪರಿಚಯವನ್ನು ತಿಳಿಯಬಹುದು. ಈ ಪ್ರಸ್ತುತ ಅಧ್ಯಯನ ಪ್ರದೇಶವು ವಿವಿಧ ಕಾಲಘಟ್ಟಗಳಲ್ಲಿ ಕರ್ನಾಟಕವನ್ನಾಳಿದ ಪ್ರಮುಖ ರಾಜಮನೆತನಗಳ ಸಾಮ್ರಾಜ್ಯದೊಳಗೆ ಈ ಭಾಗವು ಸೇರಿತ್ತು. ಕೆಲವು ಆಡಳಿತ ವಿಭಾಗಗಳಿಂದಲೂ ಈ ವಿಷಯ ದೃಢಪಡುತ್ತದೆ.

ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದ ಈ ಪರಿಸರದಲ್ಲಿ ಮೌರ್ಯರು, ಶಾತವಾಹನರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಲಚೂರಿಗಳು, ಹೈಹಯರು, ಬಹುಮನಿಯ ಅರಸರು, ವಿಜಯನಗರದ ಅರಸರು, ಕುತುಬ್‌ಶಾಹಿಗಳು, ನಿಜಾಮರು ಮತ್ತು ಬ್ರಿಟಿಷರ ಆಳ್ವಿಕೆಯು ಇಲ್ಲಿ ನಡೆಸಿರುವುದಕ್ಕೆ ಅನೇಕ ಆಧಾರಗಳು ಸಿಗುತ್ತವೆ. ಇವರಲ್ಲಿ ಮಾನ್ಯಖೇಟದ ರಾಷ್ಟ್ರಕೂಟರು ಮತ್ತು ಕಲ್ಯಾಣದ ಚಾಲುಕ್ಯರು ಪ್ರಸ್ತುತ ಪರಿಸರದಲ್ಲಿ ಆಳ್ವಿಕೆ ಮಾಡಿದವರಲ್ಲಿ ಅತ್ಯಂತ ಪ್ರಮುಖರಾಗಿದ್ದಾರೆ.

## ೨.೪ ಚಾರಿತ್ರಿಕ ಹಿನ್ನೆಲೆ

ಪ್ರಾಗಿತಿಹಾಸ ಕಾಲದ ನಂತರ ಇತಿಹಾಸ ಕಾಲದ ಆರಂಭ ಇದನ್ನು ಅರಸು ಮನೆತನಗಳ ಕಾಲವೆಂತಲೂ ಕರೆಯುತ್ತಾರೆ. ಮೌರ್ಯರು ಶಾತವಾಹನರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಳಚೂರಿರ್ಯರು, ಹೈಹಯರು, ಬಹುಮನಿ ಅರಸರು, ವಿಜಯನಗರ ಅರಸರು, ಗೋಲ್ಕೊಂಡಾದ ಕುತುಬ್‌ಷಾಹಿಗಳು, ಹೈದ್ರಾಬಾದ್ ನಿಜಾಮರು ಮತ್ತು ಬ್ರಿಟಿಷರು ಹೀಗೆ ಅನೇಕ ಅರಸು ಮನೆತನಗಳು ಮಾನ್ಯಖೇಟ ಪರಿಸರದಲ್ಲಿ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ.

### ಮೌರ್ಯರು

ಪ್ರಸ್ತುತ ಅಧ್ಯಯನ ಪರಿಸರದ ಇತಿಹಾಸವು ಮೌರ್ಯರ ಕಾಲದಿಂದ ಪ್ರಾರಂಭವಾಗುತ್ತದೆ. ಈ ಪ್ರದೇಶವು ಮೌರ್ಯ ಚಕ್ರವರ್ತಿ ಅಶೋಕನ ಆಳ್ವಿಕೆಗೆ ಒಳಪಟ್ಟಿತ್ತು. ಈ ಪರಿಸರದ ಚಿತ್ತಾಪೂರ ತಾಲೂಕಿನ ಸನ್ನತಿಯಲ್ಲಿ ಅಶೋಕನ ಪ್ರಮುಖ ಶಾಸನವು ದೊರೆತಿರುವುದರಿಂದ ಈ ಭಾಗವು ಅವನ ಸಾಮ್ರಾಜ್ಯದ ಕೇಂದ್ರವಾಗಿರುವುದಕ್ಕೆ ಸಾಕ್ಷಿಯಾಗಿದೆ. ಸನ್ನತಿ ಗ್ರಾಮದಲ್ಲಿ ಅಶೋಕನ ಎರಡು ಶಾಸನಗಳು ಲಭ್ಯವಾಗಿವೆ. ಒಂದನೇ ಶಾಸನದಲ್ಲಿ ಧರ್ಮ ಸಹಿಷ್ಣುತೆಯ ಬಗ್ಗೆ ಹೇಳಲಾಗಿದೆ. ಎರಡನೇ ಶಾಸನದಲ್ಲಿ ಶಾಸನಗಳಲ್ಲಿ ಇರಬಹುದಾದ ಲಿಪಿಕಾರನ ಅಸಮರ್ಪಕತೆಗೆ ಕ್ಷೇಮಯಾಚನೆ ರೂಪದಲ್ಲಿದೆ. ಇಲ್ಲಿನ ಶಾಸನಗಳು ಬ್ರಾಹ್ಮೀಲಿಪಿ ಮತ್ತು ಪ್ರಾಕೃತ ಭಾಷೆಯಲ್ಲಿವೆ. ಇವೆಲ್ಲದಕ್ಕಿಂತ ಮಿಗಿಲಾಗಿ ಇದೊಂದು ಪ್ರಸಿದ್ಧ ಬೌದ್ಧ ನಿವೇಶನವಾಗಿದೆ. ಈ ನಿವೇಶನವನ್ನು ಕಪಟರಾಳ ಕೃಷ್ಣರಾವ್ ಕಂಡುಹಿಡಿದರು. ನಂತರ ಪಿ.ಬಿ. ದೇಸಾಯಿ, ಎಸ್. ನಾಗರಾಜ, ಅ. ಸುಂದರ್ ಮುಂದಾದ ವಿದ್ವಾಂಸರುಗಳಿಂದ ಕರ್ನಾಟಕ ರಾಜ್ಯ

ಪುರಾತತ್ವ ಇಲಾಖೆಯಿಂದ ಸರ್ವೇಕ್ಷಣೆ, ಭೂ ಉತ್ಖನನ ಕಾರ್ಯಗಳು ನಡೆದಿವೆ. ಉತ್ಖನನದಿಂದ ಇಲ್ಲಿ ಇಟ್ಟಿಗೆ, ಮಣ್ಣಿನ ಪಾತ್ರೆಗಳು, ಶಂಖದ ಆಭರಣಗಳು, ಬುದ್ಧನ ಪಾದ, ಹಾವಿನ ಹೆಡೆಯಿರುವ ಶಿಲ್ಪಗಳು ದೊರಕಿವೆ. ಒಟ್ಟಿನಲ್ಲಿ ಸನ್ನತಿಯು ಮೌರ್ಯರ ಕಾಲಕ್ಕೆ ಸೇರಿದ ಪ್ರಸ್ತುತ ಅಧ್ಯಯನ ಪರಿಸರದ ಪ್ರಾಚೀನ ಬೌದ್ಧ ನಿವೇಶನವಾಗಿದೆ.[೨೮]

## ಶಾತವಾಹನರು

ದಕ್ಷಿಣ ಭಾರತದಲ್ಲಿ ಮೌರ್ಯರ ನಂತರ ಅವರ ಅಧಿಕಾರವನ್ನು ಮುಂದುವರೆಸಿಕೊಂಡು ಹೋದವರು ಶಾತವಾಹನರು. ಮೌರ್ಯರ ಅವನತಿಯ ನೂರು ವರ್ಷಗಳ ನಂತರ ಏಳಿಗೆ ಹೊಂದಿದರು. ಆದ್ದರಿಂದ ಮೌರ್ಯರಿಗೂ ಹಾಗೂ ಶಾತವಾಹನರಿಗೂ ಹಲವು ವಿಷಯಗಳಲ್ಲಿ ಹೋಲಿಕೆ ಇದೆ.[೨೯] ಶಾತವಾಹನರ ಸಾಮ್ರಾಜ್ಯವು ಕರ್ನಾಟಕದ ಉತ್ತರ ಭಾಗದಿಂದ ನರ್ಮದಾ ನದಿಯ ತೀರದವರೆಗೆ ವಿಸ್ತಾರಗೊಂಡಿದೆ. ಈ ಮನೆತನದ ಮೂಲ ಪುರುಷ 'ಶಾತವಾಹನ' ಎಂಬುವವನಿಂದ ಈ ಮನೆತನಕ್ಕೆ ಶಾತವಾಹನ ಎಂದು ಹೆಸರು ಬಂದಿದೆ.[೨೯] ಶಾಸನಗಳಲ್ಲಿ ಶಾತವಾಹನರ ಅರಸರು ಆಂಧ್ರಪ್ರದೇಶಕ್ಕೆ ಸೇರಿದವರೆಂದು ಉಲ್ಲೇಖಿಸಲಾಗಿದೆ. ಇದು ಅಲ್ಲದೆ ಈ ಮನೆತನದ ಮೂಲ ಪುರುಷ ಸಿಮುಖನು ಹಲವು ರಾಜರುಗಳನ್ನು ಸೋಲಿಸಿ 'ರಾಜಾ ಸಿಮುಖ ಶಾತವಾಹನ' ಎಂದು ಬಿರುದು ಪಡೆದುಕೊಂಡನು. ಗೌತಮಿಪುತ್ರ ಶಾತಕರ್ಣಿಯು ಶಾತವಾಹನರ ಅರಸರಲ್ಲೇ ಸರ್ವಶ್ರೇಷ್ಠ ಅರಸನಾಗಿದ್ದಾನೆ. ಶಾತವಾಹನರು ದಕ್ಷಿಣ ಭಾರತದಲ್ಲಿ ಮತ್ತೊಮ್ಮೆ ತಮ್ಮ ಸಾರ್ವಭೌಮವನ್ನು ಸ್ಥಾಪಿಸಿದರು.

ಪ್ರಸ್ತುತ ಅಧ್ಯಯನ ಪರಿಸರದಲ್ಲಿನ ಸನ್ನತಿಯಲ್ಲಿ ಶಾತವಾಹನರಿಗೆ ಸಂಬಂಧಿಸಿದ ಹಲವು ಅವಶೇಷಗಳು ದೊರೆತಿವೆ. ಅವುಗಳಲ್ಲಿ ಜನವಸತಿ ಕಟ್ಟಡಗಳು, ಇಟ್ಟಿಗೆಯಿಂದ ನಿರ್ಮಿಸಿದ ರಕ್ಷಣಗೋಡೆ, ಕೋಟೆಯ ಒಳಗಡೆ ಹಲವು ಬಗೆಯ ಕಟ್ಟಡ ಅವಶೇಷಗಳು ಲಭ್ಯವಾಗಿವೆ. ಸನ್ನತಿಯು ಮೌರ್ಯರ ಕಾಲಕ್ಕೆ ದೊಡ್ಡ ನಗರವಾಗಿದ್ದು, ಶಾತವಾಹನರ ಕಾಲಕ್ಕೆ ಮತ್ತಷ್ಟು ಪ್ರಗತಿಯನ್ನು ಹೊಂದಿತು. ಇಲ್ಲಿಯ ನಾಲ್ಕು ಶಾಸನಗಳು ನೇರವಾಗಿ ಶಾತವಾಹನರನ್ನು ಕುರಿತು ಉಲ್ಲೇಖಿಸುತ್ತವೆ. ಅವುಗಳಲ್ಲಿ ವಿಶೇಷವಾಗಿ ಗೌತಮಿಪುತ್ರ ಶಾತಕರ್ಣಿ ಮತ್ತು ವಸಿಷ್ಠ ಪುಳುಮಾಯಿಯ ಉಲ್ಲೇಖವಿದೆ. ಇವುಗಳ ಜೊತೆಗೆ ಕ್ರಿ.ಶ. ೧–೨ನೇ ಶತಮಾನದ ೭೧ ತೃಟಿತ ಶಾಸನಗಳು ಇದೆ. ಪ್ರಸ್ತುತ ಅಧ್ಯಯನದ ಪರಿಸರದಲ್ಲಿ ಲಭ್ಯವಾಗಿವೆ. ಇಂತಹ ಹಲವು ಕಾರಣಗಳಿಂದ ಇಲ್ಲಿ ಗೌತಮಿಪುತ್ರ ಸಾತಕರ್ಣಿ, ನಂತರ ವಸಿಷ್ಟಪುತ್ರ ಪುಳುಮಾಯಿ, ಯಜ್ಞಾಶ್ರೀ, ವಿಜಯ, ಚಂದ್ರಶ್ರೀ ಮತ್ತು ಪುಲೋಮೆ ಇವರು ಅನುಕ್ರಮವಾಗಿ ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ.[೩೧] ಶಾತವಾಹನರು ಈ ಮೇಲಿನ ಅಂಶಗಳಿಂದ ಈ ಪರಿಸರದಲ್ಲಿ ತಮ್ಮದೇ ಆದ ಕೊಡುಗೆ ನೀರುವುದು ಕಂಡುಬರುತ್ತದೆ.

ವಿಶೇಷವಾಗಿ ಹಾಲನ ಗಥಾಸಪ್ತಸತಿ (ಗಥಾಸಪ್ತಸತಿ)ಯಲ್ಲಿ ಬರುವ ಜನಸಾಮಾನ್ಯರ ಜೀವನಶೈಲಿಯ ವರ್ಣನೆಯು ಸನ್ನತಿಯಲ್ಲಿ ದೊರೆತ ಅವಶೇಷಗಳಿಗೆ ಹೋಲಿಕೆ ಇದೆ.

ಇದೊಂದು ನಗರ ಜೀವನದಿಂದ ಕೂಡಿದ ಪರಿಸರವಾಗಿತ್ತು ಎಂದು ಉತ್ಖನನದಲ್ಲಿ ದೊರೆತ ಅವಶೇಷಗಳಿಂದ ಕಂಡುಬರುತ್ತದೆ.

## ಬಾದಾಮಿ ಚಾಲುಕ್ಯರು

ಕದಂಬರ ನಂತರ ಅಧಿಕಾರಕ್ಕೆ ಬಂದ ಬಾದಾಮಿ ಚಲುಕ್ಯರು ಕ್ರಿ.ಶ. ೫೪೦ ರಿಂದ ೭೫೭ರ ವರೆಗೆ ಕರ್ನಾಟಕದಲ್ಲಿ ಆಳ್ವಿಕೆ ಮಾಡಿದರು. ಇವರ ಸಾಮ್ರಾಜ್ಯವು ಕಾವೇರಿ ನದಿಯಿಂದ ನರ್ಮದಾ ನದಿಯವರೆಗೆ ವಿಸ್ತಾರಗೊಂಡಿತ್ತು. ಇಂದಿನ ಕರ್ನಾಟಕ, ಮಹಾರಾಷ್ಟ್ರ, ಗೋವಾ, ಗುಜರಾತಿನ ಕೆಲವು ಭಾಗಗಳು, ಮಧ್ಯಪ್ರದೇಶ, ಒರಿಸ್ಸಾ, ಆಂಧ್ರಪ್ರದೇಶ ಮತ್ತು ತಮಿಳುನಾಡಿನ ಕೆಲವು ಭಾಗಗಳವರೆಗೆ ಅವರ ಅಧಿಪತ್ಯ ವಿಸ್ತಾರಗೊಂಡಿತ್ತು. ಇಂತಹ ಒಂದು ಮಹಾಸಾಮ್ರಾಜ್ಯವು ಮಾನ್ಯಖೇಟ ಪರಿಸರದಲ್ಲಿಯು ಅಪರೋಕ್ಷವಾಗಿ ಅವರ ಆಳ್ವಿಕೆಗೆ ಒಳಪಟ್ಟಿತ್ತು ಎಂದು ಕಂಡುಬರುತ್ತದೆ. ಈ ಪರಿಸರದಲ್ಲಿ ಅವರ ಯಾವುದೇ ಶಾಸನ ಅಥವಾ ಸ್ಮಾರಕಗಳು ಲಭ್ಯವಾಗಿಲ್ಲ. ಆದರೆ ಇಡೀ ದಕ್ಷಿಣ ಭಾರತದ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಬಾದಾಮಿ ಚಾಲುಕ್ಯರು ಅಪಾರ ಕೊಡುಗೆಗಳನ್ನು ನೀಡಿದ್ದಾರೆ. ಐಹೊಳೆಯು 'ದೇವಾಲಯಗಳ ತೊಟ್ಟಿಲು' ಎಂದು ಕರೆಯಲಾಗಿದೆ. ಇವರ ಕಾಲದಲ್ಲಿ ಆರಂಭವಾದ ದೇವಾಲಯಗಳ ರಚನೆಯನ್ನು ಮುಂದೆ ಬಂದ ಮನೆತನಗಳು ಇದೇ ಶೈಲಿಯಲ್ಲಿ ಮುಂದುವರಿಸಿಕೊಂಡು ಹೋದರು. ಅದರಲ್ಲಿ ವಿಶೇಷವಾಗಿ ಕರ್ನಾಟಕದಲ್ಲಿ ಅಧಿಕಾರಕ್ಕೆ ಬಂದ ಮಾನ್ಯಖೇಟದ ರಾಷ್ಟ್ರಕೂಟರು ಬಾದಾಮಿ ಚಾಲುಕ್ಯರ ಕಲೆ ಮತ್ತು ವಾಸ್ತುಶಿಲ್ಪದ ಕೆಲವು ಅಂಶಗಳನ್ನು ಹಾಗೂ ಬಾದಾಮಿ ಚಾಲುಕ್ಯರ ಆಡಳಿತ ವ್ಯವಸ್ಥೆಯನ್ನು ಮುಂದುವರಿಸಿಕೊಂಡು ಹೋದರು. ಅಲ್ಲದೆ ಬಾದಾಮಿ ಚಾಲುಕ್ಯರ ಸೈನ್ಯವನ್ನು ಕರ್ನಾಟಕದ ಬಲ ಎಂದು ಕರೆದಿರುವ ಕಾರಣ ಬಾದಾಮಿ ಚಾಲುಕ್ಯರು ಅಖಂಡ ಕರ್ನಾಟಕವನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿರುವ ಕಾರಣ ಈ ಹೆಸರು ಬಂದಿದೆ. ಇಂತಹ ಹಲವು ಕಾರಣಗಳಿಂದ ಪ್ರಸ್ತುತ ಅಧ್ಯಯನ ಪರಿಸರವು ಅಪರೋಕ್ಷವಾಗಿ ಬಾದಾಮಿ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿತ್ತು[೩೨] ಎಂದು ಕಂಡುಬರುತ್ತದೆ.

## ರಾಷ್ಟ್ರಕೂಟರು

ಸುಮಾರು ಎರಡು ಶತಮಾನಗಳಿಗೂ ಹೆಚ್ಚುಕಾಲ ಭಾರತದ ಇತಿಹಾಸದಲ್ಲಿ ತಮ್ಮ ಹೆಸರನ್ನು ಅಚ್ಚಳಿಯದಂತೆ ಉಳಿಸಿಕೊಂಡವರು ರಾಷ್ಟ್ರಕೂಟರು. ಪ್ರಬಲವಾದ ಮೌರ್ಯ, ಗುಪ್ತ ಸಾಮ್ರಾಜ್ಯಗಳು ಕೂಡ ಎರಡು ಶತಮಾನಗಳನ್ನು ದಾಟಿ ಅಧಿಕಾರ ನಡೆಸಲು ಸಾಧ್ಯವಾಗಿಲ್ಲ ಆದರೆ ದಕ್ಷಿಣ ಭಾರತವನ್ನು ಸೇರಿಸಿಕೊಂಡು ವಿಸ್ತಾರವಾದ ಸಾಮ್ರಾಜ್ಯವನ್ನು ನಿರ್ಮಿಸಿಕೊಂಡು ರಾಷ್ಟ್ರಕೂಟರು ಆಳಿದರು.

**ದಂತಿದುರ್ಗ (ಕ್ರಿ.ಶ. ೭೩೫–೩೭೬)** ಮೂಲ ಪುರುಷ ೧ನೇ ಕರ್ಕಾ ಇವರ ಲಾಂಛನ 'ಗರುಡ' ರಾಷ್ಟ್ರಕೂಟರ ಪ್ರಥಮ ರಾಜಧಾನಿ ಲಾತೂರು, ೨ನೇ ರಾಜಧಾನಿ ಎಲ್ಲೋರ ಹಾಗೂ ೩ನೇ ರಾಜಧಾನಿ ಮಾನ್ಯಖೇಟವಾಗಿತ್ತು. ಆದರೆ ದಂತಿದುರ್ಗ ನಿಜವಾದ ರಾಷ್ಟ್ರಕೂಟರ

ಮೂಲ ಪುರುಷ ಎಂದು ಗುರುತಿಸಲ್ಪಡುತ್ತಾನೆ. ರಾಷ್ಟ್ರಕೂಟರ ಮೂಲ ಇತಿಹಾಸವನ್ನು ನಿಕರವಾಗಿ ಗುರುತಿಸಲ್ಪಟ್ಟಿಲ್ಲ. ಅಶೋಕನ ಕಾಲದ ರಥಿಕರೆ ರಾಷ್ಟ್ರಕೂಟರೆಂದು ಒಂದು ಐತಿಹ್ಯವಿದೆ. ಆದರೆ ಇದಕ್ಕೆ ಆಧಾರಗಳಿಲ್ಲ. ರಾಷ್ಟ್ರಕೂಟರು ಕನ್ನಡಿಗರು ಎಂಬುದಕ್ಕೆ ಸಾಕಷ್ಟು ಪುರಾವೆಗಳಿವೆ. ರಾಷ್ಟ್ರಕೂಟರ ಮುಮ್ಮಡಿ ಕೃಷ್ಣನ ಬುಂದೇಲಖಂಡದ ಶಾಸನ ಕನ್ನಡದಲ್ಲಿದೆ. ಕರ್ನಾಟಕದಲ್ಲಿ ರಾಷ್ಟ್ರಕೂಟರು ಅಥವಾ ರಟ್ಟರು ಎಂದು ಹೆಸರಾದ ಈ ರಾಜಮನೆತನದ ರಾಜಪುತಾನದಲ್ಲಿ ರಾಠಾರ್ ಎಂದು ಪ್ರಸಿದ್ಧಿಗೆ ಬಂದಿತು. ದಂತಿದುರ್ಗನ ತಂದೆ ೧ನೇ ಇಂದ್ರನು ಚಾಲುಕ್ಯರ ಸಾಮಂತನಾಗಿದ್ದನು. ಚಾಲುಕ್ಯ ರಾಜಪುತ್ರಿ ಭಾವನಾಳನ್ನು ಮದುವೆಯಾಗಿದ್ದನು. ಇವರಿಗೆ ಜನಿಸಿದ ಮಗನೇ ದಂತಿದುರ್ಗ. ಈ ದಂತಿದುರ್ಗನ ಕಾಲದಲ್ಲಿ ದಕ್ಷಿಣ ಭಾಗದಲ್ಲಿ ಚಾಲುಕ್ಯರು ಮತ್ತು ಪಲ್ಲವರು ಪ್ರಬಲರಾಗಿದ್ದರು. ಇದೆ ಸಮಯದಲ್ಲಿ ಉತ್ತರದಲ್ಲಿ ಯಾವುದೇ ಪ್ರಬಲ ರಾಜಮನೆತನಗಳು ಇರಲಿಲ್ಲ. ಇದು ದಂತಿದುರ್ಗನಿಗೆ ಅತ್ಯಂತ ಅನುಕೂಲಕರ ಸಮಯವನ್ನೊದಗಿಸಿತು. ಇದೆ ಸಮಯದಲ್ಲಿ ದಂತಿದುರ್ಗನ ತಂದೆ ಚಾಲುಕ್ಯರ ಮೇಲೆ ಯುದ್ಧ ಘೋಷಿಸಿದನು.

ಇದೇ ಸಮಯವನ್ನು ನೋಡಿ ದಂತಿದುರ್ಗನು ಬಾದಾಮಿ ಚಲುಕ್ಯರ ಇಮ್ಮಡಿ ಕೀರ್ತಿವರ್ಮನನ್ನು ಯುದ್ಧದಲ್ಲಿ ಸೋಲಿಸಿದನು. ಇವರಿಂದಾಗಿ ಚಲುಕ್ಯರ ಉತ್ತರದ ಪ್ರಾಂತ್ಯಗಳಾದ ಕೊಲ್ಲಾಪುರ ಸತರಗಳು ಅವನ ಕೈವಶವಾದವು. ದಂತಿದುರ್ಗನು ಗುಜರಾತಿನ ಚಾಲುಕ್ಯರನ್ನು ಸೋಲಿಸುವುದರೊಂದಿಗೆ ಪಶ್ಚಿಮ ಭಾರತದ ಮೇಲೆ ತನ್ನ ಆಧಿಪತ್ಯವನ್ನು ಸ್ಥಾಪಿಸುವುದರೊಂದಿಗೆ ಕ್ರಿ.ಶ. ೭೫೩ರಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯವನ್ನು ಸ್ಥಾಪಿಸುವುದರೊಂದಿಗೆ ಸ್ವತಂತ್ರ ಆಳ್ವಿಕೆ ನಡೆಸಿದನು. ಅವನ ಸಾಮ್ರಾಜ್ಯ ದಕ್ಷಿಣದಲ್ಲಿ ಬಾದಾಮಿಯವರೆಗೆ ಪಶ್ಚಿಮ ಭಾರತದಿಂದ ಉಜ್ಜಯಿನಿಯವರೆಗೆ ವ್ಯಾಪಿಸಿತ್ತು. ರಾಷ್ಟ್ರಕೂಟರ ಅರಸರ ಆಳ್ವಿಕೆ ಪ್ರಾರಂಭವಾಗಿ ೨೫ ವರ್ಷಗಳ ಕಾಲ ಕರ್ನಾಟಕ ಮತ್ತು ಇತರ ಭಾಗಗಳಲ್ಲಿ ಪ್ರಬಲ ರಾಜಮನೆತನವಾಗಿ ಆಳ್ವಿಕೆ ನಡೆಸಿದರು. ದಂತಿದುರ್ಗನ ವಿಷಯವಾಗಿ ೨ ಶಾಸನಗಳು ದೊರೆತಿವೆ. ೧. ಸುಮನ್ ಗಡದ ಶಾಸನ ೨. ಎಲ್ಲೋರದ ದಶಾವತಾರ ಗುಹೆಯಲ್ಲಿರುವ ಶಿಲಾಶಾಸನ. ಇವುಗಳ ಮೂಲಕ ದಂತಿದುರ್ಗನ ರಾಷ್ಟ್ರಕೂಟರ ಸಾಮ್ರಾಜ್ಯದ ಸ್ಥಾಪಕ[೩೩] ಎಂದು ತಿಳಿದುಬರುತ್ತದೆ.

**ಒಂದನೇ ಕೃಷ್ಣ (ಕ್ರಿ.ಶ. ೭೫೬-೭೭೫)** ದಂತಿದುರ್ಗನ ನಂತರ ಅಧಿಕಾರಕ್ಕೆ ಬಂದನು. ದಂತಿದುರ್ಗನಿಗೆ ಮಕ್ಕಳಿರಲಿಲ್ಲ ಅವನ ಚಿಕ್ಕಪ್ಪನ ಮಗನಾದ ೧ನೇ ಕೃಷ್ಣನ ಕ್ರಿ.ಶ. ೭೫೬ರಲ್ಲಿ ಅಧಿಕಾರಕ್ಕೆ ಬಂದನು. ಈತನು ಅಧಿಕಾರ ರೂಢನಾದ ತಕ್ಷಣವೆ ತನ್ನ ರಾಜ್ಯಕ್ಕೆ ಇನ್ನು ಕಂಟಕಪ್ರಾಯನಾಗಿದ್ದ ಚಾಲುಕ್ಯ ದೊರೆ ಎರಡನೆ ಕೀರ್ತಿವರ್ಮನನ್ನು ಸಂಪೂರ್ಣವಾಗಿ ನಿರ್ನಾಮವಾಗುವಂತೆ ಮಾಡಿ ರಾಷ್ಟ್ರಕೂಟರ ಸಾಮ್ರಾಜ್ಯವನ್ನು ಭದ್ರಬುನಾದಿಯ ಮೇಲೆ ನಿಲ್ಲಿಸಿದನು. ಕೀರ್ತಿವರ್ಮನನ್ನು ಸೋಲಿಸಿದ ನಂತರ ಕೃಷ್ಣನು ಕೊಂಕಣದ ಕಡೆಗೆ ದಂಡೆತ್ತಿ

ಹೋಗಿ ಅಲ್ಲಿನ ಪ್ರದೇಶವನ್ನು ಗೆದ್ದುಕೊಂಡು ಕಲಹರ ಮನೆತನದ ಪುಲ್ಲನನ್ನು ತನ್ನ ಮಾಂಡಲಿಕನಾಗುವಂತೆ ಮಾಡಿದನು. ನಂತರ ಗಂಗರಾಜ ಶ್ರೀಪುರುಷನನ್ನು ಸೋಲಿಸಿ ಕ್ರಿ.ಶ, ೭೬೯ರಲ್ಲಿ ವೆಂಗಿಯ ಚಾಲುಕ್ಯ ರಾಜನಾದ ೪ನೇ ವಿಷ್ಣುವರ್ಧನನ್ನು ಸೋಲಿಸಲು ತನ್ನ ಕುಮಾರ ೨ನೇ ಗೋವಿಂದನನ್ನು ಕಳುಹಿಸಿದನು. ಯುದ್ಧದಲ್ಲಿ ಗೋವಿಂದನಿಗೆ ಶರಣಾದನಲ್ಲದೆ, ತನ್ನ ಮಗಳಾದ ಶಿಲಾಭಟ್ಟಾರಿಕೆಯನ್ನು ರಾಷ್ಟ್ರಕೂಟರ ರಾಜಕುಮಾರ ಧೃವನಿಗೆ ವಿವಾಹ ಮಾಡಿಕೊಟ್ಟನು. ಈ ಕಾರಣಗಳಿಂದ ರಾಷ್ಟ್ರಕೂಟ ಸಾಮ್ರಾಜ್ಯವು ವಿಸ್ತಾರವಾಯಿತು. ಒಂದನೇ ಕೃಷ್ಣನು ಕೇವಲ ಯುದ್ಧ ಪ್ರಿಯನು ಆಗಿರದೆ ಕಲಾ ಪೋಷಕನು ಆಗಿದ್ದನು. ಇವನ ಕಾಲದಲ್ಲಿಯೇ ಎಲ್ಲೋರದ ಕೈಲಾಸನಾಥ ದೇವಾಲಯ ನಿರ್ಮಾಣವಾಯಿತು. ಈತನು ಸುಮಾರು ೧೮ ವರ್ಷಗಳ ಕಾಲ ಆಳ್ವಿಕೆ ನಡೆಸಿದ ೧ನೇ ಕೃಷ್ಣನು ಒಬ್ಬ ಸಮರ್ಥ ರಾಜ, ವೀರ, ಸೇನಾನಿ ಹಾಗೂ ರಾಷ್ಟ್ರಕೂಟ ರಾಜರ ಅತ್ಯಂತ ಪ್ರಸಿದ್ಧ ಅರಸರಲ್ಲಿ ಒಬ್ಬರು. ಅವನಿಗೆ ಶುಭತುಂಗ, ಅಕಾಲವರ್ಷ ಎಂಬ ಬಿರುದುಗಳಿದ್ದವು. ಕೃಷ್ಣನಿಗೆ ಗೋವಿಂದ ಮತ್ತು ಧ್ರುವ ಎಂಬ ಇಬ್ಬರು ಗಂಡು ಮಕ್ಕಳಿದ್ದರು. ಆತನ ಮರಣದ ನಂತರ ಹಿರಿಯ ಮಗನಾದ ಗೋವಿಂದ ಅಧಿಕಾರಕ್ಕೆ ಬಂದನು. ರಾಷ್ಟ್ರಕೂಟರ ರಾಜನಾದನು. ಈತನನ್ನು ೨ನೇ ಗೋವಿಂದ ಎಂದು ಸಹ ಕರೆಯುತ್ತಾರೆ.

ಈತನು ತನ್ನ ತಂದೆಯ ಆಳ್ವಿಕೆಯಲ್ಲಿ ಸಮರ್ಥ ಯೋಧನಾಗಿದ್ದು ವೇಂಗಿ ಚಾಳುಕ್ಯರ ೪ನೇ ವಿಷ್ಣುವರ್ಧನನ್ನು ಸೋಲಿಸಿ ತಂದೆಗೆ ಪ್ರೀತಿ ಪಾತ್ರನಾಗಿದ್ದನು. ಆದರೆ ತನ್ನ ತಂದೆಯ ಮರಣದ ನಂತರ ಕ್ರಿ.ಶ. ೭೭೫ರಲ್ಲಿ ಪಟ್ಟಕ್ಕೆ ಬಂದು ಎರಡನೇ ಗೋವಿಂದ ಜನತೆಗೆ ಉತ್ತಮ ಆಡಳಿತ ಕೊಡುವಲ್ಲಿ ವಿಪಲನಾಗಿ ಕೇವಲ ಭೋಗಲಾಲಸೆಯಲ್ಲಿ ತನ್ನ ಜೀವನವನ್ನು ಕಳೆಯಲು ಪ್ರಾರಂಭಿಸಿದನು. ಇದರಿಂದ ಬೇಸತ್ತ ತಮ್ಮನಾದ ಧ್ರುವನು ಅಣ್ಣನನ್ನು ಮೂತೆಗೊತ್ತಿ ತಾನೆ ರಾಷ್ಟ್ರಕೂಟರ ರಾಜನಾದನು. ಧ್ರುವನು ರಾಜನಾದ ಮೇಲೆ ಅನೇಕ ರೀತಿಯ ತೊಂದರೆಗಳನ್ನು ಎದುರಿಸಿ ರಾಷ್ಟ್ರಕೂಟರ ಸಾಮರ್ಥ್ಯ ಮತ್ತು ಪ್ರತಿಷ್ಠೆ ರಾಜನಾಗಿ ಮೆರೆದನು ಎಂಬುದು ಇತಿಹಾಸಕಾರರ ಅಭಿಪ್ರಾಯವಾಗಿದೆ.

**ಧ್ರುವ (ಕ್ರಿ.ಶ. ೭೮೦ ರಿಂದ ೭೯೩)** ಧೃವನು ತನ್ನ ತಂದೆಯ ಮರಣದ ನಂತರ ವಿಲಾಸಿ ಜೀವನ ನಡೆಸುತ್ತಿದ್ದ ತನ್ನ ಅಣ್ಣನನ್ನು ಮೂಲೆಗೆ ಒತ್ತಿ ಕ್ರಿ.ಶ. ೭೮೦ರಲ್ಲಿ ರಾಷ್ಟ್ರಕೂಟರ ಸಾಮ್ರಾಜ್ಯದ ರಾಜನಾದನು. ಇವನು ಪ್ರಥಮವಾಗಿ ತಾನು ಅಧಿಕಾರರೂಢನಾಗುವಾಗ ಉದ್ಭವಿಸಿದ ಅಂತಃಕಲಹದ ಸಮಯದಲ್ಲಿ ತನ್ನ ಅಣ್ಣನ ಪಕ್ಷ ವಹಿಸಿದ್ದ ರಾಜನನ್ನು ಸಂಪೂರ್ಣವಾಗಿ ಸೋಲಿಸಿದನು. ನಂತರ ಪಲ್ಲವ ರಾಜ ದಂತಿವರ್ಮನನ್ನು ಸೋಲಿಸಿ ಅವನಿಂದ ಹೇರಳವಾದ ಕಪ್ಪುಕಾಣಿಕೆಯನ್ನು ಪಡೆದನು. ೪ನೇ ವಿಷ್ಣುವರ್ಧನನ್ನು ತಾನು ಯುವರಾಜನಾಗಿದ್ದಾಗಲೇ ಸೋಲಿಸಿದ್ದರಿಂದ ಆತನು ಸಹ ಆಗ ಧ್ರುವನ ಪರಮಾಧಿಕಾರವನ್ನು ಒಪ್ಪಿಕೊಂಡಿದ್ದನು.

ಧ್ರುವನು ಗಂಗರಾಜ ಶ್ರೀ ಪುರುಷನನ್ನು ಸೋಲಿಸಿ ಆತನ ಮಗ ಶಿವಮಾರನನ್ನು ಯುದ್ಧ ಬಂಧಿಯನ್ನಾಗಿಸಿ ಮಾನ್ಯಖೇಟದಲ್ಲಿ ಸೆರೆಯಲ್ಲಿಟ್ಟನು. ತನ್ನ ಮಗನಾದ ಸ್ಥಂಭ ಅಥವಾ ಕಂಬನನ್ನು ಗಂಗವಾಡಿಯ ರಾಜ್ಯಪಾಲನನ್ನಾಗಿ ನೇಮಿಸಿದನು. ಇದರಿಂದ ಗಂಗವಾಡಿ ಸಂಪೂರ್ಣವಾಗಿ ರಾಷ್ಟ್ರಕೂಟರ ಸಾಮ್ರಾಜ್ಯದಲ್ಲಿ ವಿಲೀನವಾಗಿ ಕಾವೇರಿ ನದಿ ರಾಷ್ಟ್ರಕೂಟರ ದಕ್ಷಿಣದ ಎಲ್ಲೆಯೆನಿಸಿತ್ತು. ಕ್ರಿ.ಶ. ೭೮೩ರ ವೇಳೆಗೆ ಧ್ರುವನು ದಕ್ಷಿಣದ ರಾಜಮನೆತನಗಳೆನ್ನೆಲ್ಲಾ ಸೋಲಿಸಿದನು. ನಂತರ ಉತ್ತರದತ್ತ ತನ್ನ ದಂಡಯಾತ್ರೆಯನ್ನು ಕೈಗೊಂಡನು. ಆ ಸಮಯದಲ್ಲಿ ಕನೋಜ್ ಪ್ರಾಂತ್ಯವನ್ನು ಆಯುಧ ಮನೆತನದ ಅರಸು ಇಂದ್ರಯುಧನೆಂಬುವವನು ರಾಜ್ಯಭಾರ ಮಾಡುತ್ತಿದ್ದು ಅಲ್ಲಿನ ಸಾಮ್ರಾಜ್ಯದಲ್ಲಿ ಇಬ್ಬರು ಸೋದರರ ದ್ವೇಷದಿಂದ ಅಂತಃಕಲಹ ಉದ್ಭವಿಸಿತ್ತು. ಈ ಸಂಬಂಧ ಪಡೆದ ಗೂರ್ಜರು ಪ್ರತಿಹಾರದ ರಾಜ ವತ್ಸರಾಜನು ಇಂದ್ರಾಯುಧನನ್ನು ಸಂಪೂರ್ಣವಾಗಿ ಸೋಲಿಸಿ ಕನೋಜ್‌ನ್ನು ವಶಪಡಿಸಿಕೊಂಡನು. ಇದರಿಂದ ಅಸಂತುಷ್ಟಗೊಂಡ ಬಂಗಾಳದ ಧರ್ಮಪಾಲ ಇಂದ್ರಾಯುಧನ ಮೇಲೆ ಯುದ್ಧ ಸಾರಿದನಾದರೂ ಅವನಿಂದ ಸಂಪೂರ್ಣವಾಗಿ ಸೋಲಲ್ಪಟ್ಟನು. ಇದೇ ಸಮಯದಲ್ಲಿ ಧ್ರುವನು ತನ್ನ ಕುಮಾರನಾದ ಗೋವಿಂದ ಮತ್ತು ಇಂದ್ರರ ನೆರವಿನಿಂದ ನರ್ಮದ ನದಿಯನ್ನು ದಾಟಿ ವತ್ಸರಾಜನನ್ನು ಝಾನ್ಸಿ ಹತ್ತಿರ ಸೋಲಿಸಿದನು. ಹೀಗೆ ಹಲವು ಯುದ್ಧಗಳ ಮೂಲಕ ರಾಷ್ಟ್ರಕೂಟರ ಸಾಮ್ರಾಜ್ಯವನ್ನು ರಕ್ಷಿಸಿದ ಪ್ರಮುಖ ಅರಸನು ಎನಿಸಿದನು.[೩೪]

**೩ನೇ ಗೋವಿಂದ (ಕ್ರಿ.ಶ. ೭೯೩-೮೧೪):** ೩ನೇ ಗೋವಿಂದನು ಸಹ ರಾಷ್ಟ್ರಕೂಟ ಸಾಮ್ರಾಟರಲ್ಲಿ ಮತ್ತೊಬ್ಬ ಶ್ರೇಷ್ಠ ಮತ್ತು ಸಮರ್ಥ ಸಾಮ್ರಾಟನಾಗಿದ್ದನು. ಸ್ವಸಾಮರ್ಥ್ಯ ಮತ್ತು ಸಾಹಸ ಕಾರ್ಯಗಳಿಂದಾಗಿ ತನ್ನ ತಂದೆ ಧೃವನಿಂದ ಉತ್ತರಾಧಿಕಾರಕ್ಕೆ ಆಯ್ಕೆಯಾದನು. ಇವನ ಆಳ್ವಿಕೆಯ ೨೦ ವರ್ಷಗಳು ರಾಷ್ಟ್ರಕೂಟರ ಇತಿಹಾಸದಲ್ಲಿ ೩ನೇ ಗೋವಿಂದ ತನ್ನ ತಂದೆಯಂತೆ ವೀರ, ಶೂರ ಸಾಹಸಮಯ ಮತ್ತು ಪ್ರಚಂಡ ದಿಗ್ವಿಜಯಿಯಾಗಿದ್ದನು. ಅಧಿಕಾರವನ್ನು ಪಡೆದ ಪ್ರಾರಂಭದಲ್ಲಿ ಕುಟುಂಬದ ಅಂತಃಕಲಹ ನಿವಾರಿಸಿ ಮುಂದೆ ದಕ್ಷಿಣ ಭಾರತ ಮತ್ತು ಉತ್ತರ ಭಾರತದ ಅನೇಕ ರಾಜಗಳನ್ನು ದಂಡಯಾತ್ರೆಯ ಮೂಲಕ ಸಾಮ್ರಾಜ್ಯವನ್ನು ರಕ್ಷಿಸಿದ ಪ್ರಸಿದ್ಧ ರಾಷ್ಟ್ರಕೂಟರ ಅರಸನಾಗಿದ್ದನು.[೩೫]

**ಅಮೋಘವರ್ಷ (ಕ್ರಿ.ಶ. ೮೧೪ ರಿಂದ ೮೭೮):** ಕ್ರಿ.ಶ. ೮೧೪ರಲ್ಲಿ ೩ನೇ ಗೋವಿಂದನ ನಂತರ ರಾಷ್ಟ್ರಕೂಟರ ರಾಜನಾಗಿ ಸಿಂಹಾಸನವೇರಿದನು. ಇವನು ನೃಪತುಂಗ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ. ರಾಜನಾದಾಗ ಅವನಿಗೆ ಕೇವಲ ೧೪ ವರ್ಷದವನಾಗಿದ್ದನು. ಸ್ವತಃ ಶಾಂತಿಪ್ರಿಯನು ಆಗಿದ್ದರು ಹಲವು ದೀರ್ಘಕಾಲ ಯುದ್ಧಗಳಲ್ಲಿ ತೊಡಗಿಸಿಕೊಂಡು ಸಾಮ್ರಾಜ್ಯವನ್ನು ರಕ್ಷಿಸಿದನು. ಇಂತಹ ಕಾರಣಗಳಿಂದ ಕರ್ನಾಟಕ ಇತಿಹಾಸದಲ್ಲಿ ಅತ್ಯಂತ ಹೆಸರುವಾಸಿಯಾದ ಚಕ್ರವರ್ತಿಗಳಲ್ಲಿ ನೃಪತುಂಗನು ಒಬ್ಬನು. ಇದಕ್ಕೆ ಕೇವಲ ಅವನ ಯುದ್ಧ ಬುದ್ಧಿಯಲ್ಲಿನ

ಪರಿಣಿತಿಯಲ್ಲದೆ ಕನ್ನಡ ನಾಡು ಎಂಬ ಪರಿಕಲ್ಪನೆಯನ್ನು ರೂಪಿಸುವಲ್ಲಿ ಅವನು ವಹಿಸಿದ ಪಾತ್ರ ಹಾಗೂ ಕರ್ನಾಟಕದ ಸಂಸ್ಕೃತಿಗೆ ನೀಡಿದ ವಿಶಿಷ್ಟ ಕಾಣಿಕೆಗಳು ಕರ್ನಾಟಕದ ಇತಿಹಾಸದಲ್ಲಿಯೇ ಅತ್ಯಂತ ಪ್ರಕಾಶಮಾನವಾಗಿ ಕಾಣಲು ಕಾರಣವಾಗಿವೆ.

ನೃಪತುಂಗನ ಆಳ್ವಿಕೆಯುದ್ದಕ್ಕೂ ಅವನಿಗೆ ತನ್ನ ಸೋದರಮಾವನಾದ ಮತ್ತು ಸಮರ್ಥ ಸೇನಾನಿಯಾದ ಬಂಕೇಶನ ನೆರವು ದೊರಕಿತು. ಹೊರಗಿನ ಮತ್ತು ಒಳಗಿನ ಶತ್ರುಗಳಿಂದ ಅವನ ಆಡಳಿತದ ಮೊದಲ ಹಂತವು ಯುದ್ಧಮಯವಾಗಿತ್ತು. ಅವನ ನೆರೆಹೊರೆಯ ರಾಜರುಗಳಾದ ಗಂಗರು ಗೂರ್ಜರ ಪ್ರತಿಹಾರಿಗಳು ಮತ್ತು ಪಲ್ಲವರು ಯಾವಾಗಲೂ ಈ ಕಿರಿಯ ದೊರೆಯನ್ನು ಸೋಲಿಸಲು ಹೊಂಚು ಹಾಕುತ್ತಿದ್ದರು. ಇಮ್ಮಡಿ ವಿಜಯಾದಿತ್ಯ ಮತ್ತು ಗಂಗರ ರಾಚಮಲ್ಲನ ಮೇಲೆ (ಕ್ರಿ.ಶ. ೮೩೭) ನಿರ್ಣಾಯಕ ಗೆಲುವನ್ನು ಪಡೆಯುವುದರ ಮೂಲಕ ನೃಪತುಂಗನು ತನ್ನ ಸಾಮಾರ್ಥ್ಯವನ್ನು ಸ್ಪಷ್ಟಪಡಿಸಿದನು. ಆದರೆ ಗಂಗರು ರಾಷ್ಟ್ರಕೂಟರ ನಡುವಿನ ವೈಮನಸ್ಸು ಹಾಗೆಯೇ ಮುಂದುವರಿಯಿತು. ನೃಪತುಂಗನು ತನ್ನ ಮಗಳಾದ ಚಂದ್ರಲಬ್ಬೆಯಳನ್ನು ಗಂಗರಾಜ ಮೊದಲನೇ ಭೂತುಗ ನಡುವೆ ವಿವಾಹ ಸಂಬಂಧ ಬೆಳೆಸುವುದರ ಮೂಲಕ ಈ ವೈಷಮ್ಯವನ್ನು ಕೆಲವು ಕಾಲ ಹಿನ್ನೆಲೆಗೆ ಸರಿಯಿತು. ಹೀಗೆ ಶಾಂತಿಪ್ರಿಯನಾದ ನೃಪತುಂಗನು ಮಾನ್ಯಖೇಟದ ಸುತ್ತ ಕೋಟೆಯನ್ನು ಸಹ ನಿರ್ಮಿಸಿದನು. ಸ್ವತಃ ಕವಿಯಾಗಿದ್ದ ಈತನು ಮಾನ್ಯಖೇಟವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅಖಂಡ ಕರ್ನಾಟಕವನ್ನು ತನ್ನ ಆಳ್ವಿಕೆಗೆ ಒಳಪಡಿಸಿಕೊಂಡು ಅನೇಕ ರಾಜಕೀಯ ಮತ್ತು ಸಾಂಸ್ಕೃತಿಕ ಕೊಡುಗೆಗಳನ್ನು ನೀಡಿದ್ದಾನೆ. ಈತನ ಪರಿಶ್ರಮದಿಂದ ಉದಯಿಸಿದ ರಾಜಧಾನಿ ಮಾನ್ಯಖೇಟವು ಕ್ರಿ.ಶ. ೯೭೩ರ ವರೆಗೆ ರಾಷ್ಟ್ರಕೂಟರ ನಂತರ ಕಲ್ಯಾಣದ ಚಾಲುಕ್ಯರು ೧೧೪೧ರವರೆಗೆ ನಂತರ ಕಲಚೂರಿಗಳು, ಹೈಹಯರು, ಬಹುಮನಿಯರು, ವಿಜಯಗರದ ಅರಸರು, ಗೊಲಕುಂಡದ ಕುತುಬ್‌ಷಾಹಿಗಳು ಮಾನ್ಯಖೇಟವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕರ್ನಾಟಕ ಮತ್ತು ಭಾರತದ ಇತಿಹಾಸದಲ್ಲಿ ಮಾನ್ಯಖೇಟ ರಾಜಧಾನಿಯ ವಿಶೇಷತೆ ಪಡೆಯಲು ನೃಪತುಂಗನೇ ಕಾರಣನಾಗಿದ್ದಾನೆ.[೩೬]

## ಕಲ್ಯಾಣ ಚಾಲುಕ್ಯರು

ರಾಷ್ಟ್ರಕೂಟರು ಕ್ರಿ.ಶ. ೯೭೩ರವರೆಗೆ ಆಳ್ವಿಕೆ ಮಾಡಿದರು. ಕರ್ಕ ಮತ್ತು ಖೊಟ್ಟಿಗನೆಂಬ ದೊರೆಗಳು ರಾಷ್ಟ್ರಕೂಟ ವಂಶದ ಕೊನೆಯ ಮತ್ತು ದುರ್ಬಲ ದೊರೆಗಳು ಮಾನ್ಯಖೇಟವನ್ನಾಳಿದರು. ಇವರ ಆಳ್ವಿಕೆಯ ಕಾಲಾವಧಿಯಲ್ಲಿ ಉತ್ತರ ಭಾರತದ ಪರಮಾರದೊರೆ ಹರ್ಷಸಿಯಾಕನು ಮಾನ್ಯಖೇಟದ ಮೇಲೆ ದಾಳಿ ಮಾಡಿ ಧ್ವಂಸಗೊಳಿಸಿ ಕರ್ಕ ಮತ್ತು ಖೊಟ್ಟಿಗರನ್ನು ಸೋಲಿಸಿ ಅಪಾರ ಸಂಪತ್ತಿನೊಂದಿಗೆ ಮರಳಿ ಹೋದರು.

ಇದೇ ಅವಕಾಶಕ್ಕಾಗಿ ಕಾಯುತ್ತಿದ್ದ ಚಾಲುಕ್ಯ ವಂಶದ ಎರಡನೇ ತೈಲಪನು ಕ್ರಿ.ಶ. ೯೭೩ರಲ್ಲಿ ಖೊಟ್ಟಿಗ ಮತ್ತು ಕರ್ಕನನ್ನು ಸೋಲಿಸಿ ರಾಷ್ಟ್ರಕೂಟರ ಆಳ್ವಿಕೆಯನ್ನು ಅಂತ್ಯಗೊಳಿಸಿ

ಸ್ವತಂತ್ರ ದೊರೆ ಎಂದು ಘೋಷಿಸಿಕೊಂಡು ಮಾನ್ಯಖೇಟದಿಂದಲೆ ಪುನಃ ಚಾಲುಕ್ಯರ ಆಳ್ವಿಕೆಯನ್ನು ಆರಂಭಿಸಿದರು. ಕ್ರಿ.ಶ. ೯೭೩ರಿಂದ ಕ್ರಿ.ಶ. ೧೦೪೧ರವರೆಗೆ ಆಳಿದ ಚಾಲುಕ್ಯರ ಅಂದರೆ ಎರಡನೇ ತೈಲಪ, ಎರಡನೇ ಜಯಸಿಂಹ, ಸತ್ಯಾಶ್ರಯ, ಒಂದನೇ ಸೋಮೇಶ್ವರನ ವರೆಗೂ ಚಾಲುಕ್ಯರು ಇದೇ ಮಾನ್ಯಖೇಟವನ್ನು ತಮ್ಮ ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ಮಾಡಿದರು.[೩೭] ಈ ಸಂದರ್ಭದಲ್ಲಿ ಅನೇಕ ದೇವಾಲಯಗಳು, ಶಾಸನಗಳು, ಕೋಟೆ-ಕೊತ್ತಲಗಳ ನಿರ್ಮಾಣವನ್ನು ರಾಷ್ಟ್ರಕೂಟರಂತೆ ನಿರ್ಮಾಣ ಮಾಡಿರುವುದು ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಕಾಣಬಹುದು.

### ಕಳಚೂರಿಯರು

ಚಾಲುಕ್ಯರು ಮಾನ್ಯಖೇಟದಿಂದ ರಾಜಧಾನಿಯನ್ನು ಬೇರೆ ಬೇರೆ ಕಡೆಗೆ ವರ್ಗಾಯಿಸಿದರೂ ಕೂಡ ಮಾನ್ಯಖೇಟವು ಚಾಲುಕ್ಯರ, ಕಳಚೂರಿಯರಿಂದ ಆಳ್ವಿಕೆಗೆ ಒಳಪಟ್ಟಿದ್ದು ತಿಳಿದುಬರುತ್ತದೆ. ಕಳಚೂರಿ ಸಂಕಮನ ಆಳ್ವಿಕೆಯ ಅವಧಿಯಲ್ಲಿ ಮಾನ್ಯಖೇಟವು ಒಂದು ಪ್ರಮುಖವಾದ ಅಗ್ರಹಾರವಾಗಿತ್ತೆಂಬ ಉಲ್ಲೇಖವಿರುವ ಶಿಲಾಶಾಸನವೊಂದು ಮಾನ್ಯಖೇಟದ ಕೋಟೆಯಲ್ಲಿ ಲಭ್ಯವಾಗಿದೆ.[೩೮] ಹೀಗಾಗಿ ಕಳಚೂರಿಗಳು ಸಹ ಪ್ರಸ್ತುತ ಅಧ್ಯಯನದ ಪರಿಸರದಲ್ಲಿ ಅವರ ಆಡಳಿತವು ಇತ್ತು ಎಂಬುದು ಸ್ಪಷ್ಟವಾಗುತ್ತದೆ.

### ಹೈಹಯರು

ಚಾಲುಕ್ಯರು, ಮಾನ್ಯಖೇಟದ ರಾಜಧಾನಿಯನ್ನು ಬದಲಾಯಿಸಿದರು ಚಾಲುಕ್ಯರ ನಂತರದಲ್ಲಿ ಕಲಚೂರಿಗಳು, ನಂತರ ಅಲ್ಲೂರಿನ ಹೈಹಯರ ಆಳ್ವಿಕೆಗೆ ಒಳಪಟ್ಟಿದ್ದು ತಿಳಿದುಬರುತ್ತದೆ. ಹೈಹಯರು ಕಲ್ಯಾಣದ ಚಾಲುಕ್ಯರು ಮತ್ತು ಕಲಚೂರಿ ಅರಸರ ಮಾಂಡಲಿಕ ದೊರೆಗಳಾಗಿದ್ದರು. ಪ್ರಸ್ತುತ ಅಧ್ಯಯನ ಪರಿಸರದ ಚಿತ್ತಾಪೂರ ತಾಲೂಕಿನ ಈಗಿನ ಅಲ್ಲೂರನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯಭಾರ ಮಾಡಿದ್ದರಿಂದ ಅವರಿಗೆ ಅರಳು ಮುನ್ನೂರಿನ ಹೈಹಯರು ಎಂದು ಕರೆಯುತ್ತಾರೆ. ಈ ಅಲ್ಲೂರು ಸಂಸ್ಥಾನದ ಅಧೀನದಲ್ಲಿ ಒಟ್ಟು ೩೦೦ ಹಳ್ಳಿಗಳಿದ್ದವು. ಅವುಗಳಲ್ಲಿ ಸೇಡಂ ಮತ್ತು ಮಾನ್ಯಖೇಟವು ಪ್ರಮುಖವಾದ ಕೇಂದ್ರಗಳಾಗಿದ್ದವು ಎಂಬ ಸಂಗತಿಯು ಚಾಳುಕ್ಯರ ಶಿಲಾಶಾಸನಗಳಿಂದ ತಿಳಿದುಬರುತ್ತದೆ.[೩೯]

### ಬಹುಮನಿ ಅರಸರು

ಬಹುಮನಿ ಸಾಮ್ರಾಜ್ಯ ದಕ್ಷಿಣ ಭಾರತದಲ್ಲಿನ ಒಂದು ಪ್ರತಿಷ್ಠಿತ ಸಾಮ್ರಾಜ್ಯವಾಗಿದೆ. ಪ್ರಮುಖವಾಗಿ ಗುಲ್ಬರ್ಗಾ ಮತ್ತು ಬೀದರ್ ಜಿಲ್ಲೆಗಳನ್ನು ಒಳಗೊಂಡಂತೆ ಇದು ಪ್ರಾರಂಭದಲ್ಲಿ ಕ್ರಿ.ಶ. ೧೩೪೭ರಲ್ಲಿ ಸ್ಥಾಪನೆಯಾಯಿತು. ಈ ಬಹುಮನಿ ಸಾಮ್ರಾಜ್ಯದ ಸ್ಥಾಪಕ ಅಲ್ಲಾವುದ್ದಿನ್ ಹಸನ್ ಗಂಗೂ ಬಹುಮನ್ ಷಾಹ.[೪೦] ಈ ಸಾಮ್ರಾಜ್ಯವು ತನ್ನ ಸುತ್ತಮುತ್ತಲಿನ ಸಣ್ಣ-ಪುಟ್ಟ ಗ್ರಾಮಗಳನ್ನು ಸಹ ಆಳ್ವಿಕೆಗೆ ಒಳಪಡಿಸಿಕೊಂಡಿದ್ದರು. ಪ್ರಸ್ತುತ ಅಧ್ಯಯನ ಪರಿಸರದ ಹಲವು

ಐತಿಹಾಸಿಕ ಗ್ರಾಮಗಳು ಸಹ ಬಹುಮನಿಯರ ಅರಸರ ಆಳ್ವಿಕೆಗೆ ಒಳಪಟ್ಟಿದ್ದವು. ಅವು ರಾಷ್ಟ್ರಕೂಟರ ರಾಜಧಾನಿಯಾದ ಮಾನ್ಯಖೇಟ ಅದೇ ಪರಿಸರದ ದಂಡೋತಿ, ಚಿತ್ತಾಪೂರ, ಸೇಡಂ ಹೀಗೆ ಅನೇಕ ಗ್ರಾಮಗಳು ಬಹುಮನಿಯರ ಅರಸರ ಆಳ್ವಿಕೆಗೆ ಒಳಪಟ್ಟಿದ್ದವು. ಇಲ್ಲಿ ಬಹುಮನಿ ಅರಸರ ಆಳ್ವಿಕೆಯ ಅವಧಿಯಲ್ಲಿ ಅನೇಕ ಮಸೀದಿ, ಕೋಟೆಗಳು ಈ ಪ್ರದೇಶದಲ್ಲಿ ನಿರ್ಮಾಣಗೊಂಡಿವೆ.

ವಿಶೇಷವಾಗಿ ಬಹುಮನಿಯರು ನಿರ್ಮಾಣ ಮಾಡಿದ ಮಸೀದಿ ಮತ್ತು ಕೋಟೆಯನ್ನು ಪುನರ್ ನಿರ್ಮಾಣ ಮಾಡಿದ್ದು ಮಾನ್ಯಖೇಟದಲ್ಲಿ ಕಂಡುಬರುತ್ತದೆ. ಇದೇ ಕಾಲಾವಧಿಯಲ್ಲಿ ದಂಡೋತಿಯ ಕೋಟೆಯನ್ನು ನಿರ್ಮಾಣ ಮಾಡಿದ್ದು ಅದು ಇಸ್ಲಾಂ ಶೈಲಿಯಲ್ಲಿದೆ.[೪೧] ಅಲ್ಲದೆ ಇದೇ ಪರಿಸರದ ಇನ್ನಿತರ ಭಾಗದಲ್ಲಿ ಮಸೀದಿ ಮತ್ತು ಕೋಟೆಗಳು ರಾಷ್ಟ್ರಕೂಟರು ಹಾಗೂ ಕಲ್ಯಾಣದ ಚಾಲುಕ್ಯರು ನಿರ್ಮಾಣ ಮಾಡಿದವುಗಳು ಕಂಡುಬರುವುದರಿಂದ ಅವುಗಳನ್ನು ಬಹುಮನಿಯರು ನವೀಕರಣ ಮಾಡಿರುವುದು ಪ್ರಸ್ತುತ ಅಧ್ಯಯನದಲ್ಲಿ ಕಂಡುಬರುತ್ತದೆ. ಈ ಪ್ರದೇಶದಲ್ಲಿ ಬಹುಮನಿಯರ ನಂತರ ಬಿಜಾಪುರದ ಆದಿಲ್ ಷಾಹಿಗಳ ಪ್ರಭಾವ ಅಷ್ಟೇನು ಕಂಡುಬರುವುದಿಲ್ಲ. ಆದರೆ ಆದಿಲ್‌ಷಾಹಿಗಳ ಮನೆತನವು ಒಡೆದು ಐದು ಷಾಹಿ ರಾಜ್ಯಗಳಾಗಿ ನಿರ್ಮಾಣವಾದಾಗ, ಗೊಲಕುಂಡದ ಕುತುಬ್‌ಷಾಹಿಗಳು ಮಾನ್ಯಖೇಟವನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆಯನ್ನು ಮಾಡಿರುವುದು ತಿಳಿದುಬರುತ್ತದೆ.

## ವಿಜಯನಗರ ಅರಸರು

ಕ್ರಿ.ಶ. ೧೪ನೇ ಶತಮಾನದ ಆದಿ ಭಾಗದಿಂದ ೧೭ನೇ ಶತಮಾನದ ಆದಿ ಭಾಗವದವರೆಗೆ ಅಂದರೆ ಸುಮಾರು ೩ ಶತಮಾನಗಳ ಕಾಲ ಸುದೀರ್ಘವಾಗಿ ದಕ್ಷಿಣ ಭಾರತದಲ್ಲಿ ಆಳ್ವಿಕೆ ನಡೆಸಿದ ವಿಜಯನಗರದ ಅರಸರು ಭಾರತೀಯ ಸಾಂಸ್ಕೃತಿಗೆ ತಮ್ಮದೇ ಆದ ಕಾಣಿಕೆಯನ್ನು ಸಲ್ಲಿಸಿರುವುದು ಕಂಡುಬರುತ್ತದೆ. ಅಲ್ಲದೆ ಇಡೀ ಅಖಂಡ ಕರ್ನಾಟಕವನ್ನು ಸಹ ಅವರ ಆಳ್ವಿಕೆ ಸಮಯದಲ್ಲಿ ಒಳಪಟ್ಟಿರುವುದು ಕಂಡುಬರುತ್ತದೆ. ಹಂಪಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ ಇವರು ಕಲೆ ಮತ್ತು ವಾಸ್ತುಶಿಲ್ಪಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡುವುದರ ಮೂಲಕ ಅನೇಕ ದೇವಾಲಯ ಕೋಟೆ–ಕೊತ್ತಲಗಳು ಬೃಹತ್ ಬಿಡಿ ಶಿಲ್ಪಗಳು ಶಾಸನಗಳನ್ನು ಹಾಕಿಸಿರುವುದು ಕಂಡುಬರುತ್ತದೆ. ಇವುಗಳ ಸಹಾಯದಿಂದ ವಿಜಯನಗರದ ಅರಸರ ಚಾರಿತ್ರಿಕ ಹಿನ್ನೆಲೆಯನ್ನು ಪ್ರಸ್ತುತ ಅಧ್ಯಯನದಲ್ಲಿರುವುದರ ಕುರಿತು ತಿಳಿದುಕೊಳ್ಳಬಹುದು.

ಪ್ರಸ್ತುತ ಸಂಶೋಧನಾ ಪ್ರದೇಶದಲ್ಲಿ ವಿಜಯನಗರದ ಅರಸರಿಗೆ ಸಂಬಂಧಿಸಿದ ಯಾವುದೇ ದೇವಾಲಯ ಮತ್ತು ಶಾಸನಗಳು ಸಿಗುವುದಿಲ್ಲ. ಆದರೆ ಅಪರೋಕ್ಷವಾಗಿ ವಿಜಯನಗರದ ಅರಸರ ಸಾಮಂತರಿಂದ ಆಳ್ವಿಕೆ ನಡೆಸಿರುವುದು ಇಲ್ಲಿನ ಕೆಲವು ಕಲೆ ಮತ್ತು ವಾಸ್ತುಶಿಲ್ಪದ ಅಂಶಗಳ ಹೋಲಿಕೆಯಿಂದ ಊಹಿಸಲಾಗಿದೆ. ಕೃಷ್ಣದೇವರಾಯನು ಪಟ್ಟಕ್ಕೆ ಬಂದ ಕೂಡಲೇ

ಎಮ್ಮತ್ತೂರಿನ ಗಣಪತಿಯನ್ನು ಸೋಲಿಸಿ ಆದಿಲ್ ಖಾನನ್ನು ಡೋಣಿ, ಕೋವಿಲಕೊಂಡ ಯುದ್ಧಗಳಲ್ಲಿ ಪರಾಭವಗೊಳಿಸಿ, ಕ್ರಿ.ಶ. ೧೫೦೯ರಲ್ಲಿ ಪಟ್ಟಾಭಿಷಿಕ್ತನಾದನು. ಅನಂತರ ಶಿವನಸಮುದ್ರ, ಉಮ್ಮತ್ತೂರು, ಮಂಗಳೂರುಗಳಲ್ಲಿ ಕಾಣಿಸಿದ್ದ ಬಂಡಾಯಗಳನ್ನು ಹತ್ತಿಕ್ಕಿದನು. ಬಿಜಾಪುರದ ವಶದ ಗೋವೆಯನ್ನು ಗೆಲ್ಲಲು ಪೋರ್ಚುಗೀಸರಿಗೆ ನೆರವಾದನು. ಈತನು ಗಜಪತಿಯನ್ನು ಸೋಲಿಸಿದ ನಂತರ ಅವನ ರಾಜಧಾನಿಯಾಗಿದ್ದ ಕಟಕವರೆಗೂ ವಿಜಯಶಾಲಿಯಾಗಿ ಸಾಗಿದ. ಅದೇ ರೀತಿ ವಿಜಾಪುರದ ಅರಸರನ್ನು ಸೋಲಿಸಿ, ಕ್ರಿ.ಶ. ೧೫೨೦ರಲ್ಲಿ ನಾಲ್ಕು ದಿನ ವಿಜಾಪುರದ ರಾಜಧಾನಿಯಲ್ಲೇ ತಳವೂರಿದನು.[೨೨]

ರಾಯಚೂರು ದೋ-ಅಬ್‌ನ್ನು ತನ್ನ ವಶಕ್ಕೆ ತೆಗೆದುಕೊಂಡನು. ಗುಲಬರ್ಗಾ, ಬೀದರ್ (ಆಗ ಬಹುಮನಿಗಳ ರಾಜಧಾನಿಯಾಗಿದ್ದರೂ ಬರೀದ್‌ಷಾಹಿಗಳ ವಶವಾಗಿತ್ತು)ಗಳನ್ನು ವಿಜಯಶಾಲಿಯಾಗಿ ಪ್ರವೇಶಿಸಿದನು. ಕೃಷ್ಣದೇವರಾಯನು ಕ್ರಿ.ಶ. ೧೫೨೩ರಲ್ಲಿ ಗುಲ್ಬರ್ಗಾವನ್ನು ತನ್ನ ಸೈನ್ಯದೊಡನೆ ಪ್ರವೇಶಿಸಿದ ಮೇಲೆ, ಮೂರನೇ ಮಹ್ಮದನ ಮೊಮ್ಮಕ್ಕಳಾದ ೩ನೇ ಅಲ್ಲಾವುದ್ ದೀನ್‌ವಲಿ ಉಲ್ಲಾ ಮತ್ತು ಕಲಿಮುಲ್ಲಾರನ್ನು (ಅಮೀರರುಗಳು ಬಂದಿಸಿದ್ದರು) ಬಿಡುಗಡೆ ಮಾಡಿ ಅನಂತರ ಹಿರಿಯ ಮಗನಾದ ಮೂರನೇ ಅಲ್ಲಾ ಉದ್‌ದೀನನ್ನು ಗುಲ್ಬರ್ಗಾದ ಸುಲ್ತಾನನ್ನಾಗಿ ನೇಮಿಸಿ ವಲಿವುಲ್ಲಾ ಮತ್ತು ಕಲೀಮುಲ್ಲಾರನ್ನು ತನ್ನೊಡನೆ ವಿಜಯನಗರಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಸುರಕ್ಷಿತವಾಗಿಟ್ಟನು. ಈ ರಾಜಕೀಯ ಸಾಧನೆಯಿಂದಾಗಿ ಕೃಷ್ಣದೇವರಾಯನಿಗೆ 'ಯವನ ರಾಜ್ಯ ಸ್ಥಾಪನಾಚಾರ್ಯ' ಎಂಬ ಬಿರುದು ಇತ್ತು. ಹೀಗೆ ಬಹುಮನಿ ಸಾಮ್ರಾಜ್ಯವು ಕೃಷ್ಣದೇವರಾಯನ ಕಾಲಕ್ಕೆ ವಿಜಯನಗರ ಆಡಳಿತದಲ್ಲಿ ಒಳಪಟ್ಟಿತ್ತು. ಈ ಕಾರಣದಿಂದ ಪ್ರಸ್ತುತ ಅಧ್ಯಯನದ ಪರಿಸರವಾದ ಮಾನ್ಯಖೇಟವು ಬಹುಮನಿ ಅರಸರ ಆಳ್ವಿಕೆಯಲ್ಲಿದ್ದುದು ಅಪರೋಕ್ಷವಾಗಿ ವಿಜಯನಗರದ ಅರಸರ ಆಳ್ವಿಕೆಯಲ್ಲಿತ್ತು ಎಂದು ತಿಳಿದುಬರುತ್ತದೆ. ಕೃಷ್ಣದೇವರಾಯನ ನಂತರ ಅಚ್ಯುತರಾಯನು (ಕ್ರಿ.ಶ. ೧೫೨೯-೪೧) ಅಧಿಕಾರಕ್ಕೆ ಬಂದನು. ಇವನ ನಂತರ ಇವನ ಸೋದರ ಪುತ್ರ ಸದಾಶಿವರಾಯನು ಅಧಿಕಾರಕ್ಕೆ ಬಂದನು. ಆದರೆ ನಾಮ ಮಾತ್ರ ಅರಸನಾಗಿದ್ದು ಆಡಳಿತವನ್ನೆಲ್ಲಾ ಕೃಷ್ಣದೇವರಾಯನ ಅಳಿಯ ರಾಮರಾಯನ ಕೈಯಲ್ಲಿ ಇತ್ತನು. ಇದೇ ಸಂದರ್ಭದಲ್ಲಿ ಐದು ಷಾಹಿ ರಾಜ್ಯಗಳು ಒಡೆದು ಹೋಗುವವರೆಗೂ ಬಹುಮನಿ ಸಾಮ್ರಾಜ್ಯ ಮತ್ತು ಮಾನ್ಯಖೇಟ ಪರಿಸರದ ಕೆಲವು ಭಾಗಗಳು ವಿಜಯನಗರದ ಅರಸರ ಆಳ್ವಿಕೆಗೆ ಅಪರೋಕ್ಷವಾಗಿ ಸಾಮಂತರಿಂದ ಆಳ್ವಿಕೆ ನಡೆದಿತ್ತು. ಆದರೆ ಕ್ರಿ.ಶ. ೧೫೬೫ರಲ್ಲಿ ತಾಳಿಕೋಟೆ ಯುದ್ಧದಲ್ಲಿ ವಿಜಯನಗರಕ್ಕೆ ಸೋಲುಂಟಾಯಿತು. ಈ ಸಂದರ್ಭದಲ್ಲಿ ಐದು ಷಾಹಿ ಮನೆತನಗಳಲ್ಲಿ ಒಂದಾದವು ಮತ್ತು ಬೇರಾಗಿ ಗೋಲಕುಂಡಾದ ಕುತಬ್ ಷಾಹಿಗಳು ವಿಜಯನಗರದ ಸಾಮಂತತೆಯನ್ನು ಕಿತ್ತೊಗೆದು ಪ್ರಸ್ತುತ ಅಧ್ಯಯನದ ಮಾನ್ಯಖೇಟವನ್ನು ಪುನಃ ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ.

## ಕುತುಬ್‌ಷಾಹಿಗಳು

ಕ್ರಿ.ಶ. ೧೬-೧೭ನೇ ಶತಮಾನದಲ್ಲಿ ಮಾನ್ಯಖೇಟ ಪರಿಸರವು ಗೋಲಕುಂಡಾದ ಕುತುಬ್‌ಷಾಹಿಗಳ ಆಳ್ವಿಕೆಗೆ ಒಳಪಟ್ಟಿತ್ತು. ಇದೇ ಕಾಲದಲ್ಲಿ ನಿರ್ಮಾಣಗೊಂಡ ಕೋಟೆಗಳು, ಬುರುಜುಗಳು, ತೊಪುಗಳು, ಮಸೀದಿಗಳು ಇವತ್ತಿಗೂ ಕೂಡ ಮಾನ್ಯಖೇಟದಲ್ಲಿ ಮತ್ತು ಅದರ ಸುತ್ತಮುತ್ತಲಿನ ಪ್ರದೇಶದಲ್ಲಿ ಕಾಣುತ್ತವೆ. ಇದೇ ಸಂದರ್ಭದಲ್ಲಿ ಮೊಘಲ ಚಕ್ರವರ್ತಿ ಔರಂಗಜೇಬನು ತನ್ನ ದಕ್ಷಿಣ ಭಾರತದ ದಂಡಯಾತ್ರೆಯಲ್ಲಿರುವಾಗ ಗೋಲ್ಕೊಂಡಾದ ಕುತುಬ್‌ಷಾಹಿ ದೊರೆ ಅಬುಲ್ ಹಸನ್ ತಾನಷಹಾನ್ ಅಧೀನದಲ್ಲಿರುವ ಮಾನ್ಯಖೇಟ ಮತ್ತು ಅದರ ಸುತ್ತಮುತ್ತಲಿನ ಗ್ರಾಮಗಳನ್ನು ವಶಪಡಿಸಿಕೊಳ್ಳಲು ೨ ಬಾರಿ ದಾಳಿ ಮಾಡಿಸಿ ಮುತ್ತಿಗೆ ಹಾಕಿದನು. ಅಬುಲ್‌ಹಸನ್ ತಾನಷಾಹನ್ ಹಿಂದೂ ಸೇನಾಧಿಪತಿಗಳಾದ ಅಕ್ಕಣ ಮತ್ತು ಮಾದಣ್ಣ ಸಹೋದರರು ಮೊಘಲ ಸೈನ್ಯದ ಜೊತೆಗೆ ವೀರಾವೇಶದಿಂದ ಹೋರಾಟ ಮಾಡಿ ಶತ್ರುಸೈನ್ಯವನ್ನು ಹಿಮ್ಮೆಟ್ಟಿಸಿ ಕೋಟೆಯನ್ನು ರಕ್ಷಿಸಿದರು.

ಆದರೆ ಎರಡನೇ ಬಾರಿಗೆ ಕೂಡ ಅಂಕಣ್ಣಾ ಮತ್ತು ಮಾದಣ್ಣರು ಮೊಘಲ ಸೈನ್ಯದ ಜೊತೆ ಹೋರಾಟ ಮಾಡಿದರು ಸಹ ಕೊನೆಗೆ ಶತ್ರುಸೈನ್ಯವನ್ನು ಸೋಲಿಸಲಾಗದೆ ಹಿನ್ನೆಡೆಯಬೇಕಾಯಿತು. ಈ ಸಂದರ್ಭದಲ್ಲಿ ಮಾನ್ಯಖೇಟದ ರಾಜಧಾನಿ ಕೋಟೆ ಮೊಘಲರ ಕೈವಶವಾಯಿತು.[೪೩] ಹೀಗೆ ಈ ರಾಜಧಾನಿಯ ರಕ್ಷಣೆಗೆ ನೆರವಾಗಿರುವುದರಿಂದ ಗೋಲಕುಂಡಾದ ಕುತುಬ್ ಷಾಹಿಗಳು ಕೂಡ ಪ್ರಸ್ತುತ ಅಧ್ಯಯನದ ಪರಿಸರದಲ್ಲಿ ತಮ್ಮದೇ ಆದ ಕೊಡುಗೆ ನೀಡಿರುವುದು ಕಂಡುಬರುತ್ತದೆ.

## ಹೈದ್ರಾಬಾದಿನ ನಿಜಾಮರು

ರಾಷ್ಟ್ರಕೂಟರ ರಾಜಧಾನಿಯಾದ ಈ ಪ್ರಸ್ತುತ ಅಧ್ಯಯನ ಪರಿಸರದಲ್ಲಿ ರಾಷ್ಟ್ರಕೂಟರ ನಂತರ ಕಲ್ಯಾಣದ ಚಾಲುಕ್ಯರು, ಕಲಚೂರಿಗಳು, ಹೈಹಯರು, ಬಹುಮನಿ ಅರಸರು, ವಿಜಯನಗರದ ಅರಸರು ಮತ್ತು ಗೋಲಕುಂಡದ ಕುತುಬ್‌ಷಾಹಿಗಳು ಹೀಗೆ ಅನೇಕ ರಾಜಮನೆತನಗಳು ಒಂದಲ್ಲ ಒಂದು ರೀತಿಯಲ್ಲಿ ಪ್ರಸ್ತುತ ಪರಿಸರದಲ್ಲಿ ಆಳ್ವಿಕೆ ಮಾಡಿದ್ದಾರೆ. ಅದೇ ರೀತಿ ಹೈದ್ರಾಬಾದ್ ನಿಜಾಮರು ಸಹ ಈ ಮಾನ್ಯಖೇಟ ಮತ್ತು ಸುತ್ತಮುತ್ತಲಿನ ಪರಿಸರದ ಮೇಲೆ ಅಪರೋಕ್ಷವಾಗಿ ಆಳ್ವಿಕೆ ನಡೆಸಿದ್ದಾರೆ. ವಿಶೇಷವಾಗಿ ಗುಲ್ಬರ್ಗಾ ಮತ್ತು ಬೀದರ್ ಇವರ ಸಂಸ್ಥಾನಕ್ಕೆ ಒಳಪಟ್ಟಂತ ಜಿಲ್ಲೆಗಳಾಗಿವೆ. ಈ ಕಾರಣದಿಂದ ಮಾನ್ಯಖೇಟ ಪರಿಸರವು ಸಹ ಇವರ ಅಧೀನದಲ್ಲಿರುವುದು ದೃಢಪಡುತ್ತದೆ. ೧೮ನೇ ಶತಮಾನದಿಂದ ಭಾರತ ಸ್ವತಂತ್ರವಾಗುವ ೧೯೪೭ರ ವರೆಗೂ ಕೂಡ ನಿಜಾಮರ ಆಳ್ವಿಕೆಗೆ ಈ ಪ್ರಸ್ತುತ ಅಧ್ಯಯನ ಪರಿಸರವು ಒಳಪಟ್ಟಿರುವುದು ಕಂಡುಬರುತ್ತದೆ.

## ಬ್ರಿಟಿಷರು

ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಬ್ರಿಟಿಷರು ನೇರವಾಗಿ ಆಳ್ವಿಕೆ ಮಾಡದಿದ್ದರೂ ಅಪರೋಕ್ಷವಾಗಿ ಆಳ್ವಿಕೆ ಮಾಡಿದ್ದಾರೆ. ಕ್ರಿ.ಶ. ೧೭೪೮ರಿಂದ ೧೯೪೭ರ ಭಾರತದ ಸ್ವತಂತ್ರವಾಗುವ ವರೆಗೆ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿತ್ತು. ಅಪರೋಕ್ಷವಾಗಿ ಈ ಪ್ರದೇಶ ಎಂದು ಕಂಡುಬರುತ್ತದೆ. ೧೮ನೇ ಶತಮಾನದಲ್ಲಿ ಫ್ರೆಂಚರು ಮತ್ತು ಬ್ರಿಟಿಷರು ಉತ್ತರ ಭಾರತದಲ್ಲಿ ತಮ್ಮ ವಸಾಹತುಶಾಹಿ ಕಂಪನಿ ಸರಕಾರವನ್ನು ಸ್ಥಾಪಿಸಿದ ನಂತರ ದಕ್ಷಿಣ ಭಾರತದ ಕಡೆ ಫ್ರೆಂಚರು ಧಾವಿಸಿದರು. ಈ ಸಂದರ್ಭದಲ್ಲಿ ಹೈದ್ರಾಬಾದ್ ನಿಜಾಮನ ಮರಣದ ನಂತರ ನಿಜಾಮನ ಸಂಸ್ಥಾನದಲ್ಲಿ ಅಧಿಕಾರಕ್ಕಾಗಿ ಸಾಲರ್‌ಜಂಗ್ ಮತ್ತು ನಾಸಿರ್ ಜಂಗರ ನಡುವೆ ಕಿತ್ತಾಟ ನಡೆದಿತ್ತು. ಹಾಗೂ ದಕ್ಷಿಣ ಭಾರತದ ಧೃಢೀಕರಣ ಆರಂಭವಾಗಿತ್ತು. ಇದರ ಲಾಭ ಪಡೆದ ಫ್ರೆಂಚರ ವಸಾಹತು ಕಂಪನಿ ಸಾಲರ್‌ಜಂಗನಿಗೆ ಬೆಂಬಲ ನೀಡಿತು. ಇದೇ ಸಂದರ್ಭದಲ್ಲಿ ಬ್ರಿಟಿಷ್ ವಸಾಹತುಷಾಹಿ ಕಂಪನಿಯು ನಾಸಿರ್ ಜಂಗನಿಗೆ ಸಹಾಯ ಮಾಡುವುದು ಪ್ರಾರಂಭವಾಯಿತು. ಇದರ ಫಲವಾಗಿ ಫ್ರೆಂಚರು ಮತ್ತು ಬ್ರಿಟಿಷರ ನಡುವೆ ಕರ್ನಾಟಕ ಯುದ್ಧಗಳು ನಡೆದವು. ಕೊನೆಗೆ ಬ್ರಿಟಿಷರು ವಿಜಯ ಸಾಧಿಸಿ ಹೆಸರಿಗೆ ಮಾತ್ರವೆ ನಾಸಿರ್‌ಜಂಗವನ್ನು ಅಧಿಕಾರಕ್ಕೆ ತಂದರು. ಕೊನೆಗೆ ಬ್ರಿಟಿಷರೆ ಅಧಿಕಾರವನ್ನು ಪಡೆಯುವುದರ ಮೂಲಕ ನಾಸಿರ್‌ಜಂಗನನ್ನು ತಮ್ಮ ಕೈಗೊಂಬೆಯನ್ನಾಗಿ ಮಾಡಿಕೊಂಡು ಬ್ರಿಟಿಷ್ ವಸಾಹತುಶಾಹಿ ಸರಕಾರಕ್ಕೆ ಒಳಪಡಿಸಿಕೊಂಡರು. ಅಲ್ಲದೆ ೧೮೭೯ರಲ್ಲಿ ಬ್ರಿಟಿಷರ ಸಹಾಯಕ ಸೈನ್ಯ ಪದ್ಧತಿಯನ್ನು ನಿಜಾಮ ಒಪ್ಪಿಕೊಳ್ಳುವ ಮೂಲಕ ಇಡೀ ಹೈದ್ರಾಬಾದ್ ಸಂಸ್ಥಾನವು ಬ್ರಿಟಿಷರ ಅಧೀನಕ್ಕೆ ಒಳಪಟ್ಟಿತು. ನಿಜಾಮ ಸಹಾಯಕ ಸೈನ್ಯಪದ್ಧತಿ ಸ್ವೀಕರಿಸಿದ ನಂತರ ಈ ಸಹಾಯಕ ಸೈನ್ಯ ಪದ್ಧತಿಯ ಅನುಗುಣವಾಗಿ ಹೈದ್ರಾಬಾದ್ ನಿಜಾಮನ ಸಂಸ್ಥಾನದ ಮೇಲೆ ವಸಾಹತುಶಾಹಿ ಧೋರಣೆಯನ್ನು ಆರಂಭಿಸಿದರು. ಅವರು ಹೈದ್ರಾಬಾದ್ ಸಂಸ್ಥಾನದಲ್ಲಿ ಪ್ರತ್ಯಕ್ಷವಾಗಿ ಆಳ್ವಿಕೆ ಮಾಡದೆ ನಿಜಾಮರ ಮೇಲೆ ಅಪರೋಕ್ಷವಾದ ಆಳ್ವಿಕೆ ಮಾಡಿದರು. ಅಲ್ಲದೆ ಬಲವಂತವಾಗಿ ವಸಾಹತು ನೀತಿಯನ್ನು ಏರುವ ಮೂಲಕ ತಮ್ಮ ಸಾಮ್ರಾಜ್ಯಷಾಹಿ ಧೋರಣೆಯನ್ನು ಈ ಪ್ರಸ್ತುತ ಅಧ್ಯಯನ ಪರಿಸರವಾದ ಮಾನ್ಯಖೇಟ ಪರಿಸರವು ಹೈದ್ರಾಬಾದ್ ಸಂಸ್ಥಾನಕ್ಕೆ ಒಳಪಟ್ಟಿರುವುದರಿಂದ ಈ ಪರಿಸರದ ಮೇಲು ಸಹ ಬ್ರಿಟಿಷರು ೧೭೪೮ರಿಂದ ೧೯೪೭ರವರೆಗೂ ಬ್ರಿಟಿಷರ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ಬ್ರಿಟಿಷರ ಆಳ್ವಿಕೆಗೆ ನೇರವಾಗಿ ಈ ಪರಿಸರವು ಪರೋಕ್ಷವಾಗಿ ಆಶ್ರಿತ ಹೈದ್ರಾಬಾದ್ ನಾಜಾಮರ ಸಂಸ್ಥಾನದ ಮೂಲಕ ಬ್ರಿಟಿಷರಿಗೆ ತಮ್ಮ ಆರ್ಥಿಕ ಧೋರಣೆಯನ್ನು ವಿಸ್ತರಿಸಿ ತಮ್ಮ ಅಧೀನದಲ್ಲಿ ಒಳಪಡಿಸಿಕೊಂಡು ಆಳ್ವಿಕೆ ಮಾಡಿರುವುದು ತಿಳಿದುಬರುತ್ತದೆ. ಇಂತಹ ಹಲವು ಕಾರಣಗಳಿಂದ ರಾಷ್ಟ್ರಕೂಟರ ಚಾರಿತ್ರಿಕ ಹಿನ್ನೆಲೆಯು ಕರ್ನಾಟಕ ಮಾತ್ರವಲ್ಲದೆ ಭಾರತದ ಇತಿಹಾಸದಲ್ಲಿ ತಮ್ಮದೇ ಆದ ಮಹತ್ವವನ್ನು ರಾಷ್ಟ್ರಕೂಟರು ಪಡೆದದ್ದು ವಿಶೇಷವಾಗಿದೆ.

**ಅಡಿಟಿಪ್ಪಣಿಗಳು**

೧. ಪಾಟೀಲ ಎಂ.ಬಿ.(ಸಂ), ೧೯೯೭, ಗುಲ್ಬರ್ಗಾ ಜಿಲ್ಲೆಯ ಗ್ಯಾಸೆಟಿಯರ್, ಪು.೪

೨. ಅದೇ, ಪು.೨೬-೨೮

೩. ಅದೇ, ಪು.೨೩

೪. ಅದೇ, ಪು.೨೩

೫. ಅದೇ, ಪು.೨೧-೨೨

೬. ಅದೇ, ಪು.೨೬

೭. ಅದೇ, ಪು.೨೬

೮. ಅದೇ, ಪು.೧೮೧

೯. ಗೋಪಾಲ ಆರ್. (ಸಂ), ೨೦೦೭, ಗುಲ್ಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.೧೯೯

೧೦. ಗೋಪಾಲ ಆರ್. (ಸಂ), ೨೦೦೭, ಪೂರ್ವೋಕ್ತ, ಪು.೨೦೦

೧೧. ಅದೇ, ಪು.೫೮

೧೨. ಪಾಟೀಲ ಎಂ.ಬಿ. (ಸಂ), ಪೂರ್ವೋಕ್ತ, ೧೯೯೭, ಪು.೪೫

೧೩. ಅದೇ, ಪು.೪೬

೧೪. ಶಿವರಾಮಕಾರಂತ, ಸಿರಿಗನ್ನಡ ಅರ್ಥಕೋಶ, ೧೯೪೧, ಪು.೧೪೧

೧೫. ಗೋಪಾಲಕೃಷ್ಣ ವಿ., ಸ್ಥಳನಾಮ ಅಧ್ಯಯನಗಳು, ೧೯೮೭, ಪು.೬೦೬

೧೬. ಅದೇ, ಪು.೪೧

೧೭. ದೇಶಪಾಂಡೆ ಎಸ್.ಎಲ್., ಕರ್ನಾಟಕದ ಸ್ಥಳನಾಮಗಳು, ೨೦೦೮, ಪು.೫೭-೫೮

೧೮. ಪಪ್ಪು ಆರ್.ಎಸ್., ಪ್ರಾಚೀನತಮ ಮಾನವ ಸಂಸ್ಕೃತಿಗಳು, ವಿಕಸನದ ಹಂತಗಳು, ಕರ್ನಾಟಕದ ಚರಿತ್ರೆ ಸಂ.೧, ೧೯೯೭, ಪು.೯೭

೧೯. ಅದೇ, ಪು.೯೮

೨೦. ಶಿವತಾರಕ ಕೆ.ಬಿ., ಕರ್ನಾಟಕದ ಪುರಾತತ್ವ ನೆಲೆಗಳು, ೨೦೦೧, ಚಿತ್ತಾಪೂರ, ಪು.೧೬೧-೧೭೧

೨೧. ಕನ್ನಡ ವಿಷಯ ವಿಶ್ವಕೋಶ, ೨೦೦೯, ಪು.೭೯೦

೨೨. ಶಿವತಾರಕ ಕೆ.ಬಿ. (ಸಂ), ೨೦೦೧, ಪೂರ್ವೋಕ್ತ, ಪು.೧೭೧

೨೩. ಕನ್ನಡ ವಿಶಯ ವಿಶ್ವಕೋಶ, ೨೦೦೯, ಪು.೧೦೫೫-೧೦೫೬

೨೪. ಶಿವತಾರಕ ಕೆ.ಬಿ. (ಸಂ), ಪೂರ್ವೋಕ್ತ, ೨೦೦೧, ಪು.೧೬೮

೨೫. ಕನ್ನಡ ವಿಷಯ ವಿಶ್ವಕೋಶ, ಪೂರ್ವೋಕ್ತ, ೨೦೦೯, ಪು.೧೦೫೬

೨೬. ಶಿವತಾರಕ ಕೆ.ಬಿ. (ಸಂ), ಪೂರ್ವೋಕ್ತ, ೨೦೦೧, ಪು.೧೬೩

೨೭. ಅದೇ, ಪು-೧೭೦

೨೮. ಗೋಪಾಲ ಆರ್ (ಸಂ), ಪೂರ್ವೋಕ್ತ, ೨೦೦೭, ಪು.೫೦೪

೨೯. ತೆಲಗಾವಿ ಲಕ್ಷ್ಮಣ, ೨೦೦೪, ಮೌರ್ಯ ಮತ್ತು ಶಾತವಾಹನಯುಗ, ಪು-೧೩-೧೪

೩೦. ಅದೇ, ಪು.೮೫

೩೧. ಪಾಟೀಲ ಎಂ.ಬಿ. (ಸಂ), ಪೂರ್ವೋಕ್ತ, ೧೯೯೭, ಪು.೧೪

೩೨. ಕನ್ನಡ ವಿಷಯ ವಿಶ್ವಕೋಶ, ೨೦೦೯, ಪು.೨೭೪-೨೭೫

೩೩. ಪಾಟೀಲ ಎಂ.ಬಿ. (ಸಂ), ಪೂರ್ವೋಕ್ತ, ೧೯೯೭, ಪು.೪೫-೪೬

೩೪. ಕರ್ನಾಟಕದ ಪರಂಪರೆ ಸಂಪುಟ-೧, ೧೯೭೦, ಪು.೨೮೨-೨೮೩

೩೫. ಪಾಟೀಲ್ ಎಂ.ಬಿ. (ಸಂ), ಪೂರ್ವೋಕ್ತ, ೧೯೯೭, ಪು.೪೬

೩೬. ಅದೇ, ಪು.೪೭-೪೮

೩೭. ಪಾಟೀಲ ಎಂ.ಬಿ. (ಸಂ), ಪೂರ್ವೋಕ್ತ, ೧೯೯೭, ಪು.೪೮-೪೯

೩೮. ಗೋಪಾಲ ಆರ್. (ಸಂ), ಪೂರ್ವೋಕ್ತ, ೨೦೦೭, ಪು.೬೦

೩೯. ಪಾಟೀಲ ಎಂ.ಬಿ. (ಸಂ), ಪೂರ್ವೋಕ್ತ, ೧೯೯೭, ಪು.೬೮೧

೪೦. ಕನ್ನಡ ವಿಷಯ ವಿಶ್ವಕೋಶ, ೨೦೦೯, ಪು.೬೪೯-೬೫೦

೪೧. ಪಾಟೀಲ ಎಂ.ಬಿ. (ಸಂ), ಪೂರ್ವೋಕ್ತ, ೧೯೯೭, ಪು.೭೫೭

೪೨. ಅದೇ, ಪೂರ್ವೋಕ್ತ, ಪು.೫೮-೫೯

೪೩. ಗೋಪಾಲ ಆರ್. (ಸಂ), ಪೂರ್ವೋಕ್ತ, ೨೦೦೭, ಪು.೬೦



# ಅಧ್ಯಾಯ : ಮೂರು

# ಮಾನ್ಯಖೇಟ ಪರಿಸರದ ದೇವಾಲಯಗಳು ಮತ್ತು ಮೂರ್ತಿಶಿಲ್ಪಗಳು

# ಅಧ್ಯಾಯ: ಮೂರು

# ಮಾನ್ಯಖೇಟ ಪರಿಸರದ ದೇವಾಲಯಗಳು ಮತ್ತು ಮೂರ್ತಿಶಿಲ್ಪಗಳು

## ದೇವಾಲಯ ಉಗಮ ಮತ್ತು ವಿಕಾಸ

ಅಲೆಮಾರಿಯಾಗಿದ್ದ ಆದಿಮಾನವ ಒಂದು ಕಡೆ ನೆಲೆನಿಂತಾಗ, ಸುರಕ್ಷಿತ ಸ್ಥಳದಲ್ಲಿ ವಾಸಿಸಲು ಯಾವಾಗ ಬಯಸಿದನೋ ಅಂದಿನಿಂದ ತನಗಾಗಿ ಮನೆ ಕಟ್ಟಿಕೊಳ್ಳಲು ಪ್ರಾರಂಭಿಸಿದನು. ಸುತ್ತ ಗೋಡೆ, ಅದರ ಮೇಲೆ ಛಾವಣಿ, ಮುಂಭಾಗದಲ್ಲಿ ಬಾಗಿಲು, ಗಾಳಿ, ಬೆಳಕು ಬರಲು ಕಿಟಕಿ ಹೀಗೆ ಮನೆಯನ್ನು ರೂಪಿಸಿಕೊಂಡನು. ಇವು ಕಲೆಯ ಪ್ರಥಮ ಹೆಜ್ಜೆಗಳಾಗಿವೆ. ಪ್ರಕೃತಿಯಿಂದ ಸಂಭವಿಸುವ ಎಲ್ಲಾ ಘಟನೆಗಳು ತನ್ನ ಬದುಕಿನಲ್ಲಿ ಮಹತ್ವದ ಪಾತ್ರವನ್ನು ವಹಿಸುವುದನ್ನು ಅರಿತನು, ನಂತರ ಅವನಿಗೆ ಅವುಗಳ ಬಗ್ಗೆ ಭಯ, ಭಕ್ತಿಗಳುಂಟಾಗುವುದರ ಜೊತೆಗೆ ಗೌರವವು ಬೆಳೆಯಿತು. ಈ ಕಾರಣದಿಂದಲೇ ತನ್ನ ರಕ್ಷಣೆಗಾಗಿ ಪ್ರಕೃತಿಯಲ್ಲಿನ ನದಿ ಗಿಡ-ಮರ, ಸೂರ್ಯ-ಚಂದ್ರರನ್ನು ಪೂಜಿಸಲು ಮುಂದಾದನು. ಕಾಲ ಗತಿಸಿದಂತೆ ಮನುಷ್ಯನ ಜ್ಞಾನ ಬೆಳೆದಂತೆಲ್ಲ ಪ್ರಕೃತಿಯಲ್ಲಿ ನಡೆಯುವ ಘಟನೆಗಳಿಗೆ ಶಕ್ತಿ ರೂಪ ಕೊಡಲು ಪ್ರಯತ್ನಿಸಿದನು.[೧] ಜೊತೆಗೆ ಅವುಗಳ ರಕ್ಷಣೆಗಾಗಿ ಸುತ್ತಲೂ ಗೋಡೆ ನಿರ್ಮಿಸತೊಡಗಿದನು, ಮುಂದುವರಿದು ಇಂದಿನ ದೇವಸ್ಥಾನಗಳ ರೀತಿಯಲ್ಲಿ ಚಿಕ್ಕ ಚಿಕ್ಕ ಗುಡಿಗಳನ್ನು ಪ್ರಾರಂಭದಲ್ಲಿ ನಿರ್ಮಾಣ ಮಾಡಿದನು. ಇದು ಮುಂದೆ ನಿರ್ಮಾಣವಾದ ದೇವಾಲಯಗಳ ಉಗಮಕ್ಕೆ ಪ್ರೇರಣೆಯಾಯಿತು.

ಪ್ರಾಚೀನ ಭಾರತದಲ್ಲಿ ಪೂಜಾಲಯ ನಿರ್ಮಿಸಿದ ಕೀರ್ತಿ ಬೌದ್ಧರಿಗೆ ಸಲ್ಲುತ್ತದೆ. ಇವರು ಗುಹಾಲಯಗಳನ್ನೇ ಪೂಜಾಗೃಹಗಳಾಗಿ ಬಳಸಿಕೊಂಡರು. ಈ ಧರ್ಮದ ಪ್ರಭಾವ ಮೌರ್ಯರ ಮೇಲೆ ಬಿದ್ದಿದ್ದು ಹಲವು ಶಾಸನಗಳು ಸ್ಪಷ್ಟಪಡಿಸುತ್ತವೆ. ಅಶೋಕನ ಕಾಲದಲ್ಲಿ ಬೌದ್ಧ ಧರ್ಮ ಯಾವಾಗ ರಾಜಧರ್ಮವಾಯಿತೋ, ಅದು ಪ್ರಾಚೀನ ಭಾರತೀಯ ವಾಸ್ತುಶಿಲ್ಪದ ಮೇಲೆ ಕ್ರಾಂತಿಕಾರಕ ಬದಲಾವಣೆಗಳಾಗಲೂ ಕಾರಣವಾಯಿತು. ಇವರು ಗುಹಾಲಯ ಸ್ತೂಪಗಳನ್ನು ನಿರ್ಮಿಸಿದರು. ಬುದ್ಧನ ಭೌತಿಕ ಅವಶೇಷಗಳನ್ನು ಇಟ್ಟು ಪೂಜಿಸುವ ಪೂಜಾಲಯಗಳೇ ಸ್ತೂಪಗಳು. ಇಲ್ಲವೆ ನೆಲದಲ್ಲಿ ಹೂಳಿದ ಶವದ ಮೇಲೆ ಕಟ್ಟುವ ಗೋಲಾಕಾರದ ಗುಡ್ಡ ಎಂದರ್ಥ. ಇದಕ್ಕೆ ನವಶಿಲಾಯುಗದ ಮಾನವರು ನಿರ್ಮಿಸಿದ ಮನೆಗಳು, ಗುಡಿಸಲುಗಳು ಮತ್ತು ಬೃಹತ್ ಶಿಲಾಯುಗದಲ್ಲಿ ನಿರ್ಮಿಸಿದ ಸಮಾಧಿ ಕಟ್ಟಡಗಳು ಪ್ರೇರಣೆಗಳಾಗಿವೆ. ಇವುಗಳು

ಬೌದ್ಧ ವಾಸ್ತುಶಿಲ್ಪದ ಬೆಳವಣಿಗೆಗೆ ಕಾರಣವಾಗಿದೆ.[೨] ಕ್ರಿ.ಪೂ. ೩ನೇ ಶತಮಾನದಲ್ಲಿ ಭಾರತದಲ್ಲಿ ನಿರ್ಮಿಸಿದ ಸ್ತೂಪಗಳು, ಸಾಂಚಿ, ಸಾರನಾಥ್, ಬುದ್ಧಗಯಾಗಳಲ್ಲಿ ಕಾಣಬಹುದು. ಕ್ರಿ.ಪೂ. ೨ನೇ ಶತಮಾನದಲ್ಲಿ ಹೆಲಿಯೋಡೊರಸ್‌ನು ವಾಸುದೇವನ ದೇವಾಲಯಕ್ಕೆ ಸ್ಥಾಪಿಸಿದ ಗರುಡ ಸ್ತಂಭವು ದೇವಾಲಯಕ್ಕೆ ಸಂಬಂಧಿಸಿದ ಅತಿ ಪ್ರಾಚೀನ ಆಕರವಾಗಿದೆ.[೩]

ಕರ್ನಾಟಕದಲ್ಲಿ ದೇವಾಲಯ ವಾಸ್ತುಶಿಲ್ಪ ಬೆಳೆದು ಬಂದ ದಾರಿಯನ್ನು ಗಮನಿಸಿದರೆ ಮೊದಲಿಗೆ ಶಾತವಾಹನರ ಕಾಲದ ಬೌದ್ಧಧರ್ಮದ ಸ್ತೂಪಗಳು ಕಂಡುಬರುತ್ತವೆ. ಇವು ಕ್ರಿ.ಪೂ. ೩ನೇ ಶತಮಾನ ನಿರ್ಮಿತಿಗಳಾಗಿದ್ದು ಬ್ರಹ್ಮಗಿರಿ, ಬನವಾಸಿ ಮತ್ತು ಪ್ರಸ್ತುತ ಅಧ್ಯಯನದ ಪರಿಸರದಲ್ಲಿರುವ ಸನ್ನತಿಯಲ್ಲಿ ಇವುಗಳ ಅವಶೇಷಗಳು ಪತ್ತೆಯಾಗಿವೆ. ಕ್ರಿಸ್ತಶಕದ ಆರಂಭದಲ್ಲಿ ಕಟ್ಟಿದ ದೇವಾಲಯಗಳು ಕರ್ನಾಟಕದಲ್ಲಿ ಉಳಿದಿಲ್ಲವಾದರೂ ಕ್ರಿ.ಶ. ೧೫೦ರ ಕದಂಬರ ಪ್ರಾಕೃತ ಶಾಸನ ಶಾತವಾಹನ 'ಮಟ್ಟಪಟ್ಟಿದೇವ'ರಿಗೆ ದತ್ತಿ ಕೊಟ್ಟ ವಿಷಯವನ್ನು ದಾಖಲಿಸುತ್ತದೆ. ಕ್ರಿ.ಶ. ೪೫೦ರ ತಾಳಗುಂದ ಶಾಸನ ತಾಳಗುಂದದ ಮಹಾದೇವ ದೇವಾಲಯವನ್ನು ದಾಖಲಿಸುತ್ತದೆ. ಇದು ಕರ್ನಾಟಕದ ಅತಿ ಪ್ರಾಚೀನ ದೇವಾಲಯವಾಗಿದೆ. ಇವರು ಕರ್ನಾಟಕದ ದೇವಾಲಯ ವಾಸ್ತುಶಿಲ್ಪ ನಿರ್ಮಾಣಕಾರರಲ್ಲಿ ಮೊದಲಿಗರು.[೪] ಆದರೆ ಪ್ರಸ್ತುತ ದೇವಾಲಯಗಳು ಶಾಸನೋಲ್ಲೇಖಿತ ದೇವಾಲಯಗಳಾಗಿವೆ ಹೊರತು ಸ್ಪಷ್ಟವಾಗಿ ಕಾಣುವುದಿಲ್ಲ. ಕರ್ನಾಟಕದ ದೇವಾಲಯ ವಾಸ್ತುಶಿಲ್ಪದ ಮೂಲ ರಚನಾತ್ಮಕ ಲಕ್ಷಣಗಳು ಬಾದಾಮಿ ಚಾಲುಕ್ಯರ ಕಾಲದಲ್ಲಿ ಅಭಿವೃದ್ಧಿಯಾಯಿತು. ಐಹೊಳೆ, ಬಾದಾಮಿ, ಪಟ್ಟದಕಲ್ಲು ಮತ್ತು ಮಹಾಕೂಟ ಮುಂತಾದವುಗಳನ್ನು ಅವರ ಕಾಲದ ಪ್ರಮುಖ ಕಲಾಚಟುವಟಿಕೆಯ ಕೇಂದ್ರಗಳಾಗಿದ್ದವು. ದೇವಾಲಯದ ವಾಸ್ತುಶಿಲ್ಪದಲ್ಲಿ ಗರ್ಭಗೃಹ ಜೊತೆಗೆ ನವರಂಗ ಮತ್ತು ಸುಕನಾಸಿಗಳ ನಿರ್ಮಾಣ ಚಾಲುಕ್ಯರ ವಿಶಿಷ್ಟ ಕೊಡುಗೆಯಾಗಿದೆ. ಇವರು ಚಿಕ್ಕ ಚಿಕ್ಕ ದೇವಾಲಯಗಳ ಮಾದರಿಯನ್ನು ನಿರ್ಮಿಸಿ ಅವುಗಳನ್ನು ಆಧರಿಸಿ ಮುಖ್ಯ ದೇವಾಲಯಗಳನ್ನು ನಿರ್ಮಿಸಿದರು. ನಂತರ ರಾಷ್ಟ್ರಕೂಟರ ಗುಹಾಲಯ ದೇವಾಲಯಗಳು, ಕಲ್ಯಾಣ ಚಾಲುಕ್ಯರ ಶಿಲಾಬಾಲಿಕೆಯರ ಭಿತ್ತಿಗಳು ಮಾನ್ಯಖೇಟದ ಪರಿಸರದಲ್ಲಿ ಕಾಣುತ್ತೇವೆ. ಅಲ್ಲದೆ ಹೊಯ್ಸಳರ ವೇಸರ ಶೈಲಿಯ ಶಿಖರಗಳು, ವಿಜಯನಗರ ಕಾಲದ ರಾಯಗೋಪುರಗಳಲ್ಲಿ ಕರ್ನಾಟಕದ ದೇವಾಲಯ ವಾಸ್ತುಶಿಲ್ಪಕಲೆಯ ಪ್ರೌಢಿಮೆಯನ್ನು ಕಾಣಬಹುದು.

ಪ್ರಸ್ತುತ ಅಧ್ಯಯನವಾದ ಮಾನ್ಯಖೇಟ ಪರಿಸರದಲ್ಲಿ ಲಭ್ಯವಿರುವ ದೇವಾಲಯಗಳನ್ನು ಪರಿಶೀಲಿಸಬಹುದು. ಆರಂಭದಲ್ಲಿ ಕಟ್ಟಿದ ದೇವಾಲಯಗಳು ಉಳಿದಿಲ್ಲವಾದರೂ ಕ್ರಿ.ಪೂ. ಸುಮಾರು ೨ನೇ ಶತಮಾನದಲ್ಲಿ ನಿರ್ಮಿಸಿದ ಸ್ತೂಪ ಪ್ರಸ್ತುತ ಅಧ್ಯಯನ ಪರಿಸರದ ಚಿತ್ತಾಪೂರ ತಾಲೂಕಿನ ಸನ್ನತಿಯಲ್ಲಿ ಪತ್ತೆಯಾಗಿದೆ. ರಾಷ್ಟ್ರಕೂಟರ ದೇವಾಲಯಗಳು ಚಿತ್ತಾಪೂರ ತಾಲೂಕಿನ ಸಾಗಾಯಿ, ಕಾಳಗಿ, ದಿಗ್ಗಾವಿ, ನಾಲವಾರ, ಸೇಡಂ ತಾಲೂಕಿನ ಹಂದರ್ಕಿ, ಕೊಡ್ಲ, ಬಟಗೆರಾ ಮತ್ತು ರಾಷ್ಟ್ರಕೂಟರ ರಾಜಧಾನಿಯಾಗಿದ್ದ ಮಾನ್ಯಖೇಟದಲ್ಲಿ ಕಂಡುಬರುತ್ತವೆ. ಇವುಗಳು

ಅವರ ವಾಸ್ತುಕಲೆಯ ಔನತ್ಯವನ್ನು ತೋರಿಸುತ್ತವೆ. ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಕ್ರಿ.ಶ. ೭ನೇ ಶತಮಾನದಿಂದ ೧೨ನೇ ಶತಮಾನದ ಕಾಲಾವಧಿಯಲ್ಲಿ ರಾಷ್ಟ್ರಕೂಟರ ಮತ್ತು ಕಲ್ಯಾಣ ಚಾಲುಕ್ಯರ ದೇವಾಲಯಗಳು ಪ್ರಸ್ತುತ ಪರಿಸರದಾದ್ಯಂತ ನಿರ್ಮಾಣಗೊಂಡಿರುವುದು ಅಲ್ಲಿ ದೊರೆತಂತಹ ದೇವಾಲಯದ ಅವಶೇಷ ಮತ್ತು ದೇವಾಲಯಗಳು ಇರುವುದನ್ನು ಶಾಸನಗಳು ದೃಢೀಕರಿಸುತ್ತವೆ. ಇವರ ಕಾಲದಿಂದ ದೇವಾಲಯಗಳ ನಿರ್ಮಾಣ ಹೆಚ್ಚಾಗಿದ್ದು ಕಂಡುಬರುತ್ತದೆ. ಇವುಗಳನ್ನು ಹಸಿರು ಮಿಶ್ರಿತ ಕಪ್ಪು ಶಿಲೆಯಿಂದ ನಿರ್ಮಿಸಲಾಗಿದೆ. ಇಲ್ಲಿ ಶೈವ, ವೈಷ್ಣವ ಶಾಕ್ತ ಮತ್ತು ಇತರೆ ಪಂಥದ ದೇವಾಲಯಗಳು, ಜೈನಬಸದಿಗಳು ಈ ಪರಿಸರದಲ್ಲಿ ಕಾಣಬಹುದು. ಗರ್ಭಗೃಹದ ಮೇಲೆ ಸಮತಟ್ಟಾದ ಮೇಲ್ಛಾವಣಿ ಅಥವಾ ವಿವಿಧ ರೀತಿಯ ಶಿಖರ ರೂಪುಗೊಂಡಿರುವುದು ಕಾಣಬಹುದು. ಮೇಲಿನ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಈ ದೇವಾಲಯಗಳು ಸ್ಥಳೀಯ ಪ್ರಬೇಧಗಳು ಬೆಳೆಸಿಕೊಂಡವು. ಇದರಿಂದ ಆಯಾ ಪ್ರದೇಶದಲ್ಲಿ ಅಥವಾ ಪರಿಸರದಲ್ಲಿ ಉಗಮಗೊಂಡ ಹಲವು ಶೈಲಿಯನ್ನು ಪ್ರಸ್ತಾಪಿಸಲಾಗಿದೆ.

**ದ್ರಾವಿಡ ಶೈಲಿ:** ಅಜಿತಾಗಮ ಗ್ರಂಥದಲ್ಲಿ ಕಂಠದಿಂದ ಮೇಲಕ್ಕೆ ಅಷ್ಟಾಶ್ರವಾಗಿರುವುದೇ ದ್ರಾವಿಡ ಶೈಲಿ ಎಂದು ಹೇಳಿದೆ. ಅದಿಷ್ಠಾನ, ಭಿತ್ತಿ, ಪ್ರಸ್ತರ, ಗ್ರೀವ, ಶಿಖರ, ಸ್ತೂಪಿಯು ದ್ರಾವಿಡ ಶೈಲಿ ದೇವಾಲಯದ ಭಾಗಗಳಾಗಿದ್ದು 'ಷಡ್ವರ್ಗ ದೇವಾಲಯ'ಗಳೆನಿಸಿವೆ. ಅಧಿಷ್ಠಾನದಿಂದ ಸ್ತೂಪಿಯವರೆಗೆ ಆರು ಭಾಗಗಳಿರುತ್ತವೆ. ಈ ಶೈಲಿಯ ಶಿಖರಗಳು ಮೇಲಕ್ಕೆ ಹೋದಂತೆ ಕ್ರಮೇಣ ಸಣ್ಣದಾಗುವ ಅಂತಸ್ತುಗಳಿರುತ್ತವೆ. ಪ್ರತಿಯೊಂದು ಅಂತಸ್ತು ಗರ್ಭಗೃಹದ ಪ್ರತಿರೂಪದಂತಿರುತ್ತದೆ. ಒಂದೊಂದು ಅಂತಸ್ತನ್ನು ಪ್ರತ್ಯೇಕಿಸುವ ದುಂಡು ಕಪೋತ ಮತ್ತು ಮೇಲಂತಸ್ತುಗಳ ಸುತ್ತಲೂ ಇರುವ ಪುಟ್ಟ ತೆರೆದ ಅಂಕಣಗಳು ಈ ಶೈಲಿಯ ಪ್ರಮುಖ ಲಕ್ಷಣಗಳಾಗಿವೆ.[೫]

**ನಾಗರ ಶೈಲಿ:** ವಿಮಾನಾರ್ಚನಕಲ್ಪ, ದೇಪ್ತಾಗಮ, ಕೌರವಾಗಮ, ಮಯಮತ ಮುಂತಾದ ಗ್ರಂಥಗಳಲ್ಲಿ ಮೂಲದಿಂದ ತುದಿಯವರೆಗೂ ಚೌಕೋನವಾಗಿರುವುದೇ ನಾಗರ ಶೈಲಿ ಎಂದು ಹೇಳಿದೆ. ಇದು ಕೆಳಗಿನಿಂದ ಮೇಲಕ್ಕೆ ಬಾಗಿದ ರೇಖೆಯಂತಹ ರಚನೆಯಾಗಿರುವುದರಿಂದ ಇದು ರೇಖಾನಾಗರ ಶೈಲಿ.[೬] ಪೀಠ, ಜಂಘಾ, ಶೃಂಗ, ಆಮಲಕ, ಕಳಸ ಇವುಗಳು ಪ್ರಸ್ತುತ ದೇವಾಲಯದ ಪ್ರಮುಖ ಅಂಗಗಳಾಗಿವೆ. ಶಿಖರದ ಮೂಲೆಗಳಲ್ಲಿ ಹಂತ ಹಂತಗಳ ಕೂಟದಂತಹ ರಚನೆಯಿದ್ದು ಆಮಲಕವಿರುವುದು. ಮೇಲೆ ಹೋದಂತೆ ಶಿಖರವು ಕಿರಿದಾಗುತ್ತಾ ಹೋಗುತ್ತದೆ. ಅಂತ್ಯದಲ್ಲಿ ದೊಡ್ಡ ಆಮಲಕ, ಅದರ ಮೇಲೆ ಕಲಶವೂ ಇರುವುದು ನಾಗರಶೈಲಿಯ ಲಕ್ಷಣಗಳಾಗಿವೆ.

**ವೇಸರ ಶೈಲಿ:** ಇದೊಂದು ಮಿಶ್ರಶೈಲಿಯಾಗಿದೆ. ನಾಗರ ಮತ್ತು ದ್ರಾವಿಡ ಶೈಲಿಗಳ ಮಿಶ್ರಣದ ಫಲವೇ ವೇಸರ ಶೈಲಿ. ಇದು ವಿಂದ್ಯಾ ಪರ್ವತದಿಂದ ಕೃಷ್ಣಾ ನದಿಯವರೆಗೆ ಹರಡಿದೆ. ಅಜಿತಾಗಮ ಗ್ರಂಥದಲ್ಲಿ ಕಂಠದಿಂದ ಮೇಲಕ್ಕೆ ವೃತ್ತಾಕಾರವಿರುವುದು ವೇಸರ ಶೈಲಿ

ಎಂದು ಹೇಳಿದೆ. ಕಾಶ್ಯಪಶಿಲ್ಪ ಮತ್ತು ಶಿಲ್ಪರತ್ನ ಗ್ರಂಥಗಳಲ್ಲಿ ಕಂಠ ಹಾಗೂ ಶಿರೋಭಾಗವು ವೃತ್ತಾಕಾರವಿದ್ದಲ್ಲಿ ವೇಸರ ಶೈಲಿ ಎಂದು ಅರ್ಥೈಸಿದೆ. ಸುಪ್ರಭೇದಾಗಮ ಗ್ರಂಥದಲ್ಲಿ ಕಂಠದಿಂದ ಮೇಲಕ್ಕೆ ವೃತ್ತಾಕಾರವಾಗಿರುವುದೇ ವೇಸರ ಶೈಲಿ.[೭] ಈ ಮೂರು ಶೈಲಿಗಳಲ್ಲದೇ ಇನ್ನು ಅನೇಕ ಶೈಲಿಗಳಿವೆ.

ಕರ್ನಾಟಕದಲ್ಲಿ ಆರಂಭದ ದೇವಾಲಯಗಳು ಕದಂಬನಾಗರ ಶೈಲಿಯಲ್ಲಿರುವುದು ಕಂಡುಬರುತ್ತದೆ. ಇದನ್ನು ಫಾಂಸನಾ ಶಿಖರ ಎಂತಲೂ ಕರೆಯುತ್ತಾರೆ. ಇಂತಹ ಶಿಖರಗಳು ಕದಂಬರು ನಿರ್ಮಿಸಿದ ದೇವಾಲಯಗಳ ರಚನೆಯಲ್ಲಿ ಕಂಡುಬರುತ್ತಿದ್ದವು. ತದನಂತರ ಕಲ್ಯಾಣ ಚಾಲುಕ್ಯರು ನಿರ್ಮಿಸಿದ ದೇವಾಲಯಗಳಲ್ಲಿ ಅಧಿಕವಾಗಿ ಕಂಡುಬರುತ್ತದೆ. ಇವು ಅಧಿಷ್ಠಾನ, ಭಿತ್ತಿ, ಪ್ರಸ್ತರ ಮತ್ತು ಶಿಖರವು ಕಂಠ, ಕಪೋತದಿಂದ ಕೂಡಿದ್ದು ಹಂತ ಹಂತವಾಗಿ ಚಿಕ್ಕದಾಗುತ್ತಾ ಮೇಲೇರುತ್ತದೆ. ಅಂತ್ಯದಲ್ಲಿ ಗ್ರೀವ, ಶಿಖರ ಮತ್ತು ಸ್ತೂಪಿ ಇರುತ್ತದೆ.[೮] ಇವು ಈ ಶೈಲಿಯ ಲಕ್ಷಣಗಳಾಗಿವೆ. ಕಳಿಂಗ ಶೈಲಿ ಒರಿಸ್ಸಾದಲ್ಲಿ ಹೆಚ್ಚು ಪ್ರಚಲಿತವಿದೆ.

ಪ್ರಸ್ತುತ ಈ ಅಧ್ಯಯನ ಮಾನ್ಯಖೇಟ ಪರಿಸರದಲ್ಲಿಯ ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರ ಮನೆತನಕ್ಕೆ ಸೀಮಿತವಾಗಿರುವುದರಿಂದ ಮಾನ್ಯಖೇಟ ಪರಿಸರದಲ್ಲಿ ರಾಷ್ಟ್ರಕೂಟರು ಹಾಗೂ ಕಲ್ಯಾಣ ಚಾಲುಕ್ಯರಿಗೆ ಒಳಪಡುವ ದೇವಾಲಯಗಳ ವಾಸ್ತುವನ್ನು ಈ ಕೆಳಕಂಡಂತೆ ದಾಖಲಿಸಲಾಗಿದೆ. ಪ್ರಸ್ತುತ ಇಲ್ಲಿರುವ ಶೈವ, ವೈಷ್ಣವ, ಶಾಕ್ತ ಮತ್ತು ಇತರೆ ಪಂಥದ ದೇವಾಲಯಗಳು ಮತ್ತು ಜೈನಬಸದಿಗಳು ಸಂಬಂಧಿಸಿದವುಗಳಾಗಿದ್ದು ಇವುಗಳ ವಾಸ್ತು ವಿಶೇಷತೆಯನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

### ೩.೧. ಶೈವ ದೇವಾಲಯಗಳು

ಶೈವಾರಾಧನೆ ಭಾರತದ ಪ್ರಾಚೀನ ಆರಾಧನೆಗಳಲ್ಲೊಂದಾಗಿದ್ದು ಸಿಂಧೂ ನಾಗರಿಕತೆ ಮತ್ತು ವೈದಿಕ ಯುಗಗಳಲ್ಲಿಯೇ ಈ ಕುರಿತು ಕುರುಹುಗಳು ಲಭ್ಯವಾಗಿವೆ. ತರುವಾಯದಲ್ಲಿ ಇದು ಹಲವು ಪಂಥಗಳಾಗಿ ಬೆಳೆದು ಭಾರತದಾದ್ಯಂತ ಹರಡಿತು. ಪ್ರಸ್ತುತ ಅಧ್ಯಯನದ ಮಾನ್ಯಖೇಟ ಪರಿಸರದಲ್ಲಿ ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರಿಂದ ನಿರ್ಮಾಣವಾದ ಅವರ ಆಳ್ವಿಕೆ ಕಾಲಾವಧಿಯ ಶೈವ ದೇವಾಲಯಗಳು ಬಹಳಷ್ಟಿದ್ದು ಅವುಗಳನ್ನು ಒಂದೆಡೆ ಸೇರಿಹಿಡಿದು ಅವುಗಳ ಬಗ್ಗೆ ಮಾಹಿತಿ ಕೊಡುವ ಪ್ರಯತ್ನವು ಇದಾಗಿದೆ.

| | | | |
|---|---|---|---|
| ಸಂಖ್ಯೆ | : ೦೧ | | |
| ಊರು | : ಹಂದರಕಿ | ಹೆಸರು | : ಲೋಕೇಶ್ವರ ದೇವಾಲಯ |
| ಸ್ಥಳ | : ಊರ ಮುಂಭಾಗ | ಕಾಲಮಾನ | : ಕ್ರಿ.ಶ. ೯–೧೦ನೇ ಶತಮಾನ |
| ಅಭಿಮುಖ | : ಉತ್ತರ | ಶೈಲಿ | : ರಾಷ್ಟ್ರಕೂಟ |
| ಸ್ಥಿತಿ | : ಮಧ್ಯಮ | ಸಂರಕ್ಷಣೆ | : ಧಾರ್ಮಿಕದತ್ತಿ ಇಲಾಖೆ |

ಹಂದರಕಿಯು ಮಾನ್ಯಖೇಟದಿಂದ ೨೦ ಕಿ.ಮೀ. ದೂರದಲ್ಲಿದೆ. ಇಲ್ಲಿಯ ಲೋಕೇಶ್ವರ ದೇವಾಲಯದ ತಳಪಾಯದಲ್ಲಿ ಗರ್ಭಗೃಹ ಅರ್ಧಮಂಟಪ, ನವರಂಗ ಮತ್ತು ಮುಖಮಂಟಪ, ಎದುರಿಗೆ ನಂದಿಮಂಟಪಗಳಿವೆ. ದ್ವಾರ ಚೌಕಟ್ಟಿನ ಹೊಸ್ತಿಲ ಬದಿಗಳಲ್ಲಿ ಆನೆಗಳಿವೆ. ಕಪೋತದಲ್ಲಿ ಚೈತ್ಯ ನಮೂನೆಗಳಿವೆ. ಅರ್ಧಮಂಟಪದ ಮತ್ತು ಗರ್ಭಗೃಹದ ಭುವನೇಶ್ವರಿಗಳಲ್ಲಿ ಅರಳಿದ ಕಮಲಗಳ ಕೆತ್ತನೆಗಳಿವೆ. ನವರಂಗದ ಗೋಡೆ ಭಾಗ ಜೀರ್ಣೋದ್ಧಾರವಾಗಿದೆ. ಇದರ ಭುವನೇಶ್ವರಿಗಳಲ್ಲಿ ಅರಳಿದ ಕಮಲಗಳಿವೆ. ನವರಂಗದ ಗೋಡೆ ಭಾಗ ಜೀರ್ಣೋದ್ಧಾರವಾಗಿದೆ. ಇದರ ಭುವನೇಶ್ವರಿಯಲ್ಲೂ ವಿಸ್ತಾರವಾದ ವೃತ್ತಾಕಾರದ ಅರಳಿದ ಕಮಲವಿದೆ. ದ್ವಾರದ ಬದಿಗಳಲ್ಲಿ ಆಳೆತ್ತರದ ಶೈವ ದ್ವಾರಪಾಲಕರ ಶಿಲ್ಪಗಳಿವೆ. ಎದುರಿನ ಮಂಟಪದಲ್ಲಿ ನಂದಿ ಅಧಿಷ್ಠಾನದಲ್ಲಿ ಉಪಾನ, ಜತಿ, ತ್ರಿಪಟ್ಟ ಕುಮುದ, ಕಪೋತಗಳಿದ್ದು, ಇದು ಸುಮಾರು ಒಂದು ಮೀಟರ್ ಎತ್ತರವಿದೆ. ಗೋಡೆಯು ಸರಳವಾಗಿದ್ದು ತ್ರಿರಥ ಮಾದರಿಯಲ್ಲಿದೆ. ದ್ರಾವಿಡ ಮಾದರಿಯ ತದನಂತರ ಕಾಲದ ಗಾರೆ ಇಟ್ಟಿಗೆಯ ಶಿಖರವಿದೆ.[೯]

| | | | | | |
|---|---|---|---|---|---|
| **ಸಂಖ್ಯೆ** | : | **೦೨** | | | |
| ಊರು | : | ಹಂದರಕಿ | ಹೆಸರು | : | ಆನೇಶ್ವರ |
| ಸ್ಥಳ | : | ಊರ ಮುಂಭಾಗ | ಕಾಲಮಾನ | : | ಕ್ರಿ.ಶ. ೯–೧೦ನೇ ಶತಮಾನ |
| ಅಭಿಮುಖ | : | ಉತ್ತರ | ಶೈಲಿ | : | ರಾಷ್ಟ್ರಕೂಟ |
| ಸ್ಥಿತಿ | : | ಮಧ್ಯಮ | ಸಂರಕ್ಷಣೆ | : | ಧಾರ್ಮಿಕದತ್ತಿ ಇಲಾಖೆ |

ಆನೇಶ್ವರ ದೇವಾಲಯದಲ್ಲಿ ಗರ್ಭಗೃಹ, ಅರ್ಧಮಂಟಪ ಮತ್ತು ನವರಂಗಗಳಿವೆ. ಇದಕ್ಕೆ ಹೊಂದಿ ಇನ್ನೆರಡು ಗರ್ಭಗೃಹಗಳಿವೆ. ತಲಾ ಒಂದಕ್ಕೆ ಅರ್ಧಮಂಟಪಗಳಿವೆ. ಮುಂದೆ ತೆರೆದ ಸಭಾಮಂಟಪವಿದೆ. ದೇವಾಲಯದ ಸುತ್ತಲೂ ಪ್ರದಕ್ಷಿಣೆ ಪಥವಿದೆ. ಇದು ತ್ರಿರಥ ಮಾದರಿಯಲ್ಲಿದೆ. ಗರ್ಭಗೃಹದಲ್ಲಿ ೧೨ನೆಯ ಶತಮಾನದ ಶಿವಲಿಂಗವಿದೆ. ದ್ವಾರದಲ್ಲಿ ವಿವಿಧ ಶಾಖೆಗಳು ಮತ್ತು ಶೈವ ದ್ವಾರಪಾಲಕರಿದ್ದಾರೆ. ಮೇಲೆ ಹಂಸಪಕ್ಷಿಗಳ ಸಾಲಿದೆ. ಕಪೋತದಲ್ಲಿ ಐದು ರೇಖಾನಗರ ಶೈಲಿಯ ಅರ್ಧಮಂಟಪದ ಕಂಬಗಳಲ್ಲಿ ಗುಳೆಯಾಕರಾದ ಲಕ್ಷಣಗಳಿವೆ. ಉಂಗುರ ಪಟ್ಟಿಕೆಗಳಿವೆ. ಎರಡು ಚೌಕ ಮುಖಗಳಲ್ಲಿ ನೃತ್ಯ ಗಣೇಶನ ವಾದ್ಯಮೇಳ, ಶಿವಪಾರ್ವತಿ, ದೇವಾ–ದೇವತೆಗಳು, ಶಿವನ ಪೀಠದ ಕೆಳಗೆ ನಂದಿ, ನಟರಾಜ, ವಾದ್ಯಮೇಳ, ನರಸಿಂಹ ಹಿರಣ್ಯಕಶ್ಯಪನ ಹೊಟ್ಟೆಯನ್ನು ಬಗೆಯುತ್ತಿರುವುದು, ಶಿವ, ನಂದಿ ಸವಾರಿ ಮಾಡುತ್ತಿರುವುದು, ಜೊತೆಯಲ್ಲಿ ಭಕ್ತರು ಕಿರಾತಾರ್ಜುನರ ದೃಶ್ಯ, ಶಿವ, ಅರ್ಜುನ, ನಂದಿ ಬೇಟೆ, ಗಜಮರ್ದನ ಚಿತ್ರಗಳಿವೆ.

ಈ ದೇವಾಲಯದ ದ್ವಾರಪಟ್ಟಿಕೆಯಲ್ಲಿ ಶೈವ ದ್ವಾರಪಾಲಕರಿದ್ದಾರೆ. ಬದಿಗೆ ಜಾಲಂಧ್ರಗಳಿವೆ. ಸ್ತಂಭ ಮಕರತೋರಣದಲ್ಲಿ ಭಕ್ತರ ನಡುವೆ ನಟರಾಜನಿದ್ದಾನೆ. ಮಕರಗಳ ಬದಿಗಳಲ್ಲಿ ನವಿಲುಗಳಿವೆ. ತೆರೆದ ನವರಂಗಕ್ಕೆ ಕಕ್ಷಾಸನವಿದೆ. ಇದಕ್ಕೆ ಉತ್ತರದ ಅಧಿಷ್ಠಾನವಿದೆ. ಹೊರಗೋಡೆ ಪ್ರದಕ್ಷಣಾಪಥವಿದೆ. ತ್ರಿರಥ ಮಾದರಿಯಲ್ಲಿದೆ. ಶಿಖರ ಸಂಪೂರ್ಣವಾಗಿ ಜೀರ್ಣೋದ್ಧಾರವಾಗಿದೆ.[೧೦]

| | | | |
|---|---|---|---|
| ಸಂಖ್ಯೆ | : ೦೩ | | |
| ಊರು | : ಬಟಗೇರ (ಬಿ) | ಹೆಸರು | : ಈಶ್ವರ |
| ಸ್ಥಳ | : ಶಾಲೆ ಓಣಿ | ಕಾಲಮಾನ | : ಕ್ರಿ.ಶ. ೯–೧೦ನೇ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ರಾಷ್ಟ್ರಕೂಟ |
| ಸ್ಥಿತಿ | : ಕನಿಷ್ಠ | ಸಂರಕ್ಷಣೆ | : –– |

ಮಾನ್ಯಖೇಟದಿಂದ ೩೦ ಕಿ.ಮೀ. ಅಂತರದಲ್ಲಿರುವ ಬಟಗೇರ (ಬಿ) ಗ್ರಾಮದಲ್ಲಿ ಇಲ್ಲಿ ಇತ್ತೀಚಿಗೆ ನಿರ್ಮಿಸಿರುವ ಒಂದು ಕೊಠಡಿಯಲ್ಲಿ ರಾಷ್ಟ್ರಕೂಟರ ಕಾಲಕ್ಕೆ ಸೇರಿರುವ ಲಿಂಗವೊಂದರ ರುದ್ರಭಾಗವನ್ನು ಪೀಠದಲ್ಲಿ ಅಳವಡಿಸಿದ್ದಾರೆ. ಕೊಠಡಿಯ ಹೊರಭಾಗದಲ್ಲಿ ಭಗ್ನಗೊಂಡಿರುವ ಲಿಂಗವಿದೆ. ಈ ಶಿಲ್ಪವಶೇಷಗಳು ನಶಿಸಿಹೋದ ಪ್ರಾಚೀನ ಶಿವಾಲಯದ ಮೇಲೆ ಬೆಳಕು ಚೆಲ್ಲುವುದರಿಂದ ಪ್ರಸ್ತುತ ಅಧ್ಯಯನದ ಪರಿಸರದಲ್ಲಿರುವ ಶೈವ ದೇವಾಲಯಗಳಲ್ಲಿ ಒಂದಾಗಿತ್ತು ಎಂಬುವುದು ಕಂಡುಬರುತ್ತದೆ.[೧೧]

| | | | |
|---|---|---|---|
| ಸಂಖ್ಯೆ | : ೦೪ | | |
| ಊರು | : ಉಡಗಿ | ಹೆಸರು | : ಲೋಕೇಶ್ವರ |
| ಸ್ಥಳ | : ಊರ ನಡುವೆ | ಕಾಲಮಾನ | : ಕ್ರಿ.ಶ. ೯–೧೦ನೇ ಶತಮಾನ |
| ಅಭಿಮುಖ | : ಪಶ್ಚಿಮ | ಶೈಲಿ | : ರಾಷ್ಟ್ರಕೂಟ |
| ಸ್ಥಿತಿ | : ಕನಿಷ್ಠ | ಸಂರಕ್ಷಣೆ | : ಸ್ಥಳೀಯ |

ಉಡಗಿಯ ಲೋಕೇಶ್ವರ ದೇವಾಲಯವು ರಾಷ್ಟ್ರಕೂಟರ ಕಾಲದ ಪ್ರಮುಖ ದೇವಾಲಯವಾಗಿತ್ತು. ಅಧಿಷ್ಠಾನದ ಮೇಲಿರುವ ದೇವಾಲಯವು ಗರ್ಭಗೃಹ, ಅರ್ಧಮಂಟಪ ಮತ್ತು ನವರಂಗ ಭಾಗಗಳನ್ನು ಒಳಗೊಂಡಿದೆ. ಗರ್ಭಗೃಹದ ದ್ವಾರವು ಅರ್ಧಕಂಬಗಳ ರಚನೆ ಮತ್ತು ತಳದಲ್ಲಿ ದ್ವಾರಪಾಲಕರ ಉಬ್ಬುರಚನೆಗಳಿಂದ ಕೂಡಿದೆ. ದ್ವಾರ ಬಂಧದಲ್ಲಿ ಮಕರ ತೋಟರಣದ ಅಲಂಕರಣವಿದೆ. ಅರ್ಧಮಂಟಪದ ಪ್ರವೇಶದಲ್ಲಿ ಸಣ್ಣಗಾತ್ರದ ಕಂಬಗಳಿದ್ದು ತೊಲೆಯನ್ನು ಹೊತ್ತಿವೆ. ಅರ್ಧಮಂಟಪದ ಇಕ್ಕೆಲಗಳಲ್ಲಿ ನವರಂಗಕ್ಕೆ ಹೊಂದಿಕೊಂಡಂತೆ ಎರಡು ಸಣ್ಣ ಗರ್ಭಗೃಹಗಳಿವೆ. ಇವುಗಳ ಬಲಭಾಗದ ಗರ್ಭಗೃಹದಲ್ಲಿ ಸೂರ್ಯನ ಪಾಣಿಪೀಠವಿದ್ದು, ಅದರ ಮೇಲೆ ಲಿಂಗವಿರಿಸಿದ್ದಾರೆ. ಎಡಭಾಗದ ಗರ್ಭಗೃಹದಲ್ಲಿ ಪಾಣಿಪೀಠವಿದ್ದು ನೆಲದಲ್ಲಿ ಹೂತುಹೋಗಿದೆ. ನವರಂಗದಲ್ಲಿ ಮಧ್ಯದ ನಾಲ್ಕು ಕಂಬಗಳು ಚೌಕ ರಚನೆ ಮತ್ತು ಪಟ್ಟಿಗಳ ಅಲಂಕರಣದಿಂದ ಕೂಡಿವೆ. ಚೌಕಮುಖಗಳಲ್ಲಿ ಅಲಂಕರಣವಿದ್ದು ಅದರೊಳಗೆ ಕುದುರೆ ಸವಾರ, ರತಿಮನ್ಮಥ, ಜಟ್ಟಿಗಳು, ಆನೆ ಮತ್ತು ನಾಗದೇವತೆಗಳ ಉಬ್ಬು ರಚನೆಗಳನ್ನು ಕಾಣಬಹುದು.

ಈ ದೇವಾಲಯದಲ್ಲಿನ ಭುವನೇಶ್ವರಿಯು ಸರಳವಾಗಿದ್ದು, ಕಮಲ ದಳಗಳ ತೆಳು ಉಬ್ಬುಶಿಲ್ಪದಿಂದ ಕೂಡಿದೆ. ನವರಂಗದ ಗರ್ಭಗೃಹದಲ್ಲಿ ಲಿಂಗವಿದ್ದು, ನವರಂಗದ ಮಧ್ಯದಲ್ಲಿ

ನಂದಿಶಿಲ್ಪವಿದೆ. ನವರಂಗದಲ್ಲಿ ದಕ್ಷಿಣ ಗೋಡೆಗೆ ಒರಗಿದಂತೆ ಕಾಮ, ರತಿ, ಯತಿ, ಶಿವ, ಉಮಾಮಹೇಶ್ವರ, ಮಹಿಷಮರ್ಧಿನಿ ಮತ್ತು ಕಾರ್ತೀಕೇಯರ ಬಿಡಿ ಶಿಲ್ಪ ಫಲಕಗಳನ್ನು ನಿಲ್ಲಿಸಲಾಗಿದೆ. ಇವುಗಳಿಗೆ ವಿವಿಧ ಬಣ್ಣ ಬಳಿದು ವಿರೂಪಗೊಳಿಸಿದ್ದಾರೆ. ಹೊರ ಭಾಗದಲ್ಲಿರುವ ನಂದಿಸ್ತಂಭದ ತಳದಲ್ಲಿ ಗಣೇಶ ಸ್ತ್ರೀ ಮತ್ತು ಬ್ರಹ್ಮನ ಶಿಲ್ಪ ಫಲಕಗಳಿವೆ. ಆವರಣದ ಅರಳಿ ಮರದ ಕಟ್ಟೆಯಲ್ಲಿ ಅರ್ಧನಾರೀಶ್ವರ ಮತ್ತು ಕಾಮನ ಎರಡು ಶಿಲ್ಪಗಳಿವೆ. ಗೂಡಿನಲ್ಲಿ ಭೈರವನ ಬಿಡಿಶಿಲ್ಪಗಳಿವೆ. ಇಲ್ಲಿ ಫಲಕಶಿಲ್ಪಗಳು ಹೆಚ್ಚಿನ ಸಂಖ್ಯೆಯಲ್ಲಿರುವುದು ಇಲ್ಲಿನ ವಿಶೇಷತೆಯಾಗಿದೆ.[೧೨] ಈ ರಾಷ್ಟ್ರಕೂಟರ ಶೈಲಿಯ ಶಿಲ್ಪಗಳು ಪ್ರಸ್ತುತ ಅಧ್ಯಯನಕ್ಕೆ ಉಪಯುಕ್ತರವಾಗಿವೆ. ಇಷ್ಟು ಅಂಶಗಳು ಈ ಲೋಕೇಶ್ವರ ದೇವಾಲಯದ ವಿಶೇಷತೆಯಾಗಿದೆ.

| | | | |
|---|---|---|---|
| ಸಂಖ್ಯೆ | : ೦೫ | | |
| ಊರು | : ಸೂಗೂರು | ಹೆಸರು | : ಈಶ್ವರ |
| ಸ್ಥಳ | : ಹುಡೇವು ಹಿಂಭಾಗ | ಕಾಲಮಾನ | : ಕ್ರಿ.ಶ. ೧೦ನೇ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ರಾಷ್ಟ್ರಕೂಟ |
| ಸ್ಥಿತಿ | : ಕನಿಷ್ಠ | ಸಂರಕ್ಷಣೆ | : -- |

ಈ ಶೈವ ದೇವಾಲಯವು ಅತ್ಯಂತ ಪ್ರಾಮುಖ್ಯತೆಯಿಂದ ಕೂಡಿದ ದ್ವಿಕೂಟ ರಚನೆಯಾಗಿದೆ. ಪಶ್ಚಿಮ ಮತ್ತು ಪೂರ್ವ ದಿಕ್ಕುಗಳಲ್ಲಿರುವ ಗರ್ಭಗೃಹಗಳು ಅರ್ಧಮಂಟಪಗಳಿಂದ ಕೂಡಿವೆ. ಪಶ್ಚಿಮ ಗರ್ಭಗೃಹ ದ್ವಾರವು ಸರಳವಾಗಿದ್ದು, ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಅರ್ಧಮಂಟಪದಲ್ಲಿ ಬ್ರಹ್ಮ ಮತ್ತು ನಾಗಶಿಲ್ಪವಿದೆ. ಪೂರ್ವಭಾಗದ ಗರ್ಭಗೃಹ ದ್ವಾರದಲ್ಲಿ ಅರ್ಧಕಂಬಗಳ ರಚನೆಯಿದ್ದು, ಅದರಲ್ಲಿ ಅರ್ಧಕೊಳವೆಗಳ ಸೂಕ್ಷ್ಮ ಅಲಂಕರಣವಿರುವುದು ವಿಶೇಷವೆನ್ನಬಹುದು. ಮುಂದಿರುವ ಅರ್ಧಮಂಟಪದಲ್ಲಿ ವಿಷ್ಣು ಮತ್ತು ವೀರಗಲ್ಲು ಶಿಲ್ಪಗಳಿವೆ. ನವರಂಗದಲ್ಲಿರುವ ನಾಲ್ಕು ಕಂಬಗಳು ಚೌಕ ಮತ್ತು ಅರ್ಧಕೊಳವೆಗಳ ಅಲಂಕರಣದವು. ಮೇಲಿರುವ ಬೋಧಿಗೆ ಪೀಠಗಳು ದುಂಡಾಗಿವೆ. ನವರಂಗವು ಉತ್ತರ ಮತ್ತು ದಕ್ಷಿಣದಲ್ಲಿ ಪ್ರವೇಶ ದ್ವಾರಗಳನ್ನು ಹೊಂದಿವೆ. ದೇವಾಲಯದ ಮೇಲ್ಚಾವಣಿ ಬಹು ಹಿಂದೆಯೇ ಜೀರ್ಣೋದ್ಧಾರಗೊಂಡಿದ್ದು, ಈಗ ಹಾಳುಬಿದ್ದಿದೆ. ಪೂರ್ವಭಾಗದ ಗರ್ಭಗೃಹವು ಅಧಿಷ್ಠಾನದ ಮೇಲಿದ್ದು ಸುಣ್ಣಕಲ್ಲಿನ ನಿರ್ಮಾಣ ಹೊರಬಿತ್ತಿ ಜೀರ್ಣೋದ್ಧಾರಗೊಂಡಿದೆ. ಗರ್ಭಗೃಹಗಳಲ್ಲಿ ಲಿಂಗಗಳಿವೆ. ಉಳಿದಂತೆ, ವಿಷ್ಣು, ಬ್ರಹ್ಮ, ನಾಗ ಮತ್ತು ವೀರಗಲ್ಲು ಶಿಲ್ಪ ಅವಶೇಷಗಳಿವೆ.[೧೩]

| | | | |
|---|---|---|---|
| ಸಂಖ್ಯೆ | : ೦೬ | | |
| ಊರು | : ಬಟಗೇರ (೧೨) | ಹೆಸರು | : ಪಂಚಲಿಂಗೇಶ್ವರ |
| ಸ್ಥಳ | : ಊರ ನಡುವೆ(ಹಳಕಟ್ಟಿ) | ಕಾಲಮಾನ | : ಕ್ರಿ.ಶ. ೯-೧೦ನೇ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ರಾಷ್ಟ್ರಕೂಟ |
| ಸ್ಥಿತಿ | : ಕನಿಷ್ಠ | ಸಂರಕ್ಷಣೆ | : -- |

ಈ ದೇವಾಲಯ ಸಂಪೂರ್ಣ ಶಿಥಿಲಗೊಂಡಿದ್ದು ಅದರ ಮೂಲ ಭಾಗದಲ್ಲಿ ಒಂದೇ ಸಾಲಿನಲ್ಲಿ ಮೂರು ಗರ್ಭಗೃಹಗಳಿವೆ. ಒಂದರ ಗರ್ಭಗೃಹಕ್ಕೆ ಒಂದು ಅರ್ಧಮಂಟಪ ಮತ್ತು ತೆರೆದ ನವರಂಗವಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಅದರ ಬಾಗಿಲು ಪಟ್ಟಿಯಲ್ಲಿ ನಾಲ್ಕು ಶಾಖೆಗಳಿದ್ದು ಅಲ್ಲಿ ಸರಳ, ರತ್ನ, ಅರ್ಧಗಂಬ ಮತ್ತು ಪತ್ರಗಳಿವೆ. ಲಲಾಟದಲ್ಲಿ ಗಜಲಕ್ಷ್ಮಿ, ಉತ್ತರಂಗದಲ್ಲಿ ಕಚ್ಚುಗಳು, ಕಪೋತದಲ್ಲಿ ಚೈತ್ಯ ಮಾದರಿಗಳಿವೆ. ಅರ್ಧಗಂಭದಲ್ಲಿ ಚತುರ್ಭುಜ ಮಹಿಷಾಸುರಮರ್ದಿನಿ, ಇನ್ನೊಂದರಲ್ಲಿ ದೇವತೆ ಚಿತ್ರ, ಕಂಬಗಳಲ್ಲಿ ಹಾರಗಳು ಮತ್ತು ಚೈತನ್ಯಗಳಿವೆ.[೧೪] ಇಂತಹ ಹಲವು ಕಾರಣದಿಂದ ಮಾನ್ಯಖೇಟದ ರಾಷ್ಟ್ರಕೂಟರ ಆಳ್ವಿಕೆಯ ಕಾಲದಲ್ಲಿ ಅತ್ಯಂತ ಪ್ರಾಮುಖ್ಯತೆ ಪಡೆದ ಸ್ಥಳವಾಗಿತ್ತು ಎಂಬುವುದು ತಿಳಿದುಬರುತ್ತದೆ.

ಸಂಖ್ಯೆ : **೦೭**

ಊರು : ನಾಲವಾರ — ಹೆಸರು : ಈಶ್ವರ

ಸ್ಥಳ : ಊರ ನಡುವೆ — ಕಾಲಮಾನ : ಕ್ರಿ.ಶ. ೧೧ನೇ ಶತಮಾನ

ಅಭಿಮುಖ : ಪೂರ್ವ — ಶೈಲಿ : ರಾಷ್ಟ್ರಕೂಟ

ಸ್ಥಿತಿ : ಕನಿಷ್ಠ — ಸಂರಕ್ಷಣೆ : ಧಾರ್ಮಿಕದತ್ತಿ ಇಲಾಖೆ

ದೇವಾಲಯದಲ್ಲಿ ಗರ್ಭಗೃಹ, ಅಂತರಾಳ ಮತ್ತು ರಂಗಮಂಟಪವನ್ನು ಹೊಂದಿದ್ದು, ಜೀರ್ಣೋದಧಾರಗೊಂಡಿದೆ. ಗರ್ಭಗೃಹ ದ್ವಾರದಲ್ಲಿ ಅರ್ಧಕಂಬ ಮತ್ತು ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ರಂಗಮಂಟಪದ ಮಧ್ಯದಲ್ಲಿ ನಾಲ್ಕು ಗಿಡ್ಡನೆಯ ಕಂಬಗಳಿವೆ. ಭುವನೇಶ್ವರಿಯಲ್ಲಿ ಕಮಲದ ಅಲಂಕರಣವಿದೆ. ಉತ್ತರ ಗರ್ಭಗೃಹ ದ್ವಾರದಲ್ಲಿ ಮತ್ತು ದಕ್ಷಿಣ ದಿಕ್ಕುಗಳಿಂದ ನವರಂಗವನ್ನು ಪ್ರವೇಶಿಸಬಹುದಾಗಿದೆ. ದೇವಾಲಯದ ಹೊರಭಿತ್ತಿ ಸರಳ ರಚನೆಯದು. ಗರ್ಭಗೃಹದ ಮೇಲೆ ಕದಂಬ ನಾಗರಶೈಲಿಯ ಶಿಖರವು ಸುಖನಾಸದಿಂದ ಕೂಡಿದೆ. ಪ್ರಾಕಾರ ಗೋಡೆ ಇತ್ತೀಚಿನದು.

ಗರ್ಭಗೃಹದಲ್ಲಿ ಇತ್ತೀಚಿನ ಯೋನಿಪೀಠಕ್ಕೆ ಅಳವಡಿಸಿದೆ. ಪ್ರಾಚೀನ ರುದ್ರಭಾಗವಿದೆ. ರಂಗಮಂಟಪದಲ್ಲಿ ಲಿಂಗಗಳು, ಆಂಜನೇಯ ಶಿಲ್ಪ, ನಂದಿ, ಗಣಪತಿ ಶಿಲ್ಪವಶೇಷಗಳಿವೆ. ದೇವಾಕೋಷ್ಠದಲ್ಲಿ ಪಾದುಕಾಶಿಲ್ಪವಿದೆ. ಆವರಣದಲ್ಲಿ ವೀರಗಲ್ಲು, ನಾಗಶಿಲ್ಪಗಳು ಕಂಡುಬರುತ್ತವೆ. ಹೊರಗೆ ವಾಯವ್ಯ ಮತ್ತು ಈಶಾನ್ಯ ಮೂಲೆಗಳಲ್ಲಿ ಸಣ್ಣ ಕ್ರಮವಾಗಿ ಇತ್ತೀಚಿನ ವೀರಭದ್ರ ಮತ್ತು ಪ್ರಾಚೀನ ವಿಷ್ಣು ಶಿಲ್ಪಗಳಿವೆ.[೧೫] ಈ ಐತಿಹಾಸಿಕ ಗ್ರಾಮವು ಮಾನ್ಯಖೇಟದಿಂದ ನೈರುತ್ಯಕ್ಕೆ ೪೫ ಕಿ.ಮೀ. ಅಂತರದಲ್ಲಿದೆ. ಹಾಗೂ ಪ್ರಸ್ತುತ ಅಧ್ಯಯನದ ಶೈವ ದೇವಾಲಯದ ಪ್ರಮುಖ ಸ್ಥಳವಾಗಿದೆ.

ಸಂಖ್ಯೆ : **೦೮**

ಊರು : ಬಟಗೇರ (ಕೆ) — ಹೆಸರು : ಈಶ್ವರ

| | | | |
|---|---|---|---|
| ಸ್ಥಳ | : ಊರ ನಡುವೆ | ಕಾಲಮಾನ | : ಕ್ರಿ.ಶ. ೧೦–೧೧ನೇ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ರಾಷ್ಟ್ರಕೂಟ |
| ಸ್ಥಿತಿ | : ಕನಿಷ್ಠ | ಸಂರಕ್ಷಣೆ | : -- |

ಈ ಬಟಗೇರ (ಕೆ) ಗ್ರಾಮವು ಮಾನ್ಯಖೇಟದಿಂದ ೨೦ ಕಿ.ಮೀ. ದೂರದಲ್ಲಿದೆ. ಇಲ್ಲಿರುವ ಈಶ್ವರ ದೇವಾಲಯವು ಗರ್ಭಗೃಹ ಮತ್ತು ಅರ್ಧಮಂಟಪವನ್ನು ಒಳಗೊಂಡಿರುವ ದೇವಾಲಯವಿದು. ಅರ್ಧಮಂಟಪ ಭಾಗವು ಜೀರ್ಣೋದ್ಧಾರಗೊಂಡಿದೆ. ಗರ್ಭಗೃಹ ದ್ವಾರವು ಸರಳ ರಚನೆಯದು. ಲತಾಬಳ್ಳಿ ಪಟ್ಟಿಕೆಗಳ ಅಲಂಕರಣವಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ.

ಗರ್ಭಗೃಹದಲ್ಲಿ ಲಿಂಗವಿದ್ದು, ಪಕ್ಕದಲ್ಲಿ ಲಿಂಗವೊಂದರ ರುದ್ರಭಾಗವನ್ನಿರಿಸಲಾಗಿದೆ. ಅರ್ಧಮಂಟಪದಲ್ಲಿ ಗಣಪತಿ ಶಿಲ್ಪವನ್ನು ಕಾಣಬಹುದು. ಈ ಊರಿನ ಅಗಸಿ ಬಾಗಿಲಿನ ಮಂಟಪದಲ್ಲಿ ರಾಷ್ಟ್ರಕೂಟ ಶೈಲಿಯ ಕಂಬಗಳಿವೆ.[೧೬] ಇಷ್ಟು ಈ ದೇವಾಲಯದ ವಿಶೇಷತೆಯಾಗಿದೆ.

| | | | |
|---|---|---|---|
| ಸಂಖ್ಯೆ | : ೦೯ | | |
| ಊರು | : ದಿಗ್ಗಾವಿ | ಹೆಸರು | : ಶಂಭುಲಿಂಗೇಶ್ವರ |
| ಸ್ಥಳ | : ಊರ ಹೊರಗೆ | ಕಾಲಮಾನ | : ಕ್ರಿ.ಶ. ೧೦–೧೧ನೇ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ರಾಷ್ಟ್ರಕೂಟ |
| ಸ್ಥಿತಿ | : ಮಧ್ಯಮ | ಸಂರಕ್ಷಣೆ | : ಧಾರ್ಮಿಕದತ್ತಿ ಇಲಾಖೆ |

ಪ್ರಸ್ತುತ ಅಧ್ಯಯನ ಪರಿಸರದಲ್ಲಿನ ಪ್ರಮುಖ ಶೈವ ದೇವಾಲಯವು ದಿಗ್ಗಾವಿಯಲ್ಲಿನ ಶಂಭುಲಿಂಗೇಶ್ವರ ದೇವಾಲಯವಾಗಿದೆ. ಇದು ಊರಿನ ಹೊರಗಿರುವ ದೇವಾಲಯ ಸಂಕೀರ್ಣವಿದು. ಜೀರ್ಣೋದ್ಧಾರಗೊಂಡಿರುವ ದೇವಾಲಯವಾಗಿದ್ದು ಗರ್ಭಗೃಹ, ಅರ್ಧಮಂಟಪ ಮತ್ತು ನವರಂಗವನ್ನು ಒಳಗೊಂಡಿದೆ. ಗರ್ಭಗೃಹ ದ್ವಾರವು ಅರ್ಧಗಂಬ, ಲತಾಬಳ್ಳಿ ಇತರ ಶಾಖೆಗಳಿಂದ ಕೂಡಿದ್ದು, ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಅರ್ಧಮಂಟಪದ ಪ್ರವೇಶದಲ್ಲಿ ದುಂಡನೆಯ ಕಂಬಗಳಿದ್ದು ರಾಷ್ಟ್ರಕೂಟ ಶೈಲಿಯಲ್ಲಿವೆ. ನವರಂಗದ ನಡುವಿನ ಕಂಬಗಳು ಚೌಕ ಮತ್ತು ಬಹುಮುಖ ಪಟ್ಟಿಗಳ ಅಲಂಕರಣದಿಂದ ಕೂಡಿವೆ. ಸರಳ ರಚನೆಯ ಭುವನೇಶ್ವರಿಯಲ್ಲಿ ಕಮಲದ ತೆಳು ಉಬ್ಬು ರಚನೆಯನ್ನು ಕಾಣಬಹುದು. ನವರಂಗವು ಮೂರು ದ್ವಾರಗಳನ್ನು ಹೊಂದಿದೆ. ಜೀರ್ಣೋದ್ಧಾರ ಮಾಡಿದಾಗ ಸ್ಥಳೀಯ ಶೈಲಿಯಲ್ಲಿ ನವರಂಗದ ಚಾವಣಿಯನ್ನು ಮುಂಚಾಚಿದ ಸೂರಿನ ರಚನೆಯಲ್ಲಿ ನಿರ್ಮಿಸಿದ್ದಾರೆ. ಮೇಲೆ ಕೈಪಿಡಿ ಗೋಡೆಯಿದೆ. ದೇವಾಲಯದ ಹೊರಭಿತ್ತಿಯು ಸಂಪೂರ್ಣವಾಗಿ ಜೀರ್ಣೋದ್ಧಾರಗೊಂಡಿದೆ.

ದೇವಾಲಯದ ಗರ್ಭಗೃಹದ ಮೇಲೆ ಸ್ಥಳೀಯ ಶೈಲಿಯಲ್ಲಿ ಚೌಕ ಮಾದರಿಯ ಗಾರೆ ಶಿಖರವನ್ನು ನಿರ್ಮಿಸಿದ್ದಾರೆ. ನವರಂಗದ ಮುಂಭಾಗದಲ್ಲಿ ಇತ್ತೀಚಿಗೆ ಸಿಮೆಂಟಿನ ತೆರೆದ

ಮಂಟಪವನ್ನು ಕಟ್ಟಿಸಿದ್ದಾರೆ. ಗರ್ಭಗೃಹದಲ್ಲಿ ಲಿಂಗವಿದೆ. ನವರಂಗದಲ್ಲಿ ಗಣಪತಿ, ನಾಗ ಮತ್ತು ಶಾಸನವು ಇದೆ. ಸಿಮೆಂಟಿನ ತೆರೆದ ಮಂಟಪದಲ್ಲಿ ಇತ್ತೀಚಿನ ನಂದಿಯನ್ನಿಟ್ಟಿದ್ದಾರೆ. ಆವರಣದಲ್ಲಿ ಯತಿ, ಭೈರವಿ, ಸ್ತ್ರೀ ದೇವತೆಗಳು, ಲಿಂಗ, ನಂದಿ ಮತ್ತಿತರ ಭಗ್ನ ಶಿಲ್ಪಾವಶೇಷಗಳಿವೆ. ಅಲ್ಲದೆ ಈ ದೇವಾಲಯದ ಆವರಣದಲ್ಲಿ ಕೆಲವು ಸಣ್ಣ ಗುಡಿಗಳಿದ್ದು ಅವು ಗರ್ಭಗೃಹ ಮತ್ತು ಅರ್ಧಮಂಟಫವನ್ನು ಒಳಗೊಂಡಿವೆ.[೧೭] ಇಂತಹ ಅನೇಕ ಕಾರಣಗಳಿಂದ ಪ್ರಸ್ತುತ ಅಧ್ಯಯನ ಪರಿಸರದಲ್ಲಿನ ಪ್ರಮುಖ ಶೈವ ದೇವಾಲಯವಾಗಿರುವುದು ತಿಳಿದುಬರುತ್ತದೆ.

| | | | |
|---|---|---|---|
| ಸಂಖ್ಯೆ | : ೧೦ | | |
| ಊರು | : ತೆಂಗಳಿ | ಹೆಸರು | : ಈಶ್ವರ |
| ಸ್ಥಳ | : ಊರ ನಡುವೆ | ಕಾಲಮಾನ | : ಕ್ರಿ.ಶ. ೧೦-೧೧ನೇ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ರಾಷ್ಟ್ರಕೂಟ |
| ಸ್ಥಿತಿ | : ಕನಿಷ್ಠ | ಸಂರಕ್ಷಣೆ | : -- |

ಈ ತೆಂಗಳಿ ಗ್ರಾಮವು ಮಾನ್ಯಖೇಟದಿಂದ ೬ ಕಿ.ಮೀ. ಅಂತರದಲ್ಲಿದೆ. ಇಲ್ಲಿಯ ಈಶ್ವರ ದೇವಾಲಯವು ಸಮಾನಾಂತರದಲ್ಲಿ ಮೂರು ಗರ್ಭಗೃಹಗಳು, ಅವುಗಳಿಗೆ ಹೊಂದಿಕೊಂಡಂತೆ ಅರ್ಧಮಂಟಪಗಳು ಹಾಗೂ ವಿಶಾಲವಾದ ಸಭಾಮಂಟಪವನ್ನು ಒಳಗೊಂಡಿದೆ. ಗರ್ಭಗೃಹ ದ್ವಾರಗಳು ಅರ್ಧಕಂಬ ಮತ್ತು ಇತರ ಅಲಂಕಾರಿಕ ಶಾಖೆಗಳನ್ನು ಒಳಗೊಂಡಿವೆ. ದ್ವಾರದ ಮೇಲಿನ ಫಲಕದಲ್ಲಿ ನಾಗರ ಶೈಲಿಯ ಶಿಖರಗಳು ಸೂಕ್ಷ್ಮ ರಚನೆಗಳನ್ನು ಬಿಡಿಸಲಾಗಿದೆ. ತಳದಲ್ಲಿ ಶೈವ ದ್ವಾರಪಾಲಕರ ಉಬ್ಬುಶಿಲ್ಪಗಳ ಅಲಂಕರಣವಿದೆ. ಅರ್ಧಮಂಟಪದ ಇಕ್ಕೆಲಗಳಲ್ಲಿ ದೇವಕೋಷ್ಠಗಳಿವೆ. ಸಭಾಮಂಟಪದ ಉತ್ತರ ಮತ್ತು ದಕ್ಷಿಣ ತುದಿಗಳಲ್ಲಿ ದ್ವಾರರಹಿತವಾದ ಗರ್ಭಗೃಹಗಳಿದ್ದು, ಒಳಗೆ ಲಿಂಗಗಳಿವೆ. ಹೀಗಾಗಿ ಸ್ಥಳೀಯರು ಈ ದೇವಾಲಯವನ್ನು ಪಂಚಕೂಟವೆನ್ನುತ್ತಾರೆ. ಸಭಾಮಂಟಪದ ಕಂಬಗಳು ಚೌಕ ಮತ್ತು ಬಳ್ಳಿಗಳ ಅಲಂಕರಣದಿಂದ ಕೂಡಿವೆ. ಚೌಕಮುಖಗಳಲ್ಲಿ ಹಾರಗಳ ಅಲಂಕರಣವಿದೆ. ಬೋದಿಗೆ ಪೀಠದಲ್ಲಿ ಗುಂಡುಗಳ ಅಲಂಕರಣವಿದೆ. ಸಭಾಮಂಟಪದ ತೊಲೆಯೊಂದು ಬಿರುಕುಬಿಟ್ಟಿದ್ದು ಕಬ್ಬಿಣದ ಕಂಬವನ್ನು ಆಧಾರವಾಗಿ ನಿಲ್ಲಿಸಿದ್ದಾರೆ. ಇಲ್ಲಿನ ಭುವನೇಶ್ವರಿಗಳು ಸಣ್ಣ ಗುಮ್ಮಟ ರಚನೆಗಳಾಗಿದ್ದು, ನಕ್ಷತ್ರಾಕಾರದಲ್ಲಿವೆ. ನಡುವೆ ಚೂಪಾದ ಕಲ್ಲು ಕೆಳಮುಖವಾಗಿ ಇಳಿಬಿದ್ದಿದೆ. ದೇವಾಲಯದ ಮೇಲೆ ಸುಣ್ಣಕಲ್ಲಿನ ಹಲಗೆಗಳನ್ನು ಹಾಸಿದ್ದಾರೆ. ಇದನ್ನು ಪುರಕಲ್ (ಅರ್ಜಾಪೂರ) ಎಂದು ಕರೆಯುತ್ತಾರೆ. ಹೀಗಾಗಿ ಈ ದೇವಾಲಯವು ಜೀರ್ಣೋದ್ಧಾರಗೊಂಡಿದೆ.

ಗರ್ಭಗೃಹಗಳಲ್ಲಿ ಲಿಂಗಗಳಿವೆ. ಸಭಾಮಂಟಪದ ದಕ್ಷಿಣದ ಗರ್ಭಗೃಹದಲ್ಲಿ ಕಾಶಿವಿಶ್ವನಾಥ ಎನ್ನುವ ಸಣ್ಣದಾದ ಲಿಂಗವನ್ನು ೧೯೯೨ರಲ್ಲಿ ಹಳೆಯ ಲಿಂಗವೊಂದರ ಯೋನಿಪೀಠದಲ್ಲಿ ಪ್ರತಿಷ್ಠಾಪಿಸಿದ್ದಾರೆ. ಹೊರಗೆ ನಂದಿ ಶಿಲ್ಪವಿದೆ. ಇಲ್ಲಿ ಕ್ರಿ.ಶ. ೧೧೬೨ರ ಶಾಸನವು ಕಂಡುಬರುತ್ತದೆ. ಅದು ಈ ದೇವಾಲಯದ ಕುರಿತು ವಿವರಣೆ ನೀಡುತ್ತದೆ.[೧೮]

ಸಂಖ್ಯೆ : ೧೧

| | | | |
|---|---|---|---|
| ಊರು | : ತೇಂಗಳಿ | ಹೆಸರು | : ಕರಿಬಸವೇಶ್ವರ |
| ಸ್ಥಳ | : ಬೆಣ್ಣೆತೊರೆ ದಂಡೆ | ಕಾಲಮಾನ | : ಕ್ರಿ.ಶ. ೧೦-೧೧ನೇ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ಕಲ್ಯಾಣ ಚಾಲುಕ್ಯ |
| ಸ್ಥಿತಿ | : ಕನಿಷ್ಠ | ಸಂರಕ್ಷಣೆ | : ಧಾರ್ಮಿಕದತ್ತಿ ಇಲಾಖೆ |

ಮಾನ್ಯಖೇಟದಿಂದ ೬ ಕಿ.ಮೀ. ಅಂತರದಲ್ಲಿರುವ ತೇಂಗಳಿಯ ಶೈವ ದೇವಾಲಯಗಳಲ್ಲಿ ಒಂದು ಪ್ರಮುಖ ದೇವಾಲಯವಾಗಿದೆ. ಈ ದೇವಾಲಯವು ಬಿದ್ದು ಹೋಗಿದ್ದು, ಅಳಿದಿರುವ ರಂಗಮಂಟಪ ಭಗ್ನ ಸ್ಥಿತಿಯಲ್ಲಿದೆ. ರಂಗಮಂಟಪವು ಕಕ್ಷಾಸನದಿಂದ ಕೂಡಿದೆ. ಭುವನೇಶ್ವರಿಯಲ್ಲಿ ಬಿಡಿ ಬಿಡಿಯಾದ ವಿವಿಧ ಹೂವುಗಳು ಇಳಿಬಿದ್ದ ಅಲಂಕರಣವನ್ನು ಕಾಣುತ್ತವೆ. ಮುಂದಿರುವ ಮುಖಮಂಟಪದ ಭುವನೇಶ್ವರಿಯಲ್ಲಿ ನಕ್ಷತ್ರಾಕಾರದ ಗುಮ್ಮಟವನ್ನು ರಚಿಸಲಾಗಿದೆ. ಇಲ್ಲಿರುವ ಕಂಬಗಳು, ಇಲ್ಲಿನ ಈಶ್ವರ ದೇವಾಲಯದ ಕಂಬಗಳ ಅಲಂಕರಣವನ್ನು ಹೊಂದಿವೆ. ಹಾಗಾಗಿ ಇದು ಈಶ್ವರ ದೇವಾಲಯದ ಸಮಕಾಲೀನ ಕಾಲಾವಧಿಯ ನಿರ್ಮಾಣವೆನ್ನಬಹುದು. ಕಂಬಗಳಲ್ಲಿರುವ ಉಬ್ಬುಶಿಲ್ಪಗಳನ್ನು ಕೆತ್ತಿ ಹಾಳುಮಾಡಲಾಗಿದೆ. ಭಾವಣಿಯು ಇಳಿಜಾರಾದ ಸೂರನ್ನು ಹೊಂದಿದೆ.[೯] ರಂಗಮಂಟಪದಲ್ಲಿ ನಂದಿ ಶಿಲ್ಪವಿದೆ. ಉಳಿದಂತೆ ಯಾವುದೇ ಶಿಲ್ಪಾವಶೇಷಗಳು ಇಲ್ಲ.

ಸಂಖ್ಯೆ : ೧೨

| | | | |
|---|---|---|---|
| ಊರು | : ನಾಗಾವಿ | ಹೆಸರು | : ನಂದೇಶ್ವರ |
| ಸ್ಥಳ | : ನಂದಿಬಾವಿ | ಕಾಲಮಾನ | : ಕ್ರಿ.ಶ. ೧೦-೧೧ನೇ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ಕಲ್ಯಾಣ ಚಾಲುಕ್ಯ |
| ಸ್ಥಿತಿ | : ಕನಿಷ್ಠ | ಸಂರಕ್ಷಣೆ | : ಧಾರ್ಮಿಕದತ್ತಿ ಇಲಾಖೆ |

ಈ ನಂದೀಶ್ವರ ದೇವಾಲಯವು ಚಿತ್ತಾಪೂರದ ದಕ್ಷಿಣಕ್ಕೆ ಹೊರವಲಯದಲ್ಲಿರುವ ನಾಗಾವಿಯು ಹಾಳುಬಿದ್ದ ಗ್ರಾಮದಲ್ಲಿದೆ. ಅಲ್ಲಲ್ಲಿ ಪ್ರಾಚ್ಯವಶೇಷಗಳು ಚೆಲ್ಲಾಡಿವೆ. ಇಲ್ಲಿನ ನಂದಿಬಾವಿ ಬಳಿಯಿರುವ ನಂದೇಶ್ವರ ದೇವಾಲಯ ಕ್ರಿ.ಶ. ೧೦-೧೧ನೆಯ ಶತಮಾನದಲ್ಲಿ ರಚನೆಯಾಗಿದೆ. ಗಿಡ್ಡನೆಯ ದೇವಾಲಯವು ಗರ್ಭಗೃಹ, ಅಂತರಾಳ ಮತ್ತು ನವರಂಗ ಭಾಗವನ್ನು ಹೊಂದಿದೆ. ಗರ್ಭಗೃಹ ದ್ವಾರದಲ್ಲಿ ಅರ್ಧಕಂಬ, ತಳದಲ್ಲಿ ಜಾನಪದ ಶೈಲಿಯಲ್ಲಿ ದ್ವಾರಪಾಲಕರು ಮತ್ತು ಚಾಮರದಾರಿ ಸ್ತ್ರೀಯರ ಉಬ್ಬುಶಿಲ್ಪಗಳಿವೆ. ಇನ್ನು ತೆರೆದ ನವರಂಗವಿದ್ದು, ಮೂರು ದಿಕ್ಕುಗಳಲ್ಲಿ ಪ್ರವೇಶವಿದೆ. ಮಧ್ಯದ ಕಂಬಗಳು ಚೌಕ ಮತ್ತು ಕಾಂಡ ಭಾಗದಲ್ಲಿ ಅರ್ಧಕೊಳವೆಗಳ ಅಲಂಕರಣದಿಂದ ಕೂಡಿದ್ದು ಮೇಲೆ ಕೀರ್ತಿಮುಖ ಮತ್ತು ಅಲಂಕರಣಗಳಿವೆ. ಬೋದಿಗೆ ಪೀಠಗಳು ರಾಷ್ಟ್ರಕೂಟ ಶೈಲಿಯಲ್ಲಿವೆ. ನಡುವಿನ ಭುವನೇಶ್ವರಿಯಲ್ಲಿ ಕಮಲವನ್ನು ಬಿಡಿಸಿದೆ. ಈ ದೇವಾಲಯದ ಹೊರಭಿತ್ತಿಯಲ್ಲಿ ಅರ್ಧಕಂಬಗಳ ಅಲಂಕರಣವಿದೆ.

ಗರ್ಭಗೃಹದಲ್ಲಿ ಸ್ವಯಂಭೂ ಲಿಂಗವಿದೆ. ನವರಂಗದಲ್ಲಿರುವ ಬೃಹತ್ ನಂದಿಶಿಲ್ಪ ಭಗ್ನಗೊಂಡಿದ್ದು ಅದನ್ನು ಪಕ್ಕಕ್ಕೆ ಸರಿಸಿದ್ದಾರೆ. ಅದರ ಮುಂಭಾಗದಲ್ಲಿ ಸಣ್ಣ ನಂದಿಶಿಲ್ಪವನ್ನಿಟ್ಟಿದ್ದಾರೆ. ಹಾಗೂ ನಾಗರಾಜ ಶಿಲ್ಪವಿದೆ. ದೇವಾಲಯದ ಹಿಂಭಾಗದಲ್ಲಿ ಬಾವಿ ಇದ್ದು, ನಾಗಶಿಲ್ಪಗಳು ಕಂಡುಬರುತ್ತವೆ. ಈ ದೇವಾಲಯದ ಮುಂಭಾಗದಲ್ಲಿ ಸುಣ್ಣಕಲ್ಲಿನ ಶಾಸನವಿದೆ.[೨೦] ಇಷ್ಟು ಈ ನಂದೀಶ್ವರ ದೇವಾಲಯದ ವಿಶೇಷತೆಯಾಗಿದೆ.

| | | | |
|---|---|---|---|
| ಸಂಖ್ಯೆ | : ೧೩ | | |
| ಊರು | : ಅಲ್ಲೂರು (ಕೆ) | ಹೆಸರು | : ಈಶ್ವರ ಲಿಂಗ |
| ಸ್ಥಳ | : ಅಗಸಿ ಹತ್ತಿರ | ಕಾಲಮಾನ | : ಕ್ರಿ.ಶ. ೧೦-೧೧ನೇ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ಕಲ್ಯಾಣ ಚಾಲುಕ್ಯ |
| ಸ್ಥಿತಿ | : ಕನಿಷ್ಠ | ಸಂರಕ್ಷಣೆ | : -- |

ಊರಿನ ಅಗಸಿ ಬಾಗಿಲ ಬಳಿ ಇರುವ ವೇದಿಕೆಯ ಮೇಲೆ ಲಿಂಗ ಮತ್ತು ನಾಗಶಿಲ್ಪಗಳಿವೆ. ಇವು ಪ್ರಾಚೀನ ದೇವಾಲಯವೊಂದರ ಶಿಲ್ಪಾವಶೇಷಗಳು ಸಮೀಪದ ಆಂಜನೇಯ ಗುಡಿಯ ಹೊರಗೋಡೆಯಲ್ಲಿ ಶಾಸನವೊಂದನ್ನು ಅಳವಡಿಸಿದ್ದಾರೆ. ಈ ಶಾಸನವು ಕಲ್ಯಾಣ ಚಾಲುಕ್ಯರ ಕಾಲದ್ದು, ಜಗತಿ ಗೋಡೆಯಲ್ಲಿ ಸಪ್ತಮಾತೃಕೆಯರ ಶಿಲ್ಪ ಫಲಕವನ್ನು ಅಳವಡಿಸಿದ್ದಾರೆ. ಅಗಸಿಬಾಗಿಲು ಬಳಿ ಇರುವ ಗೂಡಿನಲ್ಲಿ ಗಣಪತಿಯ ಶಿಲ್ಪವಿದೆ.[೨೧] ಇಂತಹ ಹಲವು ಕಾರಣಗಳಿಂದ ಅಲ್ಲೂರ(ಕೆ) ಗ್ರಾಮವು ಒಂದು ಐತಿಹಾಸಿಕವಾದ ಸ್ಥಳವಾಗಿದೆ.

| | | | |
|---|---|---|---|
| ಸಂಖ್ಯೆ | : ೧೪ | | |
| ಊರು | : ಕಾಳಗಿ | ಹೆಸರು | : ನೀಲಕಂಠ ಕಾಳೇಶ್ವರ |
| ಸ್ಥಳ | : ನೀಲನಗರ | ಕಾಲಮಾನ | : ಕ್ರಿ.ಶ. ೧೦-೧೧ನೇ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ರಾಷ್ಟ್ರಕೂಟ-ಕಲ್ಯಾಣ ಚಾಲುಕ್ಯ |
| ಸ್ಥಿತಿ | : ಮಧ್ಯಮ | ಸಂರಕ್ಷಣೆ | : ಧಾರ್ಮಿಕದತ್ತಿ ಇಲಾಖೆ |

ಈ ನೀಲಕಂಠ ಕಾಳೇಶ್ವರ ದೇವಾಲಯವು ಪ್ರಸ್ತುತ ಅಧ್ಯಯನ ಪರಿಸರದ ಪ್ರಸಿದ್ಧ ಶೈವ ದೇವಾಲಯವಿದ್ದು, ಗರ್ಭಗೃಹ, ಅಂತರಾಳ ಮತ್ತು ವಿಶಾಲವಾದ ಸಭಾಮಂಟಪವನ್ನು ಹೊಂದಿರುವ ದೇವಾಲಯವು ಜೀರ್ಣೋದ್ಧಾರಗೊಂಡಿದ್ದು ಸಣ್ಣ ಪುಟ್ಟ ಬದಲಾವಣೆಯಾಗಿದೆ. ಬಾಗಿಲುವಾಡಗಳು ಅರ್ಧಗಂಬ ಮತ್ತು ದ್ವಾರಪಾಲಕರ ಉಬ್ಬುಶಿಲ್ಪಗಳಿಂದ ಅಲಂಕೃತಗೊಂಡಿವೆ. ಗರ್ಭಗೃಹ ದ್ವಾರದ ಮೇಲಿನ ತೋರಣ ಫಲಕದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರನ ಸೂಕ್ಷ್ಮ ಶಿಲ್ಪಗಳಿವೆ. ಸಭಾಮಂಟಪದ ಪಶ್ಚಿಮ ಅಂಕಣದಲ್ಲಿ ದ್ವಾರವೊಂದನ್ನು ನಿಲ್ಲಿಸಿದ ಪರಿಣಾಮವಾಗಿ ಮತ್ತೊಂದು ಅಂತರಾಳ ನಿರ್ಮಾಣವಾದಂತಿದೆ. ಇಲ್ಲಿ ಚತುರ್ಮುಖ ಗಣಪತಿ ಮತ್ತು ಕಾರ್ತಿಕೇಯ ಶಿಲ್ಪಗಳಿವೆ. ಮೊದಲ ಅಂತರಾಳದ ಭುವನೇಶ್ವರಿಯಲ್ಲಿ ಅಷ್ಟದಿಕ್ಪಾಲಕರು ಮತ್ತು ನಡುವೆ ನಟರಾಜನ ಉಬ್ಬುಶಿಲ್ಪಗಳು ಮನಮೋಹಕವಾಗಿ ರಚನೆಗೊಂಡಿವೆ.

ಸಭಾಮಂಟಪದ ಮಧ್ಯದಲ್ಲಿ ತೊಲೆಗೆ ಅಲಂಕರಣದ ದೃಷ್ಟಿಯಿಂದ ಎರಡು ಕಂಬಗಳನ್ನು ಅಳವಡಿಸಲಾಗಿದೆ. ಸಭಾಮಂಟಪದ ಭುವನೇಶ್ವರಿಗಳಲ್ಲಿ ಕೀರ್ತಿಮುಖ ಮತ್ತು ನಕ್ಷತ್ರಾಕಾರದಿಂದ ಗುಮ್ಮಟದ ಅಲಂಕರಣವಿದೆ. ಕೆಲವು ತೊಲೆಗಳು ಬಿರುಕು ಬಿಟ್ಟಿರುವ ಕಾರಣ ಅಲ್ಲಲ್ಲಿ ಕಂಬಗಳನ್ನು ಆಧಾರವಾಗಿ ನಿಲ್ಲಿಸಿದ್ದಾರೆ. ಪ್ರಧಾನ ಗರ್ಭಗೃಹಕ್ಕೆ ಸಮನಾಂತರವಾಗಿರುವ ಮತ್ತೊಂದು ಗರ್ಭಗೃಹವು ಅರ್ಧಮಂಟಪವನ್ನು ಹೊಂದಿದ್ದು, ಅದೇ ಸಭಾಮಂಟಪಕ್ಕೆ ಸಂಪರ್ಕಿಸಿದೆ. ಈ ಗರ್ಭಗೃಹದಲ್ಲಿ ರೇವಣಸಿದ್ದೇಶ್ವರ ಲಿಂಗವಿದೆ. ಅರ್ಧಮಂಟಪದ ಗೋಡೆಯಲ್ಲಿ ದೇವಕೋಷ್ಠಗಳಿದ್ದು ಭಗ್ನ ಗಣೇಶ ಶಿಲ್ಪಗಳಿವೆ. ಸಭಾಮಂಟಪದ ನೈರುತ್ಯ ಮೂಲೆಯಲ್ಲಿ ಗರ್ಭಗೃಹ ಮತ್ತು ಅರ್ಧಮಂಟಪವಿದೆ. ಈ ಗರ್ಭಗೃಹದಲ್ಲಿ ಸೋಮೇಶ್ವರ ಲಿಂಗವಿದೆ. ಅರ್ಧಮಂಟಪದಲ್ಲಿ ದೇವಕೋಷ್ಠಗಳಿವೆ. ಹಾಗೂ ಲಿಂಗದ ರುದ್ರ ಭಾಗವೊಂದಿದೆ. ಸಭಾಮಂಟಪದ ದಕ್ಷಿಣದಲ್ಲಿ ಕೋಣೆಯೊಂದಿದ್ದು, ವೀರಭದ್ರನ ಶಿಲ್ಪವಿದೆ. ಆಗ್ನೇಯ ಮೂಲೆಯಲ್ಲಿ ಹೊರಗೆ ದ್ವಿಕೂಟ ಗುಡಿಯೊಂದಿದ್ದು ಗರ್ಭಗೃಹ ಮತ್ತು ಅರ್ಧಮಂಟಪಗಳೊಂದಿಗೆ ನವರಂಗವಿದೆ. ಉತ್ತರಾಭಿಮುಖವಾಗಿರುವ ಗರ್ಭಗೃಹದಲ್ಲಿ ರಾಮೇಶ್ವರ ಲಿಂಗವಿದ್ದು ಪಶ್ಚಿಮಾಭಿಮುಖವಾಗಿರುವ ಗರ್ಭಗೃಹದಲ್ಲಿ ತ್ರ್ಯಂಬಂಕೇಶ್ವರ ಲಿಂಗವಿದೆ. ನವರಂಗದ ದೇವಕೋಷ್ಠದಲ್ಲಿ ಗಣಪತಿ, ವೀರಗಲ್ಲು ಶಿಲ್ಪಗಳಿವೆ. ನವರಂಗವು ಮೊದಲಿಗೆ ತೆರೆದ ಸ್ಥಿತಿಯಲ್ಲಿತ್ತು. ಕಾಲಾನಂತರ ಗೋಡೆ ನಿರ್ಮಿಸಿದ್ದಾರೆ. ನವರಂಗದ ಕಂಬಗಳು ಚೌಕ ಮತ್ತು ಅರ್ಧಕೊಳವೆಗಳ ಅಲಂಕರಣದವು. ಉಳಿದಂತೆ ದ್ವಾರಗಳು ಅರ್ಧಗಂಬ ಮತ್ತು ದ್ವಾರಪಾಲಕ ಉಬ್ಬುರಚನೆಗಳಿಂದ ಕೂಡಿವೆ.

ಹೊರಗೆ ಕಾಳೇಶ್ವರ ಲಿಂಗಕ್ಕೆ ಅಭಿಮುಖವಾಗಿ ನಂದಿ ಮಂಟಪವಿದ್ದು, ಬೃಹತ್ ನಂದಿಶಿಲ್ಪವಿದೆ. ಈ ನಂದಿಮಂಟಪದ ಬಲಕ್ಕೆ ಪಶ್ಚಿಮಾಭಿಮುಖವಾಗಿರುವ ಸಣ್ಣ ಇರುವ ಗುಡಿ ಇದ್ದು ಗರ್ಭಗೃಹ ಮತ್ತು ಅಂತರಾಳದಿಂದ ಕೂಡಿವೆ. ಗರ್ಭಗೃಹದಲ್ಲಿ ಕಾಶಿವಿಶ್ವನಾಥ ಲಿಂಗವಿದ್ದು, ಅಂತರಾಳದಲ್ಲಿ ವಿಷ್ಣು ಮತ್ತು ಲಿಂಗವೊಂದರ ರುದ್ರಭಾಗವಿದೆ. ಹೊರಗೆ ವೀರಗಲ್ಲೊಂದಿದೆ. ಈ ದೇವಾಲಯದ ಬಲಕ್ಕೆ ಪಶ್ಚಿಮಾಭಿಮುಖವಾಗಿರುವ ಕೊಠಡಿಯಲ್ಲಿ ಮಹಾಬಲೇಶ್ವರ ಲಿಂಗವಿದೆ. ಕಾಳೇಶ್ವರ ದೇವಾಲಯದ ಉತ್ತರದಲ್ಲಿ ನೀರಿನ ಬುಗ್ಗೆಯ ಕೊಳವಿದೆ. ಈ ಕೊಳದ ಪಶ್ಚಿಮ ದಂಡೆಯಲ್ಲಿ ಗರ್ಭಗೃಹ ಮತ್ತು ಅರ್ಧಮಂಟಪವಿರುವ ಚಿಕ್ಕ ಗುಡಿಯಿದ್ದು, ಒಳಗೆ ಶ್ರೀಶೈಲ ಮಲ್ಲಿಕಾರ್ಜುನ ಲಿಂಗವಿದೆ.

ಈ ಕಾಳೇಶ್ವರ ದೇವಾಲಯದ ಹೊರಭಿತ್ತಿಯಲ್ಲಿ ಗೋಡೆಕಂಬಗಳಿದ್ದು ಅವುಗಳ ಮೇಲೆ ಹಾರ ಮತ್ತು ಕೀರ್ತಿಮುಖಗಳ ಅಲಂಕರಣವಿದೆ. ಹಾಗೂ ದೇವಕೋಷ್ಠಗಳಿವೆ. ಕಂಬಗಳ ನಡುವೆ ಶಿಲಾಬಾಲಿಕೆಯರ ಉಬ್ಬುಶಿಲ್ಪಗಳಿವೆ. ಇವು ಇದೇ ಪರಿಸರದ ಸೇಡಂ ತಾಲೂಕಿನ ಮೇದಕ್‌ನಲ್ಲಿರುವ ಭೂತೇಶ್ವರ ದೇವಾಲಯದ ಭಿತ್ತಿಯಲ್ಲಿನ ಶಿಲಾಬಾಲಿಕೆಯರ ಉಬ್ಬುಶಿಲ್ಪಗಳನ್ನು ನೆನಪಿಸುತ್ತವೆ. ದೇವಾಲಯದ ಮೇಲೆ ಇತ್ತೀಚೆಗೆ ಸಿಮೆಂಟಿನಲ್ಲಿ ನಿರ್ಮಿಸಿರುವ ಮೆಟ್ಟಿಲಾಕಾರದ ಶಿಖರವಿದೆ. ಹಿಂಭಾಗ ಹಳ್ಳದ ದಂಡೆಯಲ್ಲಿ ಭಗ್ನಗೊಂಡಿರುವ ಶೈವ ದ್ವಾರಪಾಲಕ ಶಿಲ್ಪವೊಂದಿದೆ.

ಪ್ರಧಾನ ಗರ್ಭಗೃಹದಲ್ಲಿ ಕಾಳೇಶ್ವರ ಲಿಂಗವಿದೆ. ಅದು ನಂತರದ ಕಾಲದ್ದು. ಈ ದೇವಾಲಯದಲ್ಲಿರುವ ಉಳಿದ ಶಿಲ್ಪಾವಶೇಷಗಳನ್ನು ವಾಸ್ತು ವಿವರದೊಂದಿಗೆ ಮೇಲೆ ಉಲ್ಲೇಖಿಸಲಾಗಿದೆ. ಕಾಳಗಿಯನ್ನು ಪ್ರಾಚೀನ ಶಾಸನಗಳಲ್ಲಿ ಕಾಳುಗೆ ಎಂದಿದೆ. ಹಿಂದೆ ಮನ್ನದಡಿ-೧ರಿಂದ ರಾಜಧಾನಿ ಪಟ್ಟಣವಾಗಿತ್ತು. ಇಲ್ಲಿಯೂ ೧೧ ಶಾಸನಗಳು ಪ್ರಕಟಗೊಂಡಿವೆ. ಈ ಕಾಳೇಶ್ವರ ಆವರಣದಲ್ಲಿರುವ ಕ್ರಿ.ಶ. ೧೧೦೩, ೧೧೭೧ ಮತ್ತು ೧೧೭೩ರ ಶಾಸನಗಳು ಸ್ವಯಂಭೂ ಕಾಳೇಶ್ವರ ದೇವರಿಗೆ ನೀಡಿದ ದಾನಗಳನ್ನು ತಿಳಿಸುವ ಶಾಸನಗಳಾಗಿವೆ. ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರ ಆಳ್ವಿಕೆ ಅವಧಿಯಲ್ಲಿ ನೀಲಕಂಠ ಕಾಳೇಶ್ವರ ದೇವಾಲಯವು ಪ್ರಮುಖ ಶೈವ ದೇವಾಲಯವಾಗಿತ್ತು.[೨೨]

| | | | |
|---|---|---|---|
| ಸಂಖ್ಯೆ | : ೧೫ | | |
| ಊರು | : ಗುಂಡಗರ್ತಿ | ಹೆಸರು | : ಈಶ್ವರ |
| ಸ್ಥಳ | : ಊರಿನ ಮುಂಭಾಗ | ಕಾಲಮಾನ | : ಕ್ರಿ.ಶ. ೧೧ನೇ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ಕಲ್ಯಾಣ ಚಾಲುಕ್ಯ |
| ಸ್ಥಿತಿ | : ಕನಿಷ್ಠ | ಸಂರಕ್ಷಣೆ | : -- |

ಗುಂಡಗುರ್ತಿಯ ಈಶ್ವರ ದೇವಾಲಯದ ತಳಪಾಯದಲ್ಲಿ ಗರ್ಭಗೃಹ ಮತ್ತು ನವರಂಗಗಳಿವೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ದ್ವಾರದ ಚೌಕಟ್ಟಿನಲ್ಲಿ ಮೂರು ಶಾಖೆಗಳಾದ ರತ್ನಗಳು, ಅರ್ಧಗಂಭ ಮತ್ತು ಜಾಲಾಂಧ್ರದಲ್ಲಿ ರತ್ನಗಳ ಅಲಂಕರಣವಿದೆ. ಲಲಾಟದಲ್ಲಿ ಗಜೇಂದ್ರಮೋಕ್ಷದ ಚಿತ್ರವನ್ನು ತೋರಿಸಿರುವುದು ಅಪರೂಪದ್ದಾಗಿದೆ. ಕೆಳಗಡೆ ಮಕರತೋರಣದಲ್ಲಿ ನಂದಿ, ಗಣೇಶ ಮತ್ತು ವಾದ್ಯಮೇಳದವರಿದ್ದಾರೆ. ನವರಂಗದ ಭುವನೇಶ್ವರಿ ಗೊಮ್ಮಟಕಾರವಿದ್ದು, ಅಲ್ಲಿ ಪದ್ಮದ ಅಲಂಕರಣವಿದೆ. ಇದರ ಗರ್ಭಗೃಹದ ಭಾಗವು ಕ್ರಿ.ಶ. ೧೦ನೆಯ ಶತಮಾನದ್ದಾಗಿದೆ.[೨೩]

| | | | |
|---|---|---|---|
| ಸಂಖ್ಯೆ | : ೧೬ | | |
| ಊರು | : ಸೇಡಂ | ಹೆಸರು | : ಮಾಣಿಕೇಶ್ವರ |
| ಸ್ಥಳ | : ಸರ್ಕಾರಿ ಚಾವಡಿ | ಕಾಲಮಾನ | : ಕ್ರಿ.ಶ. ೧೧-೧೨ನೇ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ಕಲ್ಯಾಣ ಚಾಲುಕ್ಯ |
| ಸ್ಥಿತಿ | : ಮಧ್ಯಮ | ಸಂರಕ್ಷಣೆ | : ಧಾರ್ಮಿಕದತ್ತಿ ಇಲಾಖೆ |

ಬಹುಶಃ ಹಾಳಾದ ದೇವಾಲಯವೊಂದರ ಕಂಬಗಳನ್ನು ಬಳಸಿಕೊಂಡು ವಿಶಾಲವಾದ ಆಯತಾಕಾರದ ಮಂಟಪವನ್ನು ಇತ್ತೀಚಿನ ದಶಕಗಳಲ್ಲಿ ನಿರ್ಮಿಸಿದ್ದಾರೆ. ಈ ಮಂಟಪದ ನಡುವೆ ಚಿಕ್ಕದಾದ ಗರ್ಭಗೃಹವಿದೆ. ಈ ದೇವಾಲಯದಲ್ಲಿ ಅಳವಡಿಸಿರುವ ಕಂಬಗಳು ಗಿಡ್ಡಗಿದ್ದು ಅವುಗಳ ಕೆಳಗೆ ಹೆಚ್ಚುವರಿಯಾಗಿ ಕಲ್ಲನ್ನು ಅಳವಡಿಸಿ ಎತ್ತರಗೊಳಿಸಲಾಗಿದೆ. ಈ ದೇವಾಲಯದ ಆವರಣದ ಈಶಾನ್ಯ ಮೂಲೆಯಲ್ಲಿ ಚಾವಣಿರಹಿತ ಮಂಟಪದ ನಡುವೆ, ಬಾಣಂತಿಕಂಬ ಎನ್ನುವ ಮಾನಸ್ತಂಭವಿದೆ. ಇದು ಅತ್ಯಂತ ಎತ್ತರವಾಗಿದ್ದು ಈ ಭಾಗದ ವಿಶೇಷತೆವೆನಿಸಿದೆ.

ಈ ದೇವಾಲಯದ ಗರ್ಭಗೃಹದಲ್ಲಿ ಲಿಂಗವಿದೆ. ಹೊರಗೆ ಪ್ರಾಚೀನ ಲಿಂಗವೊಂದರ ರುದ್ರಭಾಗವನ್ನು ಕಾಣಬಹುದು. ಹೊರಭಾಗದಲ್ಲಿ ಹಳೇ ದೇವಾಲಯದ ವಾಸ್ತು ಭಾಗಗಳು ಕಂಡುಬರುತ್ತವೆ.[೨೪] ಇಂತಹ ಹಲವು ಕಾರಣಗಳಿಂದ ಈ ದೇವಾಲಯ ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಪ್ರಾಮುಖ್ಯತೆ ಪಡೆದ ದೇವಾಲಯವಾಗಿದೆ.

ಸಂಖ್ಯೆ : ೧೭

| | | | |
|---|---|---|---|
| ಊರು | : ಮಾನ್ಯಖೇಟ | ಹೆಸರು | : ಶಂಕರಲಿಂಗ |
| ಸ್ಥಳ | : ಲಿಂಗಾಯಿತರ ಓಣಿ | ಕಾಲಮಾನ | : ಕ್ರಿ.ಶ. ೧೧-೧೨ನೇ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ಕಲ್ಯಾಣ ಚಾಲುಕ್ಯ |
| ಸ್ಥಿತಿ | : ಕನಿಷ್ಠ | ಸಂರಕ್ಷಣೆ | : ಧಾರ್ಮಿಕದತ್ತಿ ಇಲಾಖೆ |

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಿಸಲಾಗಿದೆ. ಈ ದೇವಾಲಯವು ಈಗಿನ ರಸ್ತೆ ಮಟ್ಟಕ್ಕಿಂತ ೬ ಅಡಿ ತಗ್ಗಿನಲ್ಲಿದೆ. ಗರ್ಭಗೃಹ, ಅಂತರಾಳ ಮತ್ತು ರಂಗಮಂಟಪ ಭಾಗಗಳಿವೆ. ಗರ್ಭಗೃಹ ದ್ವಾರದಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಬಾಗಿಲುವಾಡಗಳಲ್ಲಿ ಅರ್ಧಗಂಬ, ಸಿಂಹ ಮತ್ತು ಗಂಧರ್ವ ಶಾಖೆಗಳ ಅಲಂಕರಣವನ್ನು ಕಾಣುತ್ತೇವೆ. ಅಂತರಾಳ ದ್ವಾರವು ಸಹ ಅರ್ಧಕಂಬಗಳು ಮತ್ತು ಜಾಲಂಧ್ರಗಳ ರಚನೆಯನ್ನು ಒಳಗೊಂಡಿದೆ. ಮೇಲಿನ ಮಕರತೋರಣ ಫಲಕದಲ್ಲಿ ಉಗ್ರನರಸಿಂಹನ ಉಬ್ಬು ರಚನೆಯಿದೆ. ರಂಗಮಂಟಪಕ್ಕೆ ಹಿಂದೆ ಉತ್ತರ, ದಕ್ಷಿಣ, ಪೂರ್ವ ದಿಕ್ಕುಗಳಲ್ಲಿ ಪ್ರವೇಶವಿತ್ತು ಈಗ ಪೂರ್ವದಲ್ಲಿ ಮಾತ್ರ ಪ್ರವೇಶವಿದ್ದು, ಉಳಿದೆರಡು ಪ್ರವೇಶವನ್ನು ಗೋಡೆಗಳಿಂದ ಮುಚ್ಚಿದ್ದಾರೆ. ರಂಗಮಂಟಪದ ನಾಲ್ಕು ಕಂಬಗಳು ಚೌಕ ಮತ್ತು ತರಂಗಬೋದಿಗೆ ಅಲಂಕರಣದಿಂದ ಕೂಡಿವೆ. ಬೋದಿಗೆ ಸರಳ ರಚನೆಯಿದ್ದು, ಪೀಠಗಳು ಉಬ್ಬುತಗ್ಗಿನ ಅಲಂಕರಣದ ದ್ವಿಪಟ್ಟಿ ರಚನೆಯಲ್ಲಿವೆ. ಭುವನೇಶ್ವರಿಯಲ್ಲಿ ಕೀರ್ತಿಮುಖಗಳ ಅಲಂಕರಣವಿದ್ದು, ಮಧ್ಯದಲ್ಲಿ ಹೊರ ಚಾಚಿದ ಅಷ್ಟಾಕೃತಿಯ ರಚನೆಯ ಮಧ್ಯೆ ತಾವರೆ ಮೊಗ್ಗನ್ನು ಬಿಡಿಸಲಾಗಿದೆ. ಉಳಿದ ಅಂಕಣಗಳ ಒಳಚಾವಣಿಯು ಸೌಭಿಚ್ಛಂದ ರಚನೆಯಲ್ಲಿದೆ. ದೇವಕೋಷ್ಠಗಳು ಬಿಡಿಶಿಲ್ಪಗಳ ಗಾತ್ರಕ್ಕೆ ಅನುಗುಣವಾಗಿ ರಚನೆಗೊಂಡಿವೆ. ರಂಗಮಂಟಪದ ತೊಲೆಗಳ ಅಡಿಯಲ್ಲಿ ಅರಳಿದ ತಾವರೆ ಹೂವಿನ ಉಬ್ಬುಶಿಲ್ಪಗಳನ್ನು ಕಾಣುತ್ತೇವೆ. ಪೂರ್ವದ ಅಂಕಣದ ತೊಲೆಗಳು ಭಗ್ನಗೊಂಡಿದ್ದು, ಆಧಾರವಾಗಿ ಕಂಬ ನಿರ್ಮಿಸಿದ್ದಾರೆ. ರಂಗಮಂಟಪದ ಮೇಲೆ ಇಳಿಜಾರಾದ ಸೂರಿನ ರಚನೆಯಿದೆ. ದೇವಾಲಯದ ಮೇಲೆ ಗಿಡಗಂಟಿಗಳು ದಟ್ಟವಾಗಿ ಬೆಳದಿವೆ.

ಗರ್ಭಗೃಹದಲ್ಲಿರುವ ಲಿಂಗ ದೊಡ್ಡದು. ರಂಗಮಂಟಪದ ದೇವಾಕೋಷ್ಠಗಳಲ್ಲಿ ಗಣಪತಿ, ಮತ್ತಿತರ ಶಿಲ್ಪಾವಶೇಷಗಳಿವೆ.[೨೫] ದೇವಾಲಯದ ಹೊರಭಾಗದಲ್ಲಿ ನಾಗಶಿಲ್ಪಗಳಿವೆ. ಇಂತಹ ಹಲವು ಕಾರಣಗಳಿಂದ ಈ ಮಾನ್ಯಖೇಟದ ಶಂಕರಲಿಂಗ ದೇವಾಲಯವು ಅತ್ಯಂತ ಪ್ರಾಮುಖ್ಯತೆ ಪಡೆದುಕೊಂಡಿದೆ.

ಸಂಖ್ಯೆ : ೧೮

ಊರು : ಕಾಳಗಿ
ಹೆಸರು : ಈಶ್ವರ
ಸ್ಥಳ : ಹಳ್ಳದ ಪಕ್ಕ
ಕಾಲಮಾನ : ಕ್ರಿ.ಶ. ೧೧-೧೨ನೇ ಶತಮಾನ
ಅಭಿಮುಖ : ಪೂರ್ವ
ಶೈಲಿ : ಕಲ್ಯಾಣ ಚಾಲುಕ್ಯ
ಸ್ಥಿತಿ : ಕನಿಷ್ಠ
ಸಂರಕ್ಷಣೆ : ಧಾರ್ಮಿಕದತ್ತಿ ಇಲಾಖೆ

ಈಶ್ವರ ದೇವಾಲಯವು ಗರ್ಭಗೃಹ ಮತ್ತು ಅರ್ಧಮಂಟಪದಿಂದ ಕೂಡಿದ್ದು, ಭಗ್ನಸ್ಥಿತಿಯಲ್ಲಿದೆ. ಗರ್ಭಗೃಹದ ಬಾಗಿಲುವಾಡದಲ್ಲಿ ಅರ್ಧಗಂಬ ಮತ್ತು ಲತಾಬಳ್ಳಿ ಶಾಖೆಗಳ ಅಲಂಕರಣವಿದೆ. ಲಲಾಟ ಭಾಗದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವಿದೆ. ಗರ್ಭಗೃಹದಲ್ಲಿ ಲಿಂಗದ ರುದ್ರ ಭಾಗವನ್ನಿರಿಸಿದ್ದಾರೆ. ಅರ್ಧಮಂಟಪದ ಮುಂದೆ ಶಾಸನವಿದೆ.

ಈ ದೇವಾಲಯದ ಸನಿಹದಲ್ಲಿ ಪಾಳುಬಿದ್ದ ಮಂಟಪವೊಂದಿದೆ. ಹತ್ತಿರದಲ್ಲಿ ಮತ್ತೊಂದು ಸಣ್ಣ ಕೊಠಡಿಯಿದ್ದು ಅದರಲ್ಲಿ ವೀರಗಲ್ಲು ಮತ್ತಿತರ ಶಿಲ್ಪಾವಶೇಷಗಳಿವೆ. ಪಕ್ಕದ ಗೂಡಿನಲ್ಲಿ ದ್ವಿಭುಜ ಗಣಪತಿಯ ಶಿಲ್ಪವಿದೆ. ಇಲ್ಲಿರುವ ನೀರಿನ ಬುಗ್ಗೆಯಿಂದಾಗಿಯೇ ಈ ಊರಿನಲ್ಲಿ ದೇವಾಲಯಗಳು ಹೆಚ್ಚಿನ ಸಂಖ್ಯೆಯಲ್ಲಿ ನಿರ್ಮಾಣಗೊಂಡಿವೆ. ಬುಗ್ಗೆಯ ಎರಡೂ ದಂಡೆಗಳಲ್ಲಿ ದೇವಾಲಯಗಳಿವೆ. ಸಾವಿರಾರು ವರ್ಷಗಳಿಂದಲೂ ಈ ಬುಗ್ಗೆ ಊರಿನ ಜೀವಜಲವಾಗಿದ್ದು ಇಲ್ಲಿನ ದೇವಾಲಯ ಸಂಸ್ಕೃತಿಯನ್ನು ರೂಪಿಸಿದೆ. ಮಾನ್ಯಖೇಟದಂತಹ ಬಯಲು ಪ್ರದೇಶದಲ್ಲಿ ಈ ರೀತಿಯ ನೀರಿನ ಬುಗ್ಗೆಗಳು ಸಾಂಸ್ಕೃತಿಕ ತಾಣಗಳನ್ನು ಸೃಷ್ಟಿಸಿವೆ.[೨೬] ನಾಗಾಯಿ ಸ್ಥಳೀಯ ಪ್ರಾಧಿಕಾರಗಳು ಈ ನೀರಿನ ಬುಗ್ಗೆಗಳ ಪರಿಸರವನ್ನು ಸಂರಕ್ಷಿಸಬೇಕಿದೆ.

ಸಂಖ್ಯೆ : ೧೯

ಊರು : ಕಾಳಗಿ
ಹೆಸರು : ಮಲ್ಲಿಕಾರ್ಜುನ
ಸ್ಥಳ : ಊರಿನ ನಡುವೆ
ಕಾಲಮಾನ : ಕ್ರಿ.ಶ. ೧೧-೧೨ನೇ ಶತಮಾನ
ಅಭಿಮುಖ : ಪೂರ್ವ
ಶೈಲಿ : ಕಲ್ಯಾಣ ಚಾಲುಕ್ಯ
ಸ್ಥಿತಿ : ಕನಿಷ್ಠ
ಸಂರಕ್ಷಣೆ : ಧಾರ್ಮಿಕದತ್ತಿ ಇಲಾಖೆ

ಕಾಳಗಿಯಲ್ಲಿ ಕಲ್ಯಾಣ ಚಾಲುಕ್ಯರು ನಿರ್ಮಾಣ ಮಾಡಿದ ಮಲ್ಲಿಕಾರ್ಜುನ ದೇವಾಲಯವು ಅತ್ಯಂತ ವಿಶೇಷತೆಯಿಂದ ಕೂಡಿದೆ. ಈ ದೇವಾಲಯವು ನಕ್ಷತ್ರಾಕಾರದ ವೇದಿಕೆ ಮೇಲಿದೆ. ಅದಿಷ್ಠಾನದಿಂದ ಕೂಡಿದ ದೇವಾಲಯವು ಗರ್ಭಗೃಹ, ಅಂತರಾಳ ಮತ್ತು ರಂಗಮಂಟಪವನ್ನು ಒಳಗೊಂಡಿದೆ. ಗರ್ಭಗೃಹ ದ್ವಾರವು ಅರ್ಧಗಂಬ, ಲತಾಬಳ್ಳಿ ಮತ್ತು ಜಾಮಿತಿ ರಚನಾ ಶಾಖೆಗಳಿಂದ ಕೂಡಿದೆ. ಅಂತರಾಳ ದ್ವಾರದಲ್ಲಿ ಅರ್ಧಗಂಬ ಮತ್ತು ಚಾಮರಧಾರಿ ಸ್ತ್ರೀಯರ ಉಬ್ಬು ರಚನೆಗಳಿವೆ. ಇದಕ್ಕೆ ಹೊಂದಿಕೊಂಡಂತೆ ಲತಾಬಳ್ಳಿಗಳ ಜಾಲಾಂಧ್ರಗಳಿವೆ. ಮೇಲಿರುವ ಮಕರಣತೋರಣ ಶಿಲ್ಪ ಫಲಕದಲ್ಲಿ ನಾಟ್ಯಶಿವ ಮತ್ತು ಅವನ ಗಣಗಳ ಉಬ್ಬುಶಿಲ್ಪಗಳಿವೆ.

ರಂಗಮಂಟಪದ ಕಂಬಗಳು ಚೌಕ ರಚನೆಯವು. ಪ್ರತಿ ಮುಖದಲ್ಲೂ ಹಾರಗಳ ಅಲಂಕರಣವಿದೆ. ಬೋದಿಗೆ ಪೀಠಗಳಲ್ಲಿ ಗುಂಡುಗಳ ಅಲಂಕರಣವನ್ನು ಕಾಣಬಹುದು. ಇನ್ನೂ ಭುವನೇಶ್ವರಿಯಲ್ಲಿ ಅಷ್ಟದಿಕ್ಪಾಲಕರ ಉಬ್ಬುಶಿಲ್ಪಗಳಿದ್ದು, ಮಧ್ಯದಲ್ಲಿ ನಕ್ಷತ್ರಾಕಾರದ ತೆಳು ಗುಮ್ಮಟದ ರಚನೆಯಿದೆ. ರಂಗಮಂಟಪದ ಸುತ್ತಲೂ ಕಕ್ಷಾಸನವಿದೆ. ಮೂರು ದಿಕ್ಕುಗಳಲ್ಲಿ ಪ್ರವೇಶಮಂಟಪಗಳಿವೆ. ಅರ್ಧಕಂಬಗಳ ಮೇಲೆ ನಾಗರ ಶೈಲಿಯ ಶಿಖರಗಳನ್ನು ಸೂಕ್ಷ್ಮವಾಗಿ ಬಿಡಿಸಿ ಅಲಂಕರಿಸಲಾಗಿದೆ. ಮೇಲೆ ಸಿಮೆಂಟಿನ ಕೈಪಿಡಿ ಗೋಡೆ ನಿರ್ಮಿಸಿ ಜೀರ್ಣೋದ್ಧಾರ ಮಾಡಿದ್ದಾರೆ. ಯಾಳದ ಅಲಂಕರಣವಿರುವ ಜಲಹರಿಯು ಅಕರ್ಷಕ ರಚನೆ ಎನ್ನಬಹುದು. ಇದು ಇಲ್ಲಿನ ಸೂರ್ಯ ನಾರಾಯಣ ದೇವಾಲಯದ ಸಮಕಾಲೀನದ್ದಾಗಿದೆ.

ಗರ್ಭಗೃಹದಲ್ಲಿ ಬೃಹತ್ ಗಾತ್ರದ ಲಿಂಗವಿದೆ. ನೋಡಲು ಆಕರ್ಷಕವಾಗಿದ್ದು ಲಿಂಗದ ಜಲಹರಿಯು ಭಗ್ನಗೊಂಡಿದೆ. ಅದಕ್ಕೆ ಆಧಾರವಾಗಿ ಕಲ್ಲಿನ ಕಟ್ಟೆ ನಿರ್ಮಿಸಿದ್ದಾರೆ. ರಂಗಮಂಟಪದಲ್ಲಿ ಗಣೇಶ, ನಂದಿ ಮತ್ತು ಶಾಸನವು ಈ ದೇವಾಲಯದಲ್ಲಿ ಕಂಡುಬರುತ್ತದೆ.[೨೨]

| | | | |
|---|---|---|---|
| ಸಂಖ್ಯೆ | : ೨೦ | | |
| ಊರು | : ಕೊಲ್ಲೂರು | ಹೆಸರು | : ಸಾಲಿ ಬಸವೇಶ್ವರ |
| ಸ್ಥಳ | : ಊರಿನ ನಡುವೆ | ಕಾಲಮಾನ | : ಕ್ರಿ.ಶ. ೧೧-೧೨ನೇ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ಕಲ್ಯಾಣ ಚಾಲುಕ್ಯ |
| ಸ್ಥಿತಿ | : ಕನಿಷ್ಠ | ಸಂರಕ್ಷಣೆ | : ಧಾರ್ಮಿಕದತ್ತಿ ಇಲಾಖೆ |

ಈ ಸಾಲಿ ಬಸವೇಶ್ವರ ದೇವಾಲಯವು ಪ್ರಸ್ತುತ ಅಧ್ಯಯನ ಪರಿಸರದ ಪ್ರಮುಖ ಶೈವ ದೇವಾಲಯವಾಗಿದೆ. ಈ ದೇವಾಲಯವು ಚತುಷ್ಕೋನುವಾಗಿದ್ದು ನಾಲ್ಕು ದಿಕ್ಕುಗಳಲ್ಲಿ ಗರ್ಭಗೃಹ ಮತ್ತು ಅರ್ಧಮಂಟಪಗಳನ್ನು ಹೊಂದಿದೆ. ನಡುವೆ ವಿಶಾಲವಾದ ರಂಗಮಂಟಪವನ್ನು ಕಾಣಬಹುದು. ಎಲ್ಲ ಗರ್ಭಗೃಹ ದ್ವಾರಗಳು ಅರ್ಧಗಂಬ, ಸಿಂಹ ಮತ್ತು ಲತಾಶಾಖೆಗಳ ಅಲಂಕರಣದಿಂದ ಕೂಡಿವೆ. ದ್ವಾರಗಳ ತಳದಲ್ಲಿ ದ್ವಾರಪಾಲಕರ ಮತ್ತು ಚಾಮರಧಾರಿ ಸ್ತ್ರೀಯರ ಉಬ್ಬುಶಿಲ್ಪಗಳಿವೆ. ಅರ್ಧಮಂಟಪಗಳ ಪ್ರವೇಶ ಭಾಗದಲ್ಲಿ ಎರಡು ಕಂಬಗಳಿದ್ದು ಮಕರತೋರಣ ಶಿಲ್ಪಗಳನ್ನು ಹೊತ್ತು ನಿಂತಿವೆ. ನವರಂಗದಲ್ಲಿರುವ ನಡುವಿನ ಕಂಬಗಳು ಚೌಕ ಮತ್ತು ಅರ್ಧಕೊಳವೆಗಳ ಅಲಂಕರಣದವು ಚೌಕಮುಖದಲ್ಲಿ ಉಬ್ಬುಶಿಲ್ಪಗಳ ಕೆತ್ತನೆಯಿದೆ. ಈ ಉಬ್ಬುಶಿಲ್ಪಗಳು ನೋಡಲು ಬಿಡಿ ಶಿಲ್ಪಗಳಂತೆ ಕಂಡುಬರುತ್ತವೆ. ಬಹುತೇಕ ಉಬ್ಬುಶಿಲ್ಪಗಳು ಭಗ್ನಗೊಂಡಿವೆ. ರಂಗಮಂಟಪ ಮೊದಲಿಗೆ ತೆರೆದ ಸ್ಥಿತಿಯಲ್ಲಿತ್ತು. ಈಗ ಕೆಲವು ವರ್ಷಗಳ ಹಿಂದೆ ಅಲ್ಲಲ್ಲಿ ಮರದ ಕಿಟಕಿಗಳನ್ನು ಅಳವಡಿಸಿದ್ದಾರೆ. ದೇವಾಲಯದ ಹೊರಭಿತ್ತಿಯಲ್ಲಿ ಅರ್ಧಕಂಬಗಳನ್ನು ಬಿಡಿಸಿ ತೆಳುಉಬ್ಬಿನ ದೇವಕೋಷ್ಠಗಳ ರಚನೆಯನ್ನು ಕಾಣಬಹುದು. ಹಾಗೂ ಹಿನ್ಸರಿತ ಮತ್ತು ಮುನ್ಸರಿತಗಳಿಂದ ಕೂಡಿದೆ.

ಈ ದೇವಾಲಯದ ಪ್ರಧಾನ ಗರ್ಭಗೃಹದಲ್ಲಿ ಲಿಂಗದ ಬೃಹತ್ ರುದ್ರ ಭಾಗವಿದೆ. ಆದರೆ ಯೋನಿಪೀಠವಿಲ್ಲ. ಇದೇ ರೀತಿಯ ಲಿಂಗದ ರುದ್ರಭಾಗವೊಂದು ಪೂರ್ವದ ಗರ್ಭಗೃಹದಲ್ಲಿದೆ. ಅದರ ಚಾವಣಿ ಭಾಗ ಹಾಳಾಗಿದ್ದು ಮದುವೆ ಸಂದರ್ಭದಲ್ಲಿ ಅಡುಗೆ ಮಾಡುತ್ತಾರೆ. ಇಲ್ಲಿ ದಕ್ಷಿಣದ ಗರ್ಭಗೃಹದಲ್ಲಿ ಲಿಂಗವೊಂದರ ರುದ್ರಭಾಗವಿದೆ. ಇನ್ನು ಉತ್ತರದ ಗರ್ಭಗೃಹದಲ್ಲಿ ಲಿಂಗದ ರುದ್ರಭಾಗ ಮುಂದಿದ್ದು ಕುಬೇರ ಎನ್ನುವ ಶಿಲ್ಪವಿರಿಸಲಾಗಿದೆ. ನಾಲ್ಕು ಅರ್ಧಮಂಟಪಗಳ ಮುಂದಿರುವ ಮಕರತೋರಣ ಶಿಲ್ಪಗಳಲ್ಲಿ ಸೂಕ್ಷ್ಮ ಬಿಡಿಶಿಲ್ಪಗಳನ್ನು ಕೆತ್ತಲಾಗಿದೆ. ಪ್ರಧಾನ ಮಕರತೋರಣದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರ ಶಿಲ್ಪಗಳಿವೆ. ವರಹ ಉಗ್ರನರಸಿಂಹನ ಉಬ್ಬುಶಿಲ್ಪಗಳನ್ನು ಬಿಡಿಸಲಾಗಿದೆ. ಕುದುರೆ, ಆನೆ, ಸವಾರರ ಸೂಕ್ಷ್ಮ ಉಬ್ಬುಶಿಲ್ಪಗಳು ಅಲ್ಲಿದೆ. ಕೀರ್ತಿಮುಖ ಪಂಜರದಲ್ಲಿ ನಟರಾಜನ ಉಬ್ಬುಶಿಲ್ಪ ಮನಮೋಹಕವಾಗಿದೆ. ಮಕರತೋರಣ ಮತ್ತು ಕಂಬಗಳಿಗೆ ಕೆಂಪು ಜಾಜ ಬಣ್ಣವನ್ನು ಲೇಪಿಸಿದ್ದಾರೆ. ದಕ್ಷಿಣದ ಅರ್ಧಮಂಟಪದಲ್ಲಿ ಬೃಹತ್ ನಂದಿಶಿಲ್ಪವಿದೆ ಮತ್ತು ದೇವಾಲಯದ ಹೊರಭಾಗದಲ್ಲೂ ನಂದಿಶಿಲ್ಪವೊಂದಿದೆ. ಇಲ್ಲಿ ಕ್ರಿ.ಶ. ೧೧೬೭ರ ಶಾಸನ ಕಳಚೂರಿ ಸೋಮದೇವನ ಕಾಲದ್ದು ಕಂಡುಬರುತ್ತದೆ.[೫೮]

| | | | |
|---|---|---|---|
| ಸಂಖ್ಯೆ | : ೨೧ | | |
| ಊರು | : ಪೇಟಶಿರೂರು | ಹೆಸರು | : ಹೊನ್ನಲಿಂಗೇಶ್ವರ |
| ಸ್ಥಳ | : ಊರಿನ ನಡುವೆ | ಕಾಲಮಾನ | : ಕ್ರಿ.ಶ. ೧೧-೧೨ನೇ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ಕಲ್ಯಾಣ ಚಾಲುಕ್ಯ |
| ಸ್ಥಿತಿ | : ಕನಿಷ್ಠ | ಸಂರಕ್ಷಣೆ | : ಧಾರ್ಮಿಕದತ್ತಿ ಇಲಾಖೆ |

ಈ ಹೊನ್ನಲಿಂಗೇಶ್ವರ ದೇವಾಲಯ ಪ್ರಸ್ತುತ ಅಧ್ಯಯನ ಪರಿಸರದ ಪ್ರಮುಖ ತ್ರಿಕೂಟ ರಚನೆಯ ಶೈವ ದೇವಾಲಯವಾಗಿದೆ. ಈ ದೇವಾಲಯದಲ್ಲಿ ತ್ರಿಕೂಟ ರಚನೆಯಿದ್ದು ಗರ್ಭಗೃಹಗಳು, ಅರ್ಧಮಂಟಪಗಳು ಮತ್ತು ನವರಂಗವನ್ನು ಒಳಗೊಂಡಿದೆ. ಗರ್ಭಗೃಹ ದ್ವಾರಗಳು ಅರ್ಧಕಂಬ ಮತ್ತು ಅಲಂಕಾರಿಕ ಶಾಖೆಗಳಿಂದ ಕೂಡಿವೆ. ನವರಂಗದ ಕಂಬಗಳು ಒರಟು ರಚನೆಗಳಂತಿದ್ದು, ಚೌಕ ಮತ್ತು ಅರ್ಧಕೊಳವೆಗಳ ಅಲಂಕರಣವನ್ನು ಹೊಂದಿದೆ. ನಡುವಿನ ಭುವನೇಶ್ವರಿಯಲ್ಲಿ ಕಮಲದ ರಚನೆಯಿದೆ. ಭಿತ್ತಿ ಭಾಗವನ್ನು ಸುಣ್ಣಕಲ್ಲಿನಿಂದ ನಿರ್ಮಿಸಲಾಗಿದೆ.

ಮುಖ್ಯ ಗರ್ಭಗೃಹದಲ್ಲಿ ಸೂರ್ಯನ ಪಾಣಿಪೀಠವಿದ್ದು, ಅದರಲ್ಲಿ ಲಿಂಗದ ರುದ್ರಭಾಗವನ್ನು ಅಳವಡಿಸಿದ್ದಾರೆ. ದಕ್ಷಿಣದ ಗರ್ಭಗೃಹದಲ್ಲಿ ಒರಟಾದ ಯೋನಿ ಪೀಠವಿದ್ದು, ಸಣ್ಣ ರುದ್ರ ಭಾಗವನ್ನು ಅಳವಡಿಸಲಾಗಿದೆ. ಇನ್ನು ಉತ್ತರದ ಗರ್ಭಗೃಹದಲ್ಲಿ ಲಿಂಗವಿದೆ. ನವರಂಗದಲ್ಲಿ ಭಗ್ನಗೊಂಡಿರುವ ನಂದಿಶಿಲ್ಪವಿದೆ.[೫೯]

| | | | |
|---|---|---|---|
| ಸಂಖ್ಯೆ | : ೨೨ | | |
| ಊರು | : ಕೊಡ್ಲಾ | ಹೆಸರು | : ಶಂಭುಲಿಂಗೇಶ್ವರ |
| ಸ್ಥಳ | : ಸೇಡಂ ದಾರಿಯಲ್ಲಿ | ಕಾಲಮಾನ | : ಕ್ರಿ.ಶ. ೧೧-೧೨ನೇ ಶತಮಾನ |

ಅಭಿಮುಖ : ಪೂರ್ವ  ಶೈಲಿ : ಕಲ್ಯಾಣ ಚಾಲುಕ್ಯ

ಸ್ಥಿತಿ : ಮಧ್ಯಮ  ಸಂರಕ್ಷಣೆ : ಧಾರ್ಮಿಕದತ್ತಿ ಇಲಾಖೆ

ಈ ದೇವಾಲಯವು ಕೋಡ್ಲಾ ಗ್ರಾಮದ ಉತ್ತರಕ್ಕಿದೆ. ಇದಕ್ಕೆ ಒಂದು ಚೌಕ ಗರ್ಭಗೃಹ ಅಂತರಾಳ ಮತ್ತು ತೆರೆದ ನವರಂಗವಿದೆ. ನವರಂಗದಲ್ಲಿ ನಾಲ್ಕು ಕಂಬಗಳಿವೆ. ಕಂಬಗಳ ಕಾಂಡದ ಚೌಕ ಪಟ್ಟಿಕೆಗಳ ನಡುವೆ ಉದ್ದ ಪಟ್ಟಿಕೆಯಿದೆ. ಈ ಲಕ್ಷಣ ರಾಷ್ಟ್ರಕೂಟರ ಶೈಲಿಯಾಗಿದೆ. ಗರ್ಭಗೃಹ ದ್ವಾರಪಟ್ಟಿಕೆಯಲ್ಲಿ ಮೂರು ಶಾಖೆಗಳಿವೆ. ಕೆಳಗಡೆ ಪೂರ್ಣ ಕಂಬಗಳಿವೆ. ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಈ ದೇವಾಲಯದ ಸಂಕೀರ್ಣದಲ್ಲಿ ಚತುರ್ಭುಜ ಗಣೇಶ, ಭೈರವ, ಏಳು ಹೆಡೆನಾಗ, ಸರಸ್ವತಿ, ಸಪ್ತಮಾತೃಕೆ ಶಿಲ್ಪಗಳು ಮತ್ತು ಎರಡು ಶಿವಲಿಂಗ[೩೦] ಇತ್ಯಾದಿಗಳು ಇಲ್ಲಿವೆ.

ಸಂಖ್ಯೆ : ೨೩



ಊರು : ಸೇಡಂ  ಹೆಸರು : ಪಂಚಲಿಂಗೇಶ್ವರ

ಸ್ಥಳ : ಸೇಡಂ ಗ್ರಾಮದಒಳಗೆ  ಕಾಲಮಾನ : ಕ್ರಿ.ಶ. ೧೧-೧೨ನೇ ಶತಮಾನ

ಅಭಿಮುಖ : ಪಶ್ಚಿಮಾಭಿಮುಖ  ಶೈಲಿ : ಕಲ್ಯಾಣ ಚಾಲುಕ್ಯ

ಸ್ಥಿತಿ : ಮಧ್ಯಮ  ಸಂರಕ್ಷಣೆ : ಧಾರ್ಮಿಕದತ್ತಿ ಇಲಾಖೆ

ಈ ಪಂಚಲಿಂಗ ದೇವಾಲಯ ಪಶ್ಚಿಮಾಭಿಮುಖವಾಗಿದ್ದು ಮಾನ್ಯಖೇಟದಿಂದ ೧೨ ಕಿ.ಮೀ. ಅಂತರದಲ್ಲಿದೆ. ಪ್ರಸ್ತುತ ದೇವಾಲಯದ ಉದ್ದಗಲ ೨೩ x ೨೭ ಮೀ. ಇದೆ. ದೇವಾಲಯದ ಸಂಕೀರ್ಣದಲ್ಲಿ ದ್ವಿಕೂಟ ಮತ್ತು ಮೂರು ಏಕಕೂಟ ದೇವಾಲಯಗಳಿವೆ. ಇವುಗಳಲ್ಲಿ ಒಂದು ಪಶ್ಚಿಮಾಭಿಮುಖವಾಗಿ, ಒಂದು ಉತ್ತರಾಭಿಮುಖವಾಗಿ ಎರಡು ಪೂರ್ವಾಭಿಮುಖವಾಗಿವೆ. ಪಶ್ಚಿಮಾಭಿಮುಖವಾಗಿರುವ ದೇಗುಲವು ದ್ವಿಕೂಟವಾಗಿದೆ. ದೇವಾಲಯದ ಒಳಭಾಗ ಎರಡು ಗರ್ಭಗೃಹಗಳು, ಎರಡು ಅಂತರಾಳಗಳು, ತೆರೆದ ನವರಂಗ, ಮುಖಮಂಟಪವನ್ನೊಳಗೊಂಡಿದೆ. ಗರ್ಭಗೃಹದಲ್ಲಿ ಶಿವಲಿಂಗವಿದ್ದು, ಪಶ್ಚಿಮಾಭಿಮುಖವಾಗಿದೆ. ಗರ್ಭಗೃಹದ ಬಾಗಿಲುವಾಡದ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಆಸೀನಳಾಗಿದ್ದು ದ್ವಾರದಲ್ಲಿ ಶೈವದ್ವಾರದ ಪಾಲಕರ ಉಬ್ಬುಶಿಲ್ಪವಿದೆ. ಗರ್ಭಗೃಹದ ಹೊಸ್ತಿಲು ಸುಂದರವಾದ ಕಮಲದ ಕೆತ್ತನೆಯನ್ನೊಳಗೊಂಡಿದೆ. ಗರ್ಭಗೃಹದ ಮೇಲ್ಛಾವಣಿಯ ಮಧ್ಯದಲ್ಲಿ ತ್ರಿದಳದ ಕಮಲವಿದೆ. ಗರ್ಭಗೃಹದ ಮುಂದೆ ಅಂತರಾಳವಿದೆ. ಅಂತರಾಳದ ಬಾಗಿಲು ತ್ರಿಶಾಖಾಲಂಕೃತವಾಗಿದ್ದು, ಬಳ್ಳಿ, ಸ್ತಂಭಶಾಖೆ ಹಾಗೂ ಸರಳಶಾಖೆಯ ಕೆತ್ತನೆಯನ್ನೊಳಗೊಂಡಿದೆ. ಅಂತರಾಳದ ಉತ್ತರಾಂಗವು ಮಕರತೋರಣ ಅಲಂಕೃತವಾಗಿದೆ. ತೋರಣದ ಮಧ್ಯದಲ್ಲಿ ನೃತ್ಯ ನಟರಾಜನ ಉಬ್ಬುಶಿಲ್ಪವಿದೆ. ಜೊತೆಗೆ ಶಿವಗಣಗಳು, ನಂದಿಯನ್ನು ಕೆತ್ತಲಾಗಿದೆ. ಅಂತರಾಳದ ದ್ವಾರದ ಎಡಬಲದಲ್ಲಿ ಎರಡು ಜಾಲಾಂಧ್ರಗಳಿವೆ. ಈ ಜಾಲಾಂಧ್ರದ ಮಧ್ಯದಲ್ಲಿ ಕಮಲದ ಮೊಗ್ಗಿನ ಕೆತ್ತನೆಗಳಿವೆ. ಅಂತರಾಳದ ಮೇಲ್ಛಾವಣಿ ತ್ರಿದಳ ಕಮಲವನ್ನೊಳಗೊಂಡಿದೆ.

ಈ ದೇವಾಲಯದ ಆವರಣದ ಇತರೆ ದೇವಾಲಯಗಳಲ್ಲೂ ಸಹ ಇದೇ ರೀತಿಯಾದ ಗರ್ಭಗೃಹ ಅದರಲ್ಲಿ ಲಿಂಗಗಳನ್ನು ಹೊಂದಿವೆ. ನವರಂಗದಲ್ಲಿ ನಂದಿಯನ್ನು ಒಳಗೊಂಡಿವೆ. ಅಂತರಾಳದ ಮೇಲ್ಛಾವಣಿ ತ್ರಿದಳ ಕಮಲವನ್ನೊಳಗೊಂಡಿದೆ. ಒಟ್ಟಿನಲ್ಲಿ ಸಾಮಾನ್ಯವಾಗಿ ಮೇಲೆ ವಿವರಿಸಿದಂತಿದ್ದು ಕೆಲವು ಬದಲಾವಣೆ ಕಾಣಬಹುದಾಗಿದೆ.[೨೦] ಇಷ್ಟು ಈ ಪಂಚಲಿಂಗೇಶ್ವರ ದೇವಾಲಯದ ವಿಶೇಷತೆಯಾಗಿದೆ.

## ವೈಷ್ಣವ ದೇವಾಲಯ

ವೈಷ್ಣವ ದೇವಾಲಯಗಳು ಸಹ ಶೈವ ದೇವಾಲಯಗಳಂತೆ ತನ್ನದೆ ಆದ ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ವೈಷ್ಣವ ಧರ್ಮವು ಸುಮಾರು ಕ್ರಿ.ಪೂ. ಎರಡನೆಯ ಶತಮಾನದಷ್ಟು ಹಳೆಯದಾದ ಇತಿಹಾಸವನ್ನು ಹೊಂದಿದೆ. ಪ್ರಾರಂಭದಲ್ಲಿ ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ವಿಷ್ಣುವಿನ ಶಿಲ್ಪಗಳು ಹಾಗೂ ಗರುಡ ಸ್ಥಂಭಗಳು ಸ್ಥಾಪನೆಯಾದವು. ಕಾಲನಂತರ ವೈಷ್ಣವ ದೇವಾಲಯಗಳು ನಿರ್ಮಾಣವಾದವು. ಕರ್ನಾಟಕದಲ್ಲಿ ವೈಷ್ಣವ ದೇವಾಲಯಗಳು ಕಂಡುಬರುವುದು ತಲಕಾಡಿನ ಗಂಗರ ಕಾಲದಲ್ಲಿ ನಂತರ ಬಾದಾಮಿ ಚಾಲುಕ್ಯರು ವೈಷ್ಣವ ಪಂಥದ ಅನುಯಾಯಿಗಳಾಗಿದ್ದರು. ಇವರು ಕೆಲವು ಕಡೆ ವಿಷ್ಣು ದೇವಾಲಯಗಳನ್ನು ನಿರ್ಮಿಸಿದ್ದಾರೆ. ತದನಂತರ ರಾಷ್ಟ್ರಕೂಟರ ಕಾಲದಲ್ಲಿ ಅಷ್ಟೇನು ವೈಷ್ಣವ ದೇವಾಲಯವಾಗಲಿ ಅಥವಾ ವಿಷ್ಣುವಿನ ಶಿಲ್ಪಗಳು ಅಲ್ಲಲ್ಲಿ ಕಂಡುಬರುತ್ತವೆ. ಆದರೆ ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಆಳ್ವಿಕೆ ನಡೆಸಿದ ಕಲ್ಯಾಣದ ಚಾಲುಕ್ಯ ಅರಸರು ವೈಷ್ಣವ ಧರ್ಮದ ಪ್ರಗತಿಗೆ ಸಾಕಷ್ಟು ಶ್ರಮಿಸಿದ್ದು ಪ್ರಸ್ತುತ ಪರಿಸರದ ಈ ಕೆಳಗಿನ ಸ್ಥಳಗಳಲ್ಲಿ ವೈಷ್ಣವ ದೇವಾಲಯಗಳು ಕಂಡುಬರುತ್ತವೆ.

ಸಂಖ್ಯೆ : ೦೧

| | | | |
|---|---|---|---|
| ಊರು | : ತೆಂಗಳಿ | ಹೆಸರು | : ಪಾಂಡುರಂಗ |
| ಸ್ಥಳ | : ಊರ ನಡುವೆ | ಕಾಲಮಾನ | : ಕ್ರಿ.ಶ. ೧೧-೧೨ನೇ ಶತಮಾನ |
| ಅಭಿಮುಖ | : ಉತ್ತರ | ಶೈಲಿ | : ಕಲ್ಯಾಣ ಚಾಲುಕ್ಯ |
| ಸ್ಥಿತಿ | : ಕನಿಷ್ಠ | ಸಂರಕ್ಷಣೆ | : ಧಾರ್ಮಿಕ ದತ್ತಿ ಇಲಾಖೆ |

ಪಾಂಡುರಂಗ ದೇವಾಲಯವು ಉತ್ತರಾಭಿಮುಖವಾಗಿದ್ದು, ಮಾನ್ಯಖೇಟದಿಂದ ೧೦ ಕಿ.ಮೀ. ದೂರದಲ್ಲಿದೆ. ಈ ದೇವಾಲಯದ ಒಳಭಾಗವು ಗರ್ಭಗೃಹ, ತೆರೆದ ಅಂತರಾಳ, ನವರಂಗವನ್ನೊಳಗೊಂಡಿದೆ. ಗರ್ಭಗೃಹದಲ್ಲಿ ಪಾಂಡುರಂಗ ರುಕ್ಮಿಣಿಯ ಮೂರ್ತಿಶಿಲ್ಪವಿದೆ. ಗರ್ಭಗೃಹದ ಬಾಗಿಲುವಾಡದ ಲಲಾಟಬಿಂಬವು ಅಲಂಕೃತವಿಲ್ಲದೆ ಮೂಲಸ್ವರೂಪದಲ್ಲಿದೆ. ಗರ್ಭಗೃಹದ ದ್ವಾರದಲ್ಲಿ ದ್ವಾರಪಾಲಕರ ಉಬ್ಬುಶಿಲ್ಪವಿದ್ದು ಕೀರ್ತಿಮುಖಗಳಿಂದ ಅಲಂಕೃತಗೊಂಡಿವೆ. ಗರ್ಭಗೃಹದ ಬಾಗಿಲುವಾಡವು ತ್ರಿಶಾಖಾಲಂಕೃತವಾಗಿದ್ದು, ಸರಳ. ಸ್ತಂಭ ಹಾಗೂ ಸರಳ ಶಾಖೆಯ ಕೆತ್ತನೆಯನ್ನೊಳಗೊಂಡಿದೆ. ಗರ್ಭಗೃಹದ ಉತ್ತರಾಂಗವು ಕಮಲಾಂಕೃತವಾಗಿದೆ.

ಗರ್ಭಗೃಹದಿಂದ ಹೊಸ್ತಿಲು ಕಮಲದ ಅಲಂಕರಣೆಯಿದ್ದು, ಎರಡು ಹೂವುಗಳನ್ನೊಳಗೊಂಡಿದೆ. ಗರ್ಭಗೃಹದ ಮೇಲ್ಛಾವಣಿಯ ಮಧ್ಯದಲ್ಲಿ ತ್ರಿದಳ ಕಮಲವಿದೆ. ಗರ್ಭಗೃಹದ ಮುಂದೆ ತೆರೆದ ಅಂತರಾಳವಿದೆ. ಅಂತರಾಳದ ಮೇಲ್ಛಾವಣಿಯ ಮಧ್ಯದಲ್ಲಿ ದ್ವಿದಳ ಕಮಲವಿದೆ. ಅಂತರಾಳದ ಮುಂದೆ ನವರಂಗವಿದೆ. ನವರಂಗದ ಮಧ್ಯದಲ್ಲಿ ಒಂದೆ ಮಾದರಿಯ ನಾಲ್ಕು ಸ್ತಂಭಗಳಿವೆ. ಈ ಸ್ತಂಭಗಳು, ಪೀಠದ ಮೇಲೆ ಚೌಕ, ಅಷ್ಟ (೩ ಪಟ್ಟಿಗಳಿವೆ) ಮೇಲೇರುತ್ತಾ ಚೌಕಾಕಾರವಾಗಿ ಬೋದಿಗೆ ತೊಲೆ ಹೊತ್ತಿದೆ.

ನವರಂಗದಲ್ಲಿ ಎರಡು ದೇವಕೋಷ್ಟಗಳಿವೆ. ಒಂದು ದೇವಕೋಷ್ಟದಲ್ಲಿ ಗಣೇಶನ ಉಬ್ಬುಶಿಲ್ಪವಿದೆ. ನವರಂಗದ ಭುವನೇಶ್ವರಿ ತ್ರಿದಳ ಕಮಲ, ಅದರ ಸುತ್ತಲೂ ನಕ್ಷತ್ರ ಹಾಗೂ ನಾಲ್ಕು ಕೀರ್ತಿಮುಖಗಳಿಂದ ಅಲಂಕೃತಗೊಂಡಿದೆ. ದೇವಾಲಯದ ಹೊರಭಾಗ ಅಧಿಷ್ಠಾನ ಹಾಗೂ ಭಿತ್ತಿಯನ್ನೊಳಗೊಂಡಿದೆ. ಅಧಿಷ್ಠಾನ ಹಾಗೂ ಭಿತ್ತಿಯ ಯಾವುದೇ ಕೆತ್ತನೆಯನ್ನು ಹೊಂದಿರದೆ ಸರಳತೆಯಿಂದ ಕೂಡಿದೆ.[೨೨]

| | | | |
|---|---|---|---|
| ಸಂಖ್ಯೆ | : ೦೨ | | |
| ಊರು | : ದಿಗ್ಗಾವಿ | ಹೆಸರು | : ಅನಂತಶಯನ |
| ಸ್ಥಳ | : ತುರುಕರ ಓಣಿ | ಕಾಲಮಾನ | : ಕ್ರಿ.ಶ. ೧೧-೧೨ನೇ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ಕಲ್ಯಾಣ ಚಾಲುಕ್ಯ |
| ಸ್ಥಿತಿ | : ಕನಿಷ್ಠ | ಸಂರಕ್ಷಣೆ | : ಧಾರ್ಮಿಕ ದತ್ತಿ ಇಲಾಖೆ |

ಈ ದೇವಾಲಯವು ಮಾನ್ಯಖೇಟದಿಂದ ೨೦ ಕಿ.ಮೀ. ದೂರದ ದಿಗ್ಗಾವಿಯಲ್ಲಿದೆ. ದೇವಾಲಯವು ಭಗ್ನ ಸ್ಥಿತಿಯಲ್ಲಿದ್ದು, ಗರ್ಭಗೃಹ, ಅರ್ಧಮಂಟಪ ಮತ್ತು ನವರಂಗವನ್ನು ಒಳಗೊಂಡಿದೆ. ಗರ್ಭಗೃಹದ ದ್ವಾರವು ಅರ್ಧಗಂಬ ಮತ್ತು ಜ್ಯಾಮಿತಿ ಚಿತ್ರಶಾಖೆಯ ಅಲಂಕರಣದಿಂದ ಕೂಡಿದೆ. ಅರ್ಧಮಂಟಪದ ಪ್ರವೇಶದಲ್ಲಿ ಎರಡು ದುಂಡಾದ ಕಂಬಗಳಿದ್ದು, ರಾಷ್ಟ್ರಕೂಟರ ಶೈಲಿಯಲ್ಲಿವೆ. ನವರಂಗದಲ್ಲಿನ ಕಂಬಗಳು ಚೌಕ ರಚನೆಯವು. ಭುವನೇಶ್ವರಿ ಭಾಗ ಹಾಳಾಗಿದೆ. ಪೂರ್ವ ಮತ್ತು ದಕ್ಷಿಣದಲ್ಲಿ ಪ್ರವೇಶದ್ವಾರಗಳಿವೆ. ಈ ಗುಡಿಯ ಆವರಣದ ಆಗ್ನೇಯ ಮೂಲೆಯಲ್ಲಿ ಕೊಠಡಿಯೊಂದಿದ್ದು, ಭಗ್ನಗೊಂಡಿದೆ.

ಗರ್ಭಗೃಹದಲ್ಲಿ ಅನಂತಶಯನ ಶಿಲ್ಪವಿದೆ. ಪಕ್ಕದಲ್ಲಿ ಲಿಂಗವೊಂದರ ರುದ್ರಭಾಗವಿದೆ. ನವರಂಗದಲ್ಲಿ ಉದ್ದನೆಯ ಪಾಣಿಪೀಠವನ್ನಿಟ್ಟಿದ್ದಾರೆ. ದ್ವಾರಗಳ ಹೊಸ್ತಿಲ ಪಾರ್ಶ್ವಗಳಲ್ಲಿ ಆನೆಶಿರಗಳ ಅಲಂಕರಣವನ್ನು ಕಾಣುತ್ತೇವೆ. ಇಂತಹ ಕಾರಣಗಳಿಂದ ದಿಗ್ಗಾವಿ ಗ್ರಾಮವು ಶೈವ ಮತ್ತು ವೈಷ್ಣವ ದೇವಾಲಯಗಳ ಐತಿಹಾಸಿಕ ಗ್ರಾಮವಾಗಿದೆ. ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರ ಕಲೆಯ ತಾಣವಾಗಿತ್ತು.[೩೩] ಕ್ರಿ.ಶ. ೯ನೆಯ ಶತಮಾನದಿಂದ ಕ್ರಿ.ಶ. ೧೧-೧೨ ಕಾಲಾವಧಿಯಲ್ಲಿ.

ಸಂಖ್ಯೆ : ೦೩
ಊರು : ಕಾಳಗಿ
ಹೆಸರು : ಸೂರ್ಯನಾರಾಯಣ
ಸ್ಥಳ : ಕಾಳೇಶ್ವರ ದೇವಾಲಯದ ಮುಂಭಾಗ
ಕಾಲಮಾನ : ಕ್ರಿ.ಶ. ೧೧-೧೨ನೇ
ಅಭಿಮುಖ : ಪೂರ್ವ
ಶೈಲಿ : ಕಲ್ಯಾಣ ಚಾಲುಕ್ಯ
ಸ್ಥಿತಿ : ಮಧ್ಯಮ
ಸಂರಕ್ಷಣೆ : --

ಕಾಳಗಿಯಲ್ಲಿ ಸೂರ್ಯನಾರಾಯಣ ದೇವಾಲಯವಿದ್ದು, ಇದು ಭಗ್ನಗೊಂಡಿರುವ ವೈಷ್ಣವ ತ್ರಿಕೂಟ ದೇವಾಲಯವಾಗಿದೆ. ಪ್ರತಿ ಗರ್ಭಗೃಹಗಳು ಅರ್ಧಮಂಟಪದಿಂದ ಕೂಡಿವೆ. ನವರಂಗವು ಭಗ್ನಗೊಂಡಿದೆ. ಗರ್ಭಗೃಹಗಳ ಬಾಗಿಲುವಾಡಗಳಲ್ಲಿ ಅರ್ಧಕಂಬ ಮತ್ತು ಲತಾಬಳ್ಳಿಯ ಶಾಖೆಗಳ ಅಲಂಕರಣವಿದೆ. ಹಾಗೂ ತಳದಲ್ಲಿ ದ್ವಾರಪಾಲಕರ ಉಬ್ಬುರಚನೆಯನ್ನು ಕಾಣುತ್ತೇವೆ. ಪೂರ್ವ ಮತ್ತು ಉತ್ತರಾಭಿಮುಖವಾಗಿರುವ ಗರ್ಭಗೃಹಗಳ ಲಲಾಟದಲ್ಲಿ ಕ್ರಮವಾಗಿ ಲಕ್ಷ್ಮಿ ಮತ್ತು ಗಜಲಕ್ಷ್ಮಿಯ ಉಬ್ಬುಶಿಲ್ಪವನ್ನು ಬಿಡಿಸಲಾಗಿದೆ. ಆದರೆ ಪಶ್ಚಿಮಾಭಿಮುಖವಾಗಿರುವ ಗರ್ಭಗೃಹ ದ್ವಾರದ ಲಲಾಟದಲ್ಲಿ ಗಣಪತಿಯ ಉಬ್ಬುಶಿಲ್ಪವಿದೆ. ದ್ವಾರದ ತಳಭಾಗದಲ್ಲಿ ಸಿಂಹವನ್ನು ಕೊಲ್ಲುತ್ತಿರುವ ವೀರನ ಸೂಕ್ಷ್ಮ ಉಬ್ಬುಶಿಲ್ಪಗಳಿವೆ. ಈ ಮಾದರಿಯ ಉಬ್ಬುಶಿಲ್ಪಗಳೇ ಮುಂದೆ ಹೊಯ್ಸಳರ ದೇವಾಲಯಗಳಲ್ಲಿ ಕಂಡುಬರುವ ಸಿಂಹವನ್ನು ಕೊಲ್ಲುತ್ತಿರುವ ಬಿಡಿಶಿಲ್ಪಗಳ ಹುಟ್ಟಿಗೆ ಮೂಲವಾಗಿರಬಹುದು. ಉತ್ತರಾಭಿಮುಖವಾಗಿರುವ ಗರ್ಭಗೃಹದ ಅರ್ಧಮಂಟಪದ ಭುವನೇಶ್ವರಿಯಲ್ಲಿ ನಕ್ಷತ್ರಾಕಾರದ ಬಿಡಿರಚನೆಗಳು ಅಲಂಕರಣವಿದ್ದು ಮಧ್ಯದಲ್ಲಿ ಗುಮ್ಮಟದ ರಚನೆಯಿದೆ.

ದೇವಾಲಯದ ಎತ್ತರದ ಜಗತಿ ಮೇಲಿರುವ ಅಧಿಷ್ಠಾನ ಮತ್ತು ಉಪಾಧಿಷ್ಠಾನದ ಮೇಲಿದೆ. ಹೊರಭಿತ್ತಿಯಲ್ಲಿ ಗೋಡೆಗಂಬಗಳ ರಚನೆಯಿದ್ದು, ಅವುಗಳ ಮೇಲೆ ಶಿಲಾಬಾಲಿಕೆಯರ ವಿವಿಧ ಭಂಗಿಯಲ್ಲಿರುವ ಉಬ್ಬುಶಿಲ್ಪಗಳನ್ನು ಬಿಡಿಸಿದೆ. ದೇವಕೋಷ್ಠಗಳ ಮುಂಭಾಗದಲ್ಲಿ ಸಣ್ಣ ಸ್ತಂಭಗಳನ್ನು ಅಲಂಕರಿಸಲಾಗಿದೆ. ಒಳಭಾಗದಲ್ಲಿ ಬ್ರಹ್ಮ, ವಿಷ್ಣು, ಮತ್ತಿತರ ಶಿಲ್ಪಗಳಿವೆ. ಅಧಿಷ್ಠಾನವು ಜಗತಿ, ಪ್ರತಿ, ಉಪನ, ಕಂಠ, ದ್ವಿಪಟ್ಟ, ಕುಮುದ ಮತ್ತು ಕಪೋತಗಳ ರಚನೆಯಿಂದ ಕೂಡಿದೆ. ಅಧಿಷ್ಠಾನದಲ್ಲಿ ಲತಾಬಳ್ಳಿ ಮತ್ತು ಜ್ಯಾಮಿತಿ ಚಿತ್ರಗಳ ಅಲಂಕರಣವಿದೆ. ಹೀಗಾಗಿ ಮೇಲಿನ ದೇವಾಲಯವು ನೋಡುಗರಿಗೆ ಹೊಯ್ಸಳ ದೇವಾಲಯವಿದ್ದಂತೆ ಕಂಡುಬರುತ್ತದೆ. ಬಹುಶಃ ಹೊಯ್ಸಳ ಶಿಲ್ಪಗಳು ಇಲ್ಲಿಂದಲೆ ಪ್ರೇರಣೆ ಪಡೆದಿರಬಹುದು.

ಉತ್ತರಾಭಿಮುಖವಾಗಿರುವ ಗರ್ಭಗೃಹದಲ್ಲಿ ಲಿಂಗವಿದ್ದು ರುದ್ರ ಭಾಗ ಬೇರೆಯದು. ಪಶ್ಚಿಮಾಭಿಮುಖವಾಗಿರುವ ಗರ್ಭಗೃಹದಲ್ಲಿ ಲಿಂಗದ ಬ್ರಹ್ಮ ಭಾಗ ಮತ್ತು ರುದ್ರ ಭಾಗ ಮಾತ್ರ ಇವೆ. ಇನ್ನೂ ಪೂರ್ವಾಭಿಮುಖವಾಗಿರುವ ಗರ್ಭಗೃಹ ಖಾಲಿಯಿದೆ. ನವರಂಗದ ಮಧ್ಯದಲ್ಲಿ ನಂದಿಶಿಲ್ಪವಿದೆ.[೩೪] ಇಷ್ಟು ಈ ಸೂರ್ಯನಾರಾಯಣ ದೇವಾಲಯದ ವಿಶಿಷ್ಟತೆಯಾಗಿದೆ.

ಸಂಖ್ಯೆ : ೧೪

ಊರು : ನಾಗಾವಿ    ಹೆಸರು : ವಿಷ್ಣು

ಸ್ಥಳ : ಹಳೆ ಊರು    ಕಾಲಮಾನ : ಕ್ರಿ.ಶ. ೧೧–೧೨ನೇ ಶತಮಾನ

ಅಭಿಮುಖ : ಪೂರ್ವ    ಶೈಲಿ : ಕಲ್ಯಾಣ ಚಾಲುಕ್ಯ

ಸ್ಥಿತಿ : ಕನಿಷ್ಠ    ಸಂರಕ್ಷಣೆ : ಧಾರ್ಮಿಕದತ್ತಿ ಇಲಾಖೆ

ಈ ದೇವಾಲಯವು ಗರ್ಭಗೃಹ ಮತ್ತು ಅಂತರಾಳವನ್ನು ಮಾತ್ರ ಹೊಂದಿದೆ. ಗರ್ಭಗೃಹ ದ್ವಾರದ ಮೇಲಿನ ಫಲಕದಲ್ಲಿ ಶಿಖರಗಳ ಸೂಕ್ಷ್ಮ ಮಾದರಿಗಳ ಅಲಂಕರಣಗಳಿವೆ. ಬಾಗಿಲುವಾಡಗಳಲ್ಲಿ ಸಿಂಹಗಳು ಮತ್ತು ಲತಾಬಳ್ಳಿಗಳ ಶಾಖೆಗಳಿದ್ದು, ಅರ್ಧಗಂಬಗಳ ಅಲಂಕರಣದಿಂದ ಕೂಡಿವೆ. ತಳಭಾಗದಲ್ಲಿ ವೈಷ್ಣವ ದ್ವಾರಪಾಲಕರು ಮತ್ತು ಚಾಮರದಾರಿ ಸ್ತ್ರೀಯರ ಉಬ್ಬುರಚನೆಗಳಿವೆ. ಅಂತರಾಳ ದ್ವಾರದ ಅರ್ಧಗಂಬಗಳಲ್ಲಿ ಕಳಸ ಹಿಡಿದ ಸ್ತ್ರೀಯರ ಮಧ್ಯಗಾತ್ರದ ಉಬ್ಬುಶಿಲ್ಪಗಳನ್ನು ಬಿಡಿಸಲಾಗಿದೆ. ಈ ಉಬ್ಬುಶಿಲ್ಪಗಳು ತ್ರಿಭಂಗಿಯಲ್ಲಿವೆ. ದ್ವಾರದ ಇಕ್ಕೆಲಗಳಲ್ಲಿ ಲತಾಬಳ್ಳಿಗಳ ಜಾಲಾಂಧ್ರಗಳನ್ನು ಬಿಡಿಸಿದೆ. ದ್ವಾರದ ಮೇಲಿನ ಮಕರತೋರಣ ಫಲಕದಲ್ಲಿ ವಿಷ್ಣುವಿನ ಉಬ್ಬುಶಿಲ್ಪವಿದ್ದು, ತಳದಲ್ಲಿ ಗರುಡ ಸಂಗೀತಗಾರರ ಸೂಕ್ಷ್ಮ ಉಬ್ಬುಶಿಲ್ಪಗಳಿವೆ. ಅಂತರಾಳದ ಮುಂಭಾಗದಲ್ಲಿ ಇತ್ತೀಚಿಗೆ ನಿರ್ಮಿಸಿದ ಕಮಾನಿನ ರಚನೆಯಿದೆ. ಹೊರಭಿತ್ತಿಯನ್ನು ಸಹ ಜೀರ್ಣೋದ್ಧಾರಗೊಳಿಸಿದ್ದಾರೆ.

ಗರ್ಭಗೃಹದಲ್ಲಿ ಎತ್ತರವಾದ ಪಾಣಿಪೀಠವಿದೆ. ಇಲ್ಲಿ ಇತರೆ ಯಾವುದೇ ಅವಶೇಷಗಳು ಕಂಡುಬರುವುದಿಲ್ಲ.[೩೫]

ಸಂಖ್ಯೆ : ೧೫

ಊರು : ರಾವೂರು    ಹೆಸರು : ಅನಂತಶಯನ

ಸ್ಥಳ : ವೆಂಕಟೇಶ್ವರ ಗುಡಿ ಪಕ್ಕ    ಕಾಲಮಾನ: ಕ್ರಿ.ಶ. ೧೧–೧೨ನೇ ಶತಮಾನ

ಅಭಿಮುಖ : –––    ಶೈಲಿ : ಕಲ್ಯಾಣ ಚಾಲುಕ್ಯ

ಸ್ಥಿತಿ : ಕನಿಷ್ಠ    ಸಂರಕ್ಷಣೆ : ––

ರಾವೂರು ಮಾನ್ಯಖೇಟದಿಂದ ೨೦ ಕಿ.ಮೀ. ಅಂತರದಲ್ಲಿದೆ. ಇಲ್ಲಿರುವ ಅನಂತಶಯನ ದೇವಾಲಯವು ಜೀರ್ಣೋದ್ಧಾರಗೊಂಡಿರುವ ದೇವಾಲಯವಿದ್ದು ಗರ್ಭಗೃಹ ಮತ್ತು ಅಂತರಾಳವನ್ನು ಒಳಗೊಂಡಿದ್ದು ಸರಳ ರಚನೆಯದು. ಅಂತರಾಳ ದ್ವಾರದ ಬಲ ಬಾಗಿಲುವಾಡದಲ್ಲಿ ಮಾತ್ರ ಅರ್ಧಕಂಬದ ಉಬ್ಬುರಚನೆಯಿದೆ. ದ್ವಾರದ ಮೇಲಿರುವ ಫಲಕದಲ್ಲಿ ಸಿಂಹ ಮತ್ತು ನಾಗರ ಶಿಖರಗಳಿವೆ. ಸೂಕ್ಷ್ಮ ಕೆತ್ತನೆಯ ಅಲಂಕರಣವನ್ನು ಕಾಣಬಹುದು. ಈ ದೇವಾಲಯದ ಗರ್ಭಗೃಹದಲ್ಲಿ ಅನಂತಶಯನ ಶಿಲ್ಪವಿದೆ.[೩೬]

ಸಂಖ್ಯೆ : ೧೬

ಊರು : ಕಾಳಗಿ    ಹೆಸರು : ನರಸಿಂಹ ತೀರ್ಥ

ಸ್ಥಳ : ಹಳ್ಳದ ಪಕ್ಕ
ಅಭಿಮುಖ : ಪಶ್ಚಿಮ
ಸ್ಥಿತಿ : ಮಧ್ಯಮ

ಕಾಲಮಾನ : ಕ್ರಿ.ಶ. ೧೧-೧೨ನೇ ಶತಮಾನ
ಶೈಲಿ : ಕಲ್ಯಾಣ ಚಾಲುಕ್ಯ
ಸಂರಕ್ಷಣೆ : ಧಾರ್ಮಿಕ ದತ್ತಿ ಇಲಾಖೆ

ಇದು ನೀರಿನ ಬುಗ್ಗೆಯ ಕೊಳದ ನಡುವೆ ಇರುವ ಪುಟ್ಟ ದೇವಾಲಯ. ಈ ಕೊಳವನ್ನು ನರಸಿಂಹ ತೀರ್ಥವೆನ್ನುತ್ತಾರೆ. ದೇವಾಲಯವು ನಕ್ಷತ್ರಾಕಾರದ ಜಗತಿಯ ಮೇಲೆ ಅಧಿಷ್ಠಾನ ನಿರ್ಮಾಣಗೊಂಡಿದೆ. ನಾಲ್ಕು ದಿಕ್ಕುಗಳಲ್ಲಿ ದ್ವಾರಗಳನ್ನು ಹೊಂದಿರುವ ಗರ್ಭಗೃಹ ಮತ್ತು ನಾಲ್ಕು ದಿಕ್ಕುಗಳಲ್ಲಿ ಚಿಕ್ಕದಾದ ಮುಖಮಂಟಪಗಳನ್ನು ಹೊಂದಿದೆ. ಅಧಿಷ್ಠಾನದ ರೀತಿಯಲ್ಲೇ ಭಿತ್ತಿಯು ನಿರ್ಮಾಣಗೊಂಡಿದ್ದು, ಮೇಲಿನ ಶಿಖರ ಭಗ್ನಗೊಂಡಿದೆ. ಇತ್ತೀಚಿಗೆ ಕೊಳದ ಸುತ್ತಲೂ ಕಲ್ಲಿನ ಪ್ರಾಕಾರ ಗೋಡೆಯನ್ನು ನಿರ್ಮಿಸಿದ್ದಾರೆ. ಈ ನೀರನ್ನು ಕುಡಿಯಲು ಒದಗಿಸುತ್ತಿದ್ದಾರೆ.

ಇಲ್ಲಿನ ಹೆಚ್ಚುವರಿ ನೀರನ್ನು ಮುಂದಕ್ಕೆ ಹರಿಸುವ ಮೂಲಕ ಕೃಷಿಗೂ ಬಳಕೆಯಾಗುತ್ತಿದೆ. ಅಲಂಕಾರಿಕ ಮತ್ತು ಪಾವಿತ್ರತೆಯ ದೃಷ್ಟಿಯಿಂದ ನೀರಿನ ಬುಗ್ಗೆಯ ನಡುವೆ ನಿರ್ಮಿಸಿರುವ ಈ ದೇವಾಲಯವು ಜಲದೇಗುಲವೆನಿಸಿದೆ. ಇಂತಹ ವಿಶೇಷತೆಯಿಂದ ಕೂಡಿರುವುದರಿಂದ ಇದು ಅತ್ಯಂತ ಮಹತ್ವದ ತೀರ್ಥ ಸ್ಥಳವಾಗಿದೆ.[೩೭]

**ಶಾಕ್ತ ದೇವಾಲಯಗಳು**

ಮಾತೃ ದೇವತೆಯ ರೂಪದಲ್ಲಿರುವ ಶಕ್ತಿ ದೇವತೆಯನ್ನು ಆರಾಧಿಸುವ ಪಂಥವನ್ನು ಶಾಕ್ತಪಂಥವೆಂದು ಕರೆಯುತ್ತೇವೆ. ಭಾರತದಲ್ಲಿ ಶಾಕ್ತಪಂಥದ ಚರಿತ್ರೆಯನ್ನು ಸಿಂಧೂ ಸಂಸ್ಕೃತಿಯಿಂದ ಗುರುತಿಸಲಾಗಿದೆ. ಮುಖ್ಯವಾಗಿ ಹರಪ್ಪ, ಕಾಲಿಬಂಗಾನ್, ಮಹೆಂಜೋದಾರೋ ಮೊದಲಾದ ಸ್ಥಳಗಳಲ್ಲಿ ನಡೆಸಿದ ಉತ್ಖನನದಿಂದ ಮಾತೃರೂಪದ ದೇವತೆಗಳು ದೊರೆತವು. ಇವುಗಳ ಆಧಾರದಿಂದ ಶಾಕ್ತಶಿಲ್ಪಗಳ ಆರಾಧನೆ ಎಂಬುದು ಸಿಂಧೂ ಸಂಸ್ಕೃತಿಯಿಂದಲೇ ಬೆಳೆದುಬಂದಿದೆ ಎಂದು ಹೇಳಬಹುದು. ನಂತರ ವೈದಿಕ ಕಾಲದ ಅಂತ್ಯದಲ್ಲಿ ಶಕ್ತಿದೇವತೆಯ ಆರಾಧನೆ ಪ್ರಾರಂಭವಾಯಿತು. ಶಾಕ್ತರ ಆರಾಧ್ಯ ದೇವತೆಯಾದ ಶಕ್ತಿದೇವತೆಯನ್ನು ಅನೇಕ ಹೆಸರುಗಳಿಂದ ಕರೆಯಲಾಗಿದೆ. ಶಾಕ್ತ ದೇವತೆಗಳಲ್ಲಿ ಮುಖ್ಯವಾಗಿ ಲಕ್ಷ್ಮಿ, ಸರಸ್ವತಿ, ಪಾರ್ವತಿ ಸಪ್ತಮಾತೃಕೆಯರು ಇತ್ಯಾದಿ ದೇವತೆಗಳು ಕಂಡುಬರುವರು.[೩೮] ಈ ಶಾಕ್ತಶಿಲ್ಪಗಳ ರಕ್ಷಣೆಗಾಗಿ ಪ್ರಾಚೀನ ಕಾಲದಲ್ಲಿ ಸ್ತ್ರೀ ದೇವತೆಗೆ ಅಥವಾ ಶಾಕ್ತ ದೇವತೆಗೆ ದೇವಾಲಯಗಳು ಇಡೀ ಭಾರತದ ತುಂಬೆಲ್ಲಾ ನಿರ್ಮಾಣವಾದವು. ಅದೇ ರೀತಿ ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಈ ಕೆಳಗಿನ ಸ್ಥಳಗಳಲ್ಲಿ ದೇವಾಲಯಗಳು ನಿರ್ಮಾಣವಾದವು.

ಸಂಖ್ಯೆ : ೦೧
ಊರು : ಕೊಡ್ಲಾ

ಹೆಸರು : ಚೌಡಮಾಯೆ ಶಾಕ್ತ

| | | | |
|---|---|---|---|
| ಸ್ಥಳ | : ಸೇಡಂ ರಸ್ತೆ | ಕಾಲಮಾನ | : ಕ್ರಿ.ಶ. ೯–೧೦ನೇ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ರಾಷ್ಟ್ರಕೂಟ |
| ಸ್ಥಿತಿ | : ಮಧ್ಯಮ | ಸಂರಕ್ಷಣೆ | : ಧಾರ್ಮಿಕ ದತ್ತಿ ಇಲಾಖೆ |

ಕೊಡ್ಲಾ ಗ್ರಾಮವು ಒಂದು ಐತಿಹಾಸಿಕ ಸ್ಥಳವಾಗಿದೆ. ಮಾನ್ಯಖೇಟದಿಂದ ೨೦ ಕಿ.ಮೀ. ದೂರದ ಅಂತರದಲ್ಲಿದೆ. ಈ ಚೌಡಮಾಯೆ ದೇವಾಲಯದ ಕುರಿತು ಹೇಳುವುದಾದರೆ ದಿಣ್ಣೆಯ ಮೇಲಿರುವ ದೇವಾಲಯ ಇತ್ತೀಚಿನದು. ಆದರೆ ಗರ್ಭಗೃಹದಲ್ಲಿರುವ ಭೈರವಿಯ ಶಿಲ್ಪ ಪ್ರಾಚೀನವಾಗಿದೆ. ದೇವಿಯು ರುಂಡದ ಮೇಲೆ ಕುಳಿತಿದ್ದು, ಕೈಗಳಲ್ಲಿ ಖಡ್ಗ, ಕಪಾಲ ಮತ್ತಿತರ ಆಯುಧಗಳನ್ನು ಹಿಡಿದಿದ್ದಾಳೆ. ಪಾಣಿಪೀಠದಲ್ಲಿ ಸಿಂಹ ಲಾಂಛನವಿದೆ. ದೇವಾಲಯದ ಹೊರಭಾಗದಲ್ಲಿ ಉಮಾಮಹೇಶ್ವರ, ನಾಗ, ಸ್ತ್ರೀ ಉಬ್ಬುಶಿಲ್ಪವಿರುವ ಸಣ್ಣ ಕಲ್ಲಿನ ಫಲಕ ಹಾಗೂ ಇತರ ಭಗ್ನ ಶಿಲ್ಪಾವಶೇಷಗಳಿವೆ. ಈ ದೇವಾಲಯದ ಪಕ್ಕದಲ್ಲಿ ಹಾಳು ಗುಡಿ ಇದ್ದು, ಒಳಗೆ ನಂದಿ ಮತ್ತು ನಾಗಶಿಲ್ಪಗಳು ಕಂಡುಬರುತ್ತವೆ. ಈ ದೇವಾಲಯ ಅಷ್ಟೇನು ಪ್ರಾಚೀನವಲ್ಲ. ಭಿತ್ತಿ ಸುಣ್ಣದ ಕಲ್ಲಿನದಾಗಿದ್ದು, ಭಗ್ನಸ್ಥಿತಿಯಲ್ಲಿದೆ.

ದಿಣ್ಣೆಯ ಮುಂಭಾಗದಲ್ಲಿ ಮೆಟ್ಟಿಲುಗಳ ಸಮೀಪ ಸುಣ್ಣದಕಲ್ಲಿನ ಶಿಲ್ಪ ಫಲಕದಲ್ಲಿ ಕಲಶ ಇಕ್ಕೆಲಗಳಲ್ಲಿ ಸ್ತ್ರೀ ಪ್ರತಿಮೆ ತಲೆ ಮೇಲೆ ನಾಗಶಿಲ್ಪದ ಅಲಂಕರಣವನ್ನು ಕೆಳಗೆ ಏಳು ಹೆಡೆಗಳ ನಾಗಶಿಲ್ಪದ ಅಲಂಕರಣವಿರುವ ನಾಗರಾಜನ ಉಬ್ಬು ರಚನೆಗಳನ್ನು ಕಾಣುತ್ತೇವೆ. ಇನ್ನೊಂದು ಸುಣ್ಣದಕಲ್ಲಿನ ಶಿಲ್ಪಫಲಕದಲ್ಲಿ ಬಿಲ್ಲು ಬಾಣ ಹಿಡಿದ ವೀರನ ಉಬ್ಬುಶಿಲ್ಪವಿದೆ.[೩೯] ಚೌಡಮಾಯೆ ದೇವಾಲಯವು ರಾಷ್ಟ್ರಕೂಟರ ಕಾಲದಲ್ಲಿ ಅತ್ಯಂತ ಪ್ರಾಮುಖ್ಯತೆ ಪಡೆದ ಶಾಕ್ತ ದೇವಾಲಯವಾಗಿತ್ತು.

| | | | |
|---|---|---|---|
| ಸಂಖ್ಯೆ | : ೦೨ | | |
| ಊರು | : ಸನ್ನತಿ | ಹೆಸರು | : ಚಂದ್ರಲಾ ಪರಮೇಶ್ವರಿ |
| ಸ್ಥಳ | : ನದಿ ದಂಡೆ | ಕಾಲಮಾನ | : ಕ್ರಿ.ಶ. ೧೦ನೇ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ರಾಷ್ಟ್ರಕೂಟ |
| ಸ್ಥಿತಿ | : ಮಧ್ಯಮ | ಸಂರಕ್ಷಣೆ | : ಧಾರ್ಮಿಕದತ್ತಿ ಇಲಾಖೆ |

ಪ್ರಸ್ತುತ ಪರಿಸರದ ಸನ್ನತಿಯು ಪ್ರಾಚೀನ ಬೌದ್ಧ ನೆಲೆ, ಔತ್ತರೇಯ ಕಾಂತಿಯುಕ್ತ ಕಪ್ಪು ಮಡಿಕೆಯ ಸಾಂಸ್ಕೃತಿಕ ನೆಲೆಯೂ ಹೌದು. ಇದು ಮಾನ್ಯಖೇಟದಿಂದ ೪೦ ಕಿ.ಮೀ. ದೂರದಲ್ಲಿದೆ. ಇಲ್ಲಿ ಅಶೋಕನ ಶಿಲಾಶಾಸನವು ದೊರೆತಿದೆ. ಭೀಮಾ ನದಿ ದಂಡೆಯಲ್ಲಿರುವ ಚಂದ್ರಲಾ ಪರಮೇಶ್ವರಿ ದೇವಾಲಯವು ಈ ಭಾಗದ ಪ್ರಸಿದ್ಧ ಶಕ್ತಿ ಪೀಠ. ದೇವಾಲಯವು ಗರ್ಭಗೃಹ, ಅರ್ಧಮಂಟಪ, ನವರಂಗ ಮತ್ತು ಸಭಾಮಂಟಪದಿಂದ ಕೂಡಿದೆ. ಕಾಲಕಾಲಕ್ಕೆ ಜೀರ್ಣೋದ್ಧಾರಗೊಂಡಿದೆ. ಆದರೂ ತನ್ನ ಪ್ರಾಚೀನತೆಯ ಕುರುಹುಗಳನ್ನು ಉಳಿಸಿಕೊಂಡಿದೆ.

ಗರ್ಭಗೃಹ ದ್ವಾರ ಅರ್ಧಗಂಬಗಳ ಸರಳ ಅಲಂಕರಣದ ರಚನೆ ನವರಂಗದಲ್ಲಿರುವ ಕಂಬಗಳು ರಾಷ್ಟ್ರಕೂಟರ ಶೈಲಿಯವು. ಚೌಕ ಮತ್ತು ತರಂಗ ಬೋದಿಗೆ ಅಲಂಕರಣದ ಬೋದಿಗೆ ಪೀಠಗಳು ದುಂಡಾಗಿದ್ದು, ಬಹುಮುಖ ಅಲಂಕರಣದಿಂದ ಕೂಡಿದೆ. ಚೌಕಮುಖಗಳಲ್ಲಿ ಕೀರ್ತಿಮುಖ ಮತ್ತು ಹಾರಗಳ ಅಲಂಕರಣವಿದೆ. ಹಾರಗಳೊಳಗೆ ಉಬ್ಬುಶಿಲ್ಪಗಳಿವೆ. ಸಂಗೀತ ನುಡಿಸುವ, ನಾಣ್ಯ ಮಾಡುವ, ದಂಪತಿ, ತಾಯಿ ಮತ್ತು ಮಗು ಹಾಗೂ ದೇವತೆಗಳ ಉಬ್ಬುಶಿಲ್ಪಗಳಿವೆ. ಸಭಾಮಂಟಪದಲ್ಲಿ ನವರಂಗದ ರೀತಿಯ ಚೌಕ ಕಂಬಗಳಿವೆ. ಸುತ್ತಲೂ ಪ್ರಾಕಾರಮಂಟಪದ ಸಾಲನ್ನು ಕಾಣಬಹುದು. ಅದು ಜೀರ್ಣೋದ್ಧಾರಗೊಂಡಿದೆ.

ಮುಂದಿರುವ ಪ್ರವೇಶಮಂಟಪದಲ್ಲಿ ಸಾಲುಕಂಬ ಅಥವಾ ಕಂಬದ ಸಾಲನ್ನು ಕಾಣುತ್ತೇವೆ. ಮುಂಭಾಗದಲ್ಲಿ ಇತ್ತೀಚಿಗೆ ಮಹಾದ್ವಾರ ಗೋಪುರವನ್ನು ನಿರ್ಮಿಸಿದ್ದಾರೆ. ಅದು ಮಧ್ಯಕಾಲದ ರಚನೆ ಎನ್ನಬಹುದಾದ ಹೊರ ಭಿತ್ತಿಯು ಪ್ರಾಚೀನ ಅಧಿಷ್ಠಾನದ ಮೇಲಿದೆ. ಗರ್ಭಗೃಹದ ಮೇಲೆ ಗಾರೆಯಿಂದ ನಿರ್ಮಿಸಿದ ಕಮಲದ ರಚನೆಯ ಶಿಖರವಿದೆ. ಸಭಾಮಂಟಪದ ಮುಂಭಾಗದಲ್ಲಿ ಎರಡು ದೀಪಸ್ತಂಭಗಳಿವೆ. ಗರ್ಭಗೃಹದಲ್ಲಿ ದೇವಿಶಿಲ್ಪವಿದೆ.[೪೦]

| | | | |
|---|---|---|---|
| ಸಂಖ್ಯೆ | : ೦೩ | | |
| ಊರು | : ಸನ್ನತಿ | ಹೆಸರು | : ಮಹಾಕಾಳಿ |
| ಸ್ಥಳ | : ನದಿ ದಂಡೆ | ಕಾಲಮಾನ | : ಕ್ರಿ.ಶ. ೧೧–೧೨ನೇ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ಕಲ್ಯಾಣ ಚಾಲುಕ್ಯ |
| ಸ್ಥಿತಿ | : ಮಧ್ಯಮ | ಸಂರಕ್ಷಣೆ | : ಧಾರ್ಮಿಕದತ್ತಿ ಇಲಾಖೆ |

ಈ ಮಹಾಕಾಳಿ ಶಾಕ್ತ ದೇವಾಲಯವು ಸನ್ನತಿಯ ಚಂದ್ರಲಾ ಪರಮೇಶ್ವರಿ ದೇವಾಲಯಕ್ಕೆ ಸಮಾನಾಂತರವಾಗಿ ಮಹಾಕಾಳಿ ದೇವಾಲಯವಿದೆ. ಈ ದೇವಾಲಯವು ಗರ್ಭಗೃಹ ಮತ್ತು ನವರಂಗದಿಂದ ಕೂಡಿದ್ದು, ಜೀರ್ಣೋದ್ಧಾರಗೊಂಡಿರುವುದನ್ನು ಕಾಣಬಹುದು. ಗರ್ಭಗೃಹದಲ್ಲಿರುವ ಭೈರವಿ ಶಿಲ್ಪ ಪ್ರಾಚೀನವಾದದ್ದು. ಮೊದಲಿಗೆ ಅಶೋಕನ ಶಾಸನವಿದ್ದ ಶಿಲಾ ಚಪ್ಪಡಿಯನ್ನು ಪಾಣಿಪೀಠವನ್ನಾಗಿ ದೇವಿಯನ್ನು ಕೂರಿಸಲಾಗಿತ್ತು. ನಂತರ ಶಾಸನ ಬೆಳಕಿಗೆ ಬಂದ ಮೇಲೆ ದೇವಿಯನ್ನು ಬೇರೆ ಪೀಠದ ಮೇಲೆ ಕೂಡಿಸಿದ್ದಾರೆ. ನವರಂಗದಲ್ಲಿ ಪ್ರಾಚೀನ ಭೈರವಿ ಶಿಲ್ಪವಿದೆ. ನವರಂಗದ ಪಶ್ಚಿಮ ಭಾಗದಲ್ಲಿ ಸಣ್ಣ ಕೊಠಡಿ ಇದ್ದು ಗಣೇಶ ಶಿಲ್ಪವಿದೆ. ಈ ಕೊಠಡಿಯ ದ್ವಾರ ಪ್ರಾಚೀನ ರಚನೆಯಾಗಿದೆ. ದೇವಾಲಯದ ಒಳಭಾಗ ಮತ್ತು ಹೊರಭಿತ್ತಿ ಜೀರ್ಣೋದ್ಧಾರಗೊಂಡಿದೆ.[೪೧] ಇಷ್ಟು ಈ ಮಹಾಕಾಳಿ ದೇವಾಲಯದ ವಿಶೇಷತೆಯಾಗಿದೆ.

| | | | |
|---|---|---|---|
| ಸಂಖ್ಯೆ | : ೦೪ | | |
| ಊರು | : ದಿಗ್ಗಾವಿ | ಹೆಸರು | : ಬ್ರಹ್ಮಲಾಂಬಿಕೆ |
| ಸ್ಥಳ | : ಶಂಭುಲಿಂಗೇಶ್ವರ ದೇವಾಲಯದ ಆವರಣ | | |

ಕಾಲಮಾನ : ಕ್ರಿ.ಶ. ೧೦-೧೧ನೇ ಶತಮಾನ

ಅಭಿಮುಖ : ಉತ್ತರ ಶೈಲಿ : ಕಲ್ಯಾಣ ಚಾಲುಕ್ಯ

ಸ್ಥಿತಿ : ಕನಿಷ್ಠ ಸಂರಕ್ಷಣೆ : ಧಾರ್ಮಿಕದತ್ತಿ ಇಲಾಖೆ

ಈ ಬ್ರಹ್ಮಲಾಂಬಿಕೆ ಶಾಕ್ತ ದೇವಾಲಯವು ಮಾನ್ಯಖೇಟದಿಂದ ೧೦ ಕಿ.ಮೀ. ಅಂತರದಲ್ಲಿರುವ ಐತಿಹಾಸಿಕ ದಿಗ್ಗಾವಿ ಗ್ರಾಮದ ಶಂಭುಲಿಂಗೇಶ್ವರ ದೇವಾಲಯದ ಆವರಣದ ದಕ್ಷಿಣ ಭಾಗದಲ್ಲಿರುವ ತ್ರಿಕೂಟ ಶಾಕ್ತ ದೇವಾಲಯವಿದು. ಉತ್ತರದಲ್ಲಿ ಪ್ರವೇಶ ದ್ವಾರವಿರುವ ಈ ದೇವಾಲಯವು ಮೂರು ಗರ್ಭಗೃಹ, ಅವುಗಳಿಗೆ ಹೊಂದಿಕೊಂಡಂತೆ ಅರ್ಧಮಂಟಪಗಳು ಹಾಗೂ ನವರಂಗವನ್ನು ಒಳಗೊಂಡಿದೆ. ದಕ್ಷಿಣ ಭಾಗದಲ್ಲಿರುವ ಗರ್ಭಗೃಹ ಭಗ್ನಗೊಂಡಿದೆ. ಪಶ್ಚಿಮದಲಲ್ಲಿರುವ ಗರ್ಭಗೃಹ ದ್ವಾರವು ಅರ್ಧಕಂಬ, ದ್ವಾರಪಾಲಕರು, ಚಾಮರಧಾರಿ ಸ್ತ್ರೀಯರ ಉಬ್ಬುರಚನೆಗಳಿಂದ ರೂಡಿದೆ. ಲಲಾಟದಲ್ಲಿ ಗಜಲಕ್ಷ್ಮಿ ಉಬ್ಬುಶಿಲ್ಪವಿದೆ. ಪೂರ್ವದ ಗರ್ಭಗೃಹ ದ್ವಾರದಲ್ಲಿ ಅರ್ಧಕಂಬ, ದ್ವಾರಪಾಲಕರು, ಚಾಮರಧಾರಿ ಸ್ತ್ರೀಯರು ಹಾಗೂ ಲಲಾಟ ಭಾಗದಲ್ಲಿ ಗಜಲಕ್ಷ್ಮಿಯ ಉಬ್ಬು ರಚನೆಗಳಿವೆ. ನವರಂಗದ ನಡುವೆ ಇರುವ ಕಂಬಗಳು ಗಿಡ್ಡಗಿದ್ದು, ಸಣ್ಣ ಗಾತ್ರದ ಕಂಬಗಳು ಚೌಕಮುಖ ಮತ್ತು ಅಷ್ಟಮುಖ ಪಟ್ಟಿಯ ಅಲಂಕರಣದವು. ನವರಂಗದ ಪಶ್ಚಿಮ ಅಂಕಣದಲ್ಲಿ ದೇವಕೋಷ್ಠಗಳಿವೆ. ಭುವನೇಶ್ವರಿಯಲ್ಲಿ ನಕ್ಷತ್ರಾಕಾರದ ಗುಮ್ಮಟದ ಅಲಂಕರಣವನ್ನು ಕಾಣಬಹುದು.

ಪಶ್ಚಿಮ ಪೂರ್ವ ಗರ್ಭಗೃಹಗಳ ಮೇಲೆ ಮೆಟ್ಟಿಲಾಕಾರದ ಕಳಿಂಗನಾಗರ ಶೈಲಿಯ ಶಿಖರಗಳಿವೆ. ಇದರಲ್ಲಿ ಪೂರ್ವಗೃಹದ ಮೇಲಿರುವ ಶಿಖರವು ಸುಖನಾಸದಿಂದ ಕೂಡಿದೆ. ದಕ್ಷಿಣ ಗರ್ಭಗೃಹದಲ್ಲಿ ಲಿಂಗವಿದ್ದು, ಹಿಂಭಾಗದಲ್ಲಿರುವ ಪಾಣಿಪೀಠದಲ್ಲಿ ಬ್ರಹ್ಮಶಿಲ್ಪವಿದೆ. (ಐದುಮುಖ) ತಳದಲ್ಲಿ ಸ್ತ್ರೀ ಮತ್ತು ಹಂಸದ ಉಬ್ಬುಶಿಲ್ಪಗಳಿವೆ. ಪಶ್ಚಿಮದ ಗರ್ಭಗೃಹದಲ್ಲಿ ಪಾಣಿಪೀಠದಲ್ಲಿ ರುದ್ರಭಾಗವನ್ನಿರಿಸಿದ್ದಾರೆ. ಪೂರ್ವ ಗರ್ಭಗೃಹದಲ್ಲಿ ಸ್ವಯಂಭೂ ಲಿಂಗವಿದೆ.

ಈ ಶಾಕ್ತ ದೇವಾಲಯದ ಪಶ್ಚಿಮದಲ್ಲಿ ಕೊಳ ಮತ್ತು ಚಿಕ್ಕ ಗುಡಿಯೊಂದಿದೆ. ಈ ಗುಡಿಯ ಗರ್ಭಗೃಹ ಮತ್ತು ಅರ್ಧಮಂಟಪದಿಂದ ಒರಟು ರಚನೆಯಿಂದ ಕೂಡಿದೆ. ಗರ್ಭಗೃಹದಲ್ಲಿ ಕುಳಿತಿರುವ ದೇವಿಯ ಶಿಲ್ಪವಿದೆ. ಇದೆ ಸ್ಥಳದ ಈಶಾನ್ಯ ಭಾಗದಲ್ಲಿ ಮತ್ತೊಂದು ಗುಡಿಯಿದ್ದು, ಗರ್ಭಗೃಹ ಮತ್ತು ಅರ್ಧಮಂಪಟದಿಂದ ಕೂಡಿದೆ. ಅಧಿಷ್ಠಾನದ ಮೇಲಿರುವ ದೇವಾಲಯದ ಹೊರಭಿತ್ತಿಯಲ್ಲಿ ಅರ್ಧಕಂಬಗಳ ಅಲಂಕರಣವಿದೆ. ಗರ್ಭಗೃಹದ ಮೇಲಿರುವ ದ್ವಿತಲ ಶಿಖರವು ಕೂಡು ಮತ್ತು ಶಾಲಾ ರಚನೆಯಿಂದ ಮತ್ತು ಸುಖನಾಸವನ್ನು ಒಳಗೊಂಡಿದೆ. ಶಿಖರ ಸ್ತೂಪಿ ಹಾಳಾಗಿದೆ. ಸುಣ್ಣಕಲ್ಲಿನ ಈ ಶಿಖರದ ರಚನೆ ಈ ಪರಿಸರದಲ್ಲಿ ಅಪರೂಪದ್ದು ಎನ್ನಲಾಗಿದೆ.[೪೨]

## ಇತರೆ ಪಂಥದ ದೇವಾಲಯಗಳು

ಮಾನ್ಯಖೇಟ ಪರಿಸರದಲ್ಲಿ ಶೈವ, ವೈಷ್ಣವ, ಶಾಕ್ತ ದೇವಾಲಯಗಳು ಹಾಗೂ ಜೈನ ಬಸದಿಗಳು ಕಂಡುಬರುವಂತೆ ಇತರೆ ಪಂಥಕ್ಕೆ ಸೇರಿದ ಬೌದ್ಧ ವಿಹಾರ, ಸ್ತೂಪಗಳು ಪ್ರಾಚೀನ

ಕಾಲದಿಂದಲೂ ಕಂಡುಬರುತ್ತವೆ. ಅದೇ ರೀತಿ ೧೩ ಮತ್ತು ೧೪ನೆಯ ಶತಮಾನದಲ್ಲಿ ಇದೇ ಪರಿಸರದಲ್ಲಿ ಇಸ್ಲಾಂ ಧರ್ಮದ ಮಸೀದಿಗಳು ಕಂಡುಬರುತ್ತವೆ. ೧೩ ಮತ್ತು ೧೪ನೇ ಶತಮಾನದಲ್ಲೆ ಉತ್ತರ ಭಾರತದಿಂದ ಪ್ರಸ್ತುತ ಪರಿಸರಕ್ಕೆ ಸೂಫೀ ಸಂತರು ಬರುವುದರ ಮೂಲಕ ಸೂಫೀ ಪಂಥವು ಮಾನ್ಯಖೇಟ ಪರಿಸರದಲ್ಲಿ ತನ್ನದೇ ಆದ ಕೊಡುಗೆ ನೀಡಿ ಮಸೀದಿಗಳು ನಿರ್ಮಾಣ ಮಾಡಿರುವುದು ಈ ಕೆಳಗೆ ಕಾಣಬಹುದು. ಸೂಫೀ ಸಂತರಲ್ಲಿ ಪ್ರಮುಖರು ಬಂದೇನವಾಜ್ ಎಂಬ ಹೆಸರಿನಿಂದ ಪ್ರಸಿದ್ಧವಾದ ಹಜರತ್ ಖಾಜಾ ಬಂದೆ ನವಾಜ್ ಹಾಗೂ ಮಾನ್ಯಖೇಟ ಕಲಾಪತ್ ರಹೇಮನ್‌ರು ಪ್ರಮುಖರಾಗಿದ್ದಾರೆ.

### ಬೌದ್ಧ ಸ್ತೂಪ

ಕನಗನಹಳ್ಳಿ ಭೀಮಾನದಿಯ ಎಡದಂಡೆಯ ಮೇಲಿದೆ. ಚಂದ್ರಲಾಂಬ ದೇವಾಲಯಕ್ಕೆ ಪ್ರಸಿದ್ಧವಾಗಿರುವ ಹಾಗೂ ಅಶೋಕನ ಶಾಸನಗಳು ದೊರೆತಿರುವ ಪ್ರಾಚೀನ ನೆಲೆ. ಇದು ಸನ್ನತಿಗೆ ೩ ಕಿ.ಮೀ. ದೂರದಲ್ಲಿದೆ. ಈ ಕನಗನಹಳ್ಳಿಯ ಉತ್ಖನನದ ಅತಿ ಮುಖ್ಯ ಅವಶೇಷವೆಂದರೆ ೭೫ ಅಡಿಗಳಷ್ಟು ವ್ಯಾಸವುಳ್ಳ ಮಹಾಸ್ತೂಪ. ಈ ವ್ಯಾಸಕ್ಕೆ ತಕ್ಕಂತೆ ಅದರ ಎತ್ತರವೂ ಇದ್ದಿರಬೇಕು.[೪೩] ಇದು ಬೌದ್ಧ ಧರ್ಮದ ಪೂಜಾ ಸ್ಥಳವಾಗಿತ್ತು. ಶೈವ ಮತ್ತು ವೈಷ್ಣವ ಧರ್ಮದಂತೆ ಎಂಬುವ ಅಂಶವು ತಿಳಿದುಬರುತ್ತದೆ. ಇದು ಕ್ರಿ.ಶ. ಆರಂಭದ ಕಾಲಾವಧಿಯಲ್ಲಿ ಮೌರ್ಯರು ಅಥವಾ ಶಾತವಾಹನರ ಆಳ್ವಿಕೆಯಲ್ಲಿ ನಿರ್ಮಾಣವಾಗಿತ್ತು.[೪೪]

### ಇಸ್ಲಾಂ ಮಸೀದಿಗಳು

ಇಸ್ಲಾಂ ಧರ್ಮಕ್ಕೆ ಸಂಬಂಧಿಸಿದ ಅನೇಕ ಮಸೀದಿಗಳು ಕೋಟೆ ಕೊತ್ತಲಗಳು ಇಲ್ಲಿ ಕಂಡುಬರುತ್ತವೆ. ಕ್ರಿ.ಶ. ೧೨ನೆಯ ಶತಮಾನದ ಯಾವುದೇ ಮಸೀದಿಗಳು ಕಂಡುಬರುವುದಿಲ್ಲ. ಆದರೆ ಬಹುಮನಿಯರ ಆಳ್ವಿಕೆಯ ಸಮಯದಲ್ಲಿ ಮಾನ್ಯಖೇಟ ದಂಡೋತಿ, ಸೇಡಂನಲ್ಲಿ ಇಸ್ಲಾಂ ಶೈಲಿಯಿಂದ ಕೂಡಿದ ಇಸ್ಲಾಂ ಮಸೀದಿಗಳು ಕಂಡುಬರುತ್ತವೆ. ಅವುಗಳಲ್ಲಿ ಪ್ರಮುಖವಾದದ್ದು ಮಾನ್ಯಖೇಟದ ಕೋಟೆ ಒಳಗಡೆ ಇರುವ ಜುಮ್ಮ ಮಸೀದಿ ಹಾಗೂ ಅಷ್ಗರ್‌ಖಾನಗಳಿದ್ದು ವಿಶೇಷವಾಗಿದೆ. ದಂಡೋತಿಯಲ್ಲಿ ಜೌಡ್‌ಕಂಡ್ ಸಾಬ್ ದರ್ಗಾ (ಮಸೀದಿ) ಇದು ಕೂಡ ಪ್ರಸ್ತುತ ಅಧ್ಯಯನ ಪರಿಸರದ ಜುಮ್ಮ ಮಸೀದಿಯಾಗಿದ್ದು ಮುಸಲ್ಮಾನರಿಗೆ ವಿಶೇಷ ಸ್ಥಳವಾಗಿದೆ.[೪೫]

### ಸೂಫಿ ಪಂಥ

ಸೂಫಿ ಪಂಥವು ಶೈವ, ವೈಷ್ಣವ, ಜೈನ ಧರ್ಮಗಳಂತೆ ತನ್ನದೇ ಆದ ಪ್ರಾಮುಖ್ಯತೆ ಪಡೆದ ಪಂಥವಾಗಿದೆ. ಇದು ಉತ್ತರ ಭಾರತದಲ್ಲಿ ಇಸ್ಲಾಂರ ಆಳ್ವಿಕೆಯಲ್ಲಿ ಪ್ರಾರಂಭವಾದಂತಹ ಧರ್ಮವಾಗಿದೆ. ಇದು ಸಮಾನತೆ ಮತ್ತು ಸಹೋದರತೆಯ ಮೇಲೆ ಸ್ಥಾಪನೆಯಾದ ಪಂಥವಾಗಿದೆ. ಉತ್ತರ ಭಾರತದಲ್ಲಿ ಈ ಪಂಥವು ಕ್ರಿ.ಶ. ೧೪ನೆಯ ಶತಮಾನದಲ್ಲಿ ಹಜರತ್ ಖಾನ್ ಬಂದೆ ನವಾಜ್ ಅವರ ಮೂಲಕ ಬಹುಮನಿ ಸಾಮ್ರಾಜ್ಯದ ಫಿರೋಜ್ ಷಾ ಬಹುಮನಿಯ

ಆಳ್ವಿಕೆಯ ಕಾಲಾವಧಿಯಲ್ಲಿ ಬಂದನು. ನಂತರ ಪ್ರಸ್ತುತ ಪರಿಸರದ ಕಡೆ ಕೆಲವು ಸೂಫಿ ಸಂತರ ಉಗಮಕ್ಕೆ ಕಾರಣವಾಗಿ ಚಿತ್ತಾಪೂರದ ಚಿತ್ತಾವಲಿ, ಮಾನ್ಯಖೇಟದ ಖಲಿಫತರ್ ರಹೆಮಾನ್ ಪ್ರಮುಖ ಸೂಫಿ ಸಂತರಾಗಿ ಅನೇಕ ಪವಾಡಗಳನ್ನು ನಡೆಸಿ ಬಡ ಬಗ್ಗರ ರಕ್ಷಕರು ರೋಗರುಜಿನಗಳ ನಿವಾರಕರು ಹಾಗಿದ್ದರು. ೧೪ನೆಯ ಶತಮಾನದ ಮಹಾನ್ ಸಾಮಾಜಿಕ ಕಾಳಜಿಯ ಸುಧಾರಣೆಗಳ ಸಹಾಯಕರಾಗಿದ್ದರು.

**ಜೈನ ಬಸದಿಗಳು**

ಈ ಧರ್ಮದಲ್ಲಿ ೨೪ ತೀರ್ಥಂಕರರಿದ್ದಾರೆಂದು ಮತ್ತು ಮೊದಲ ತೀರ್ಥಂಕರನಾದ ವೃಷಭನಾಥನು ಜೈನ ಧರ್ಮವನ್ನು ಸ್ಥಾಪಿಸಿದನೆಂದು ಜೈನರು ನಂಬುತ್ತಾರೆ. ೨೩ನೇ ತೀರ್ಥಂಕರ ಪಾರ್ಶ್ವನಾಥ ೨೪ನೇ ತೀರ್ಥಂಕರ ಮಹಾವೀರರಾಗಿದ್ದಾರೆ. 'ಸ್ವಸ್ತಿಕ್' ಜೈನ ಧರ್ಮದ ಪವಿತ್ರ ಚಿಹ್ನೆಯಾಗಿದೆ. ಈ ಜೈನ ಧರ್ಮವು ಉತ್ತರ ಭಾರತದಿಂದ ಕ್ರಿ.ಪೂ. ೩ನೆಯ ಶತಮಾನದಲ್ಲಿ ಮೌರ್ಯ ಸಾಮ್ರಾಟನಾದ ಚಂದ್ರಗುಪ್ತ ಮೌರ್ಯನು ಜೈನಮುನಿಯಾದ ಭದ್ರಬಾಹುವಿನೊಂದಿಗೆ ಕರ್ನಾಟಕದ ಶ್ರವಣಗೊಳಕ್ಕೆ ಬರುವುದರ ಮುಖಾಂತರ ಕರ್ನಾಟಕದಲ್ಲಿ ಜೈನಧರ್ಮದ ಪ್ರಾಚೀನತೆಯು ಪ್ರಾರಂಭವಾಯಿತು. ನಂತರದಲ್ಲಿ ಕರ್ನಾಟಕದ ಇತರೆಡೆಗೆ ಪಸರಿಸಿತು. ಗಂಗರ ಕಾಲದಲ್ಲಿ ಉನ್ನತ ಸ್ಥಿತಿಯನ್ನು ತಲುಪಿ ಕರ್ನಾಟಕದಲ್ಲಿ ತಳ ಊರಿತು. ತದನಂತರ ರಾಷ್ಟ್ರಕೂಟರ ಆಳ್ವಿಕೆಯಲ್ಲಿ ತನ್ನದೇ ಆದ ಸಾಂಸ್ಕೃತಿಕ ಕೊಡುಗೆ ನೀಡಿರುವುದು ಮತ್ತು ಜೈನ ಧರ್ಮಕ್ಕೆ ರಾಷ್ಟ್ರಕೂಟರ ಅರಸರು ಸಾಮ್ರಾಜ್ಯದಲ್ಲಿ ರಾಜಾಶ್ರಯ ನೀಡಿರುವುದರಿಂದ ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಜೈನ ಧರ್ಮಕ್ಕೆ ಸಂಬಂಧಿಸಿದ ಜೈನ ಬಸದಿಗಳು, ಜೈನ ಶಾಸನಗಳು ರಚನೆಯಾದವು.

| | | | |
|---|---|---|---|
| ಸಂಖ್ಯೆ | : ೦೧ | | |
| ಊರು | : ಮಾನ್ಯಖೇಟ | ಹೆಸರು | : ಮಲ್ಲಿನಾಥ ದಿಗಂಬರ ಜೈನ ಬಸದಿ |
| ಸ್ಥಳ | : ಊರಿನ ನಡುವೆ | ಕಾಲಮಾನ | : ಕ್ರಿ.ಶ. ೯ನೆಯ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ರಾಷ್ಟ್ರಕೂಟ |
| ಸ್ಥಿತಿ | : ಮಧ್ಯಮ | ಸಂರಕ್ಷಣೆ | : ಧಾರ್ಮಿಕದತ್ತಿ ಇಲಾಖೆ |

ಈ ಮಲ್ಲಿನಾಥ ದಿಗಂಬರ ಜೈನ ಬಸದಿಯು ಪ್ರಸ್ತುತ ಅಧ್ಯಯನದ ರಾಷ್ಟ್ರಕೂಟರ ರಾಜಧಾನಿಯಾದ ಮಾನ್ಯಖೇಟದಲ್ಲಿದೆ. ಇದು ಈ ಕಾಲಾವಧಿಯ ಪ್ರಮುಖ ಜೈನ ದಿಗಂಬರ ಬಸದಿಯಾಗಿದೆ. ಬಸದಿಯು ನವೀಕರಣಗೊಂಡಿದ್ದು ಗರ್ಭಗೃಹ, ನವರಂಗ ಮತ್ತು ತೆರೆದ ಮುಖಮಂಟಪವನ್ನು ಒಳಗೊಂಡಿದೆ. ಗರ್ಭಗೃಹ ದ್ವಾರವು ಅರ್ಧಗಂಬ, ಇತರೆ ಅಲಂಕಾರಿಕ ಶಾಖೆಗಳನ್ನು ಹೊಂದಿದ್ದು, ತಳದಲ್ಲಿ ದ್ವಾರಪಾಲಕರ, ಚಾಮರಧಾರಿ ಸ್ತ್ರೀಯರ ಉಬ್ಬುರಚನೆಗಳಿವೆ. ನವರಂಗದ ಮಧ್ಯದ ಕಂಬಗಳು ಗಿಡ್ಡದಾಗಿದ್ದು, ಚೌಕ ಮುಖಗಳಲ್ಲಿ ದೇವತೆಗಳ ಉಬ್ಬುಶಿಲ್ಪಗಳನ್ನು ಇಳಿಬಿದ್ದ ಹಾರಗಳು ಆವರಿಸಿವೆ. ನವರಂಗದ ಪ್ರವೇಶದ್ವಾರದಲ್ಲಿ ಜಿನಬಿಂಬವಿದೆ. ಬಾಗಿಲುವಾಡಗಳು

ಅರ್ಧಗಂಬ, ಸಿಂಹ ಮತ್ತು ಲತಾಬಳ್ಳಿ ಶಾಖೆಗಳಿಂದ ಕೂಡಿವೆ. ತಳಭಾಗದಲ್ಲಿ ದ್ವಾರಪಾಲಕರ ಮತ್ತು ಚಾಮರಧಾರಿ ಸ್ತ್ರೀಯರ ಉಬ್ಬುಶಿಲ್ಪಗಳಿವೆ. ಮುಖಮಂಟಪದಲ್ಲಿರುವ ಕಂಬಗಳ ಮೇಲೂ ದೇವತೆಗಳ ಉಬ್ಬುರಚನೆಗಳಿವೆ. ಮುಖಮಂಟಪದ ಎದುರು ಭಾಗದಲ್ಲಿ ಒಂದಂಕಣದ ಮಂಟಪವಿದ್ದು, ಮೇಲೆ ಉಪ್ಪರಿಗೆಯನ್ನು ನಿರ್ಮಿಸಲಾಗಿದೆ.

ಗರ್ಭಗೃಹದಲ್ಲಿ ಅಮೃತ ಶಿಲೆಯ ಮಲ್ಲಿನಾಥನ ಶಿಲ್ಪವಿದ್ದು, ಎತ್ತರವಾದ ಪೀಠದ ಮೇಲಿದೆ. ಬ್ರಹ್ಮ, ಸರಸ್ವತಿ, ಪಾರ್ಶ್ವನಾಥ ಮತ್ತಿತರ ಜೈನ ಬಿಡಿಶಿಲ್ಪಗಳಿವೆ. ಈ ಬಸದಿಯ ಮುಂಭಾಗದಲ್ಲಿರುವ ದೇಗುಲದಲ್ಲಿ, ಪದ್ಮಾವತಿ, ಕಾಳಿಕ, ದರ್ಣೇಂದ್ರನ ಬೃಹತ್ ಶಿಲ್ಪಗಳು ಕಂಡುಬರುತ್ತವೆ. ಈಗಲೂ ಕೂಡ ಈ ಬಸದಿಯಲ್ಲಿ ಜೈನ ಮುನಿಗಳಿದ್ದಾರೆ.[೪೬]

| | | | |
|---|---|---|---|
| ಸಂಖ್ಯೆ | : ೦೨ | | |
| ಊರು | : ಬಟಗೇರ | ಹೆಸರು | : ಜೈನ ಬಸದಿ |
| ಸ್ಥಳ | : ಊರಿನ ನಡುವೆ | ಕಾಲಮಾನ | : ಕ್ರಿ.ಶ. ೯–೧೦ನೇ ಶತಮಾನ |
| ಅಭಿಮುಖ | : ಉತ್ತರ | ಶೈಲಿ | : ರಾಷ್ಟ್ರಕೂಟ |
| ಸ್ಥಿತಿ | : ಭಗ್ನ | ಸಂರಕ್ಷಣೆ | : -- |

ಈ ಐತಿಹಾಸಿಕ ಬಟಗೇರ ಗ್ರಾಮವು ಮಾನ್ಯಖೇಟದಿಂದ ೩೦ ಕಿ.ಮೀ. ದೂರದಲ್ಲಿದೆ. ಇಲ್ಲಿ ರಾಷ್ಟ್ರಕೂಟರ ಕಾಲಕ್ಕೆ ಸೇರಿದ ಅನೇಕ ದೇವಾಲಯಗಳಿವೆ. ಅದರಲ್ಲಿ ಜೈನ ಬಸದಿಯು ಒಂದು. ಈ ಜೈನ ಬಸದಿಯು ತೀವ್ರವಾಗಿ ಭಗ್ನಗೊಂಡಿರುವ ಬಸದಿ ಅಷ್ಟೇನು ಪ್ರಾಚೀನವಲ್ಲ. ಆದರೆ ಒಳಗಿರುವ ತೀರ್ಥಂಕರ ಶಿಲ್ಪ ಪ್ರಾಚೀನವಾಗಿದ್ದು, ವಿಶೇಷ ರಚನೆಯದು. ಅಂದರೆ ಶಿಲ್ಪವು ನಮ್ಮ ಶೈಲಿಯಲ್ಲಿದ್ದು, ತಲೆಗೆ ವಿನ್ಯಾಸವುಳ್ಳ ವಸ್ತ್ರವನ್ನು ಸುತ್ತಿರುವಂತೆ ಕಡೆಯಲಾಗಿದೆ. ಉದ್ದನೆಯ ಕಿವಿಗಳನ್ನು ಹೊಂದಿರುವ ಶಿಲ್ಪ ಅಪರೂಪದ ರಚನೆ ಎನ್ನಬಹುದು. ಇದರ ಸಂರಕ್ಷಣೆಯಾಗಬೇಕಿದೆ.

ಈ ಶಿಲ್ಪದೊಂದಿಗೆ ಭಗ್ನಗೊಂಡಿರುವ ಮಹಿಷಮರ್ಧಿನಿ ಶಿಲ್ಪ ಮತ್ತು ಸವೆದ ಭೈರವನ ಶಿಲ್ಪಗಳಿವೆ. ಇವುಗಳನ್ನು ಹೊರಗಿನಿಂದ ತಂದಿರಿಸಿದಂತೆ ಕಾಣುತ್ತದೆ.[೪೭]

| | | | |
|---|---|---|---|
| ಸಂಖ್ಯೆ | : ೦೩ | | |
| ಊರು | : ದಂಡೋತಿ | ಹೆಸರು | : ಪಾರ್ಶ್ವನಾಥ ಬಸದಿ |
| ಸ್ಥಳ | : ಪಠಾಣರ ಓಣಿ | ಕಾಲಮಾನ | : ಕ್ರಿ.ಶ. ೧೦–೧೧ನೆಯ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ಕಲ್ಯಾಣ ಚಾಲುಕ್ಯ |
| ಸ್ಥಿತಿ | : ಕನಿಷ್ಠ | ಸಂರಕ್ಷಣೆ | : -- |

ಪ್ರಸ್ತುತ ಬಸದಿಯು ಪೂರ್ವಾಭಿಮುಖವಾಗಿದ್ದು, ಮಾನ್ಯಖೇಟದಿಂದ ೬ ಕಿ.ಮೀ. ದೂರದಲ್ಲಿದೆ. ಬಸದಿಯ ಒಳಭಾಗವು ೩ ಗರ್ಭಗೃಹಗಳು, ೩ ತೆರೆದ ಅಂತರಾಳಗಳು, ಒಂದು ನವರಂಗ,

ಮುಖಮಂಟಪ, ಕಕ್ಷಾಸನವನ್ನೊಳಗೊಂಡಿದೆ. ಮೂರು ಗರ್ಭಗೃಹಗಳಲ್ಲಿ ಯಾವುದೇ ಮೂರ್ತಿಶಿಲ್ಪಗಳಿಲ್ಲ. ಇದೇ ಊರಿನ ವೀರಭದ್ರನ ಗುಡಿಯ ಮುಂದೆ ತೃಟಿತಗೊಂಡ ಜೈನಮೂರ್ತಿ ಶಿಲ್ಪವು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತಿದೆ. ಈ ಜೈನ ಬಸದಿಯ ಪಕ್ಕದಲ್ಲಿ ಉರುಳಿ ಬಿದ್ದಂತಹ ಕಲ್ಲುಗಳ ಮಧ್ಯದಲ್ಲಿ ಖಡ್ಗಾಸನದಲ್ಲಿ ನಿಂತಿರುವ ತೃಟಿತ ಪಾರ್ಶ್ವನಾಥನ ಶಿಲ್ಪವು ಬಿದ್ದಿದೆ. ಅದೂ ಕೂಡ ಎದೆಯ ಕೆಳಭಾಗದಲ್ಲಿ ಒಡೆದು ಹೋಗಿದೆ.

ಈ ಬಸದಿಯ ಗರ್ಭಗೃಹದ ಬಾಗಿಲುವಾಡದ ಲಲಾಟಬಿಂಬದಲ್ಲಿ ಪರ್ಯಂಕಾಸನದಲ್ಲಿ ಕುಳಿತ ಜಿನ ಬಿಂಬವಿದೆ. ಗರ್ಭಗೃಹಗಳ ದ್ವಾರದ ಎಡಬಲದಲ್ಲಿ ಪೂರ್ಣಕುಂಭದ ಉಬ್ಬುಶಿಲ್ಪವಿದೆ. ಗರ್ಭಗೃಹಗಳ ಬಾಗಿಲುವಾಡುವು ತ್ರಿಶಾಖಾಂಲಂಕೃತವಾಗಿದ್ದು, ಸರಳ, ಸ್ತಂಭ ಸರಳ ಶಾಖೆಯ ತೋರಣಗಳನ್ನೊಳಗೊಂಡಿದೆ. ಗರ್ಭಗೃಹಗಳ ಉತ್ತರಾಂಗವು ಕಮಲದಿಂದ ಕೂಡಿದ್ದು, ಅದರ ಮೇಲೆ ೩ ಕಿರು ಶಿಖರಗಳ ತೋರಣಗಳಿವೆ. ಪೂರ್ವ ಹಾಗೂ ದಕ್ಷಿಣದ ಗರ್ಭಗೃಹಗಳ ಮೇಲ್ಛಾವಣಿ, ಭಿತ್ತಿಯು ಮುರಿದು ಹೋಗಿದೆ. ಉತ್ತರದ ಗರ್ಭಗೃಹದ ಮೇಲ್ಛಾವಣಿಯ ಮಧ್ಯದಲ್ಲಿ ತ್ರಿದಳ ಕಮಲದ ಕೆತ್ತನೆಯಿದೆ. ಗರ್ಭಗೃಹಗಳ ಮುಂದೆ ತೆರೆದ ಅಂತರಾಳ ಪೂರ್ವ ಹಾಗೂ ದಕ್ಷಿಣದ ಅಂತರಾಳಗಳ ಮೇಲ್ಛಾವಣಿಗಳ ಸ್ತಂಭಗಳು ಸಹ ಮುರಿದು ಹೋಗಿವೆ. ಉತ್ತರದ ಅಂತರಾಳದಲ್ಲಿ ಒಂದೆ ಮಾದರಿಯ ೨ ಸ್ತಂಭಗಳಿವೆ. ಈ ಸ್ತಂಭಗಳು ಪೀಠದ ಮೇಲೆ ಚೌಕದ, ಅಷ್ಟ, ವೃತ್ತ, ಅಷ್ಟ, ವೃತ್ತ, ಅಷ್ಟ, ಮೇಲೆರುತ್ತಾ ಚೌಕಾಕಾರವಾಗಿ, ಲತಾಸುರುಳಿ, ಬೋದಿಗೆ ತೊಲೆಯನ್ನು ಹೊತ್ತಿದೆ. (ಈ ಸ್ತಂಭಗಳ ಅಗಲ ಬಹಳ ಸಣ್ಣದಾಗಿದೆ) ಅಂತರಾಳದ ಮೇಲ್ಛಾವಣಿಯಲ್ಲಿ ತ್ರಿದಳ ಕಮಲದ ಕೆತ್ತನೆ ಇದೆ. ಮುಂದೆ ನವರಂಗವಿದೆ. ನವರಂಗದ ಮಧ್ಯದಲ್ಲಿ ಒಂದೇ ಮಾದರಿಯ ನಾಲ್ಕು ಸ್ತಂಭಗಳಿವೆ.

ಈ ಸ್ತಂಭಗಳು ಅಂತರಾಳದ ಸ್ತಂಭಗಳ ಮಾದರಿಯಲ್ಲಿಯೇ ಇದ್ದು, ಗಾತ್ರದಲ್ಲಿ ಅಗಲವಾಗಿವೆ. ನವರಂಗದ ಮೇಲ್ಛಾವಣಿಯ ಮಧ್ಯದಲ್ಲಿ ತ್ರಿದಳ ಕಮಲದ ಕೆತ್ತನೆಯಿದೆ. ನವರಂಗದ ಮುಂದೆ ಮುಖಮಂಟಪವು ಕಕ್ಷಾಸನವನ್ನೊಳಗೊಂಡಿದೆ. ಮುಖಮಂಟಪದಲ್ಲಿ ಒಂದೇ ಮಾದರಿಯ ೨ ಅರ್ಧ ಸ್ತಂಭಗಳಿವೆ. ಈ ಸ್ತಂಭಗಳು ಅಷ್ಟಕೋನದ ಪೀಠ ಮೇಲೇರುತ್ತ ಚೌಕಾಕಾರವಾಗಿ, ಲತಾಸುರುಳಿ ಬೋದಿಗೆ ತೊಲೆ ಹೊತ್ತಿದ, ಮುಖಮಂಟಪದ ಮೇಲ್ಛಾವಣಿಯ ಮಧ್ಯದಲ್ಲಿ ಕಮಲದ ಕೆತ್ತನೆಯಿದೆ. ಬಸದಿಯ ಹೊರಭಾಗವು ಅಧಿಷ್ಠಾನ ಹಾಗೂ ಭಿತ್ತಿಯನ್ನೊಳಗೊಂಡಿದೆ. ಅಧಿಷ್ಠಾನ ಹಾಗೂ ಭಿತ್ತಿ ಯಾವುದೇ ಕೆತ್ತನೆಯನ್ನೊಳಗೊಂಡಿಲ್ಲ. ಮೇಲ್ಭಾಗದ ಶಿಖರ ಇಲ್ಲದಾಗಿದೆ. ಪ್ರಸ್ತುತ ಬಸದಿಯು ಜೀರ್ಣಾವಸ್ಥೆಯಲ್ಲಿದೆ. ಸದ್ಯಕ್ಕೆ ಈ ಬಸದಿಯನ್ನು ಸ್ಥಳೀಯರು ಧನದ ಮೇವನ್ನು ಶೇಖರಿಸುವ ಸ್ಥಳವಾಗಿ ಬಳಸಿಕೊಳ್ಳುತ್ತಾರೆ.[೪೮] ಜೈನ ಧರ್ಮದವರು ಸಹ ಈ ಗ್ರಾಮದಲ್ಲಿ ಇಲ್ಲ. ಹೀಗಾಗಿ ಬಸದಿಗೆ ಯಾವುದೇ ಸಂರಕ್ಷಣೆ ಇಲ್ಲದಂತಾಗಿದೆ. ಇದು ಮಾನ್ಯಖೇಟ ಪರಿಸರದ ಪ್ರಮುಖ ಪಾರ್ಶ್ವನಾಥ ಜೈನ ಬಸದಿಯಾಗಿದೆ.

ಸಂಖ್ಯೆ : ೦೪

| | | | |
|---|---|---|---|
| ಊರು | : ಸೇಡಂ | ಹೆಸರು | : ಶಾಂತಿನಾಥ ಬಸದಿ |
| ಸ್ಥಳ | : ಹಳಕಟ್ಟಿ ಓಣಿ | ಕಾಲಮಾನ | : ಕ್ರಿ.ಶ. ೧೧-೧೨ನೆಯ ಶತಮಾನ |
| ಅಭಿಮುಖ | : ಉತ್ತರ | ಶೈಲಿ | : ಕಲ್ಯಾಣ ಚಾಲುಕ್ಯ |
| ಸ್ಥಿತಿ | : ಮಧ್ಯಮ | ಸಂರಕ್ಷಣೆ | : ಧಾರ್ಮಿಕದತ್ತಿ ಇಲಾಖೆ |

ಶಾಂತಿನಾಥ ಜೈನ ಬಸದಿಯು ಉತ್ತರಾಭಿಮುಖವಾಗಿದ್ದು ಮಾನ್ಯಖೇಟದಿಂದ ಪೂರ್ವಕ್ಕೆ ೧೨ ಕಿ.ಮೀ. ಅಂತರದಲ್ಲಿದೆ. ಬಸದಿಯ ಒಳಭಾಗ ಗರ್ಭಗೃಹ, ನವರಂಗ ಹಾಗೂ ಮುಖಮಂಟಪವನ್ನೊಳಗೊಂಡಿದೆ. ಬಸದಿಯ ಗರ್ಭಗೃಹದಲ್ಲಿ ಖಡ್ಗಾಸನದಲ್ಲಿ ನಿಂತ ಪಾರ್ಶ್ವನಾಥ ಮೂರ್ತಿಶಿಲ್ಪವಿದ್ದು, ಬಾಗಿಲುವಾಡದ ಲಲಾಟಬಿಂಬದಲ್ಲಿ ತೀರ್ಥಂಕರನ ಪದ್ಮಾಸೀನ ಉಬ್ಬುಶಿಲ್ಪವಿದೆ. ಗರ್ಭಗೃಹದ ಬಾಗಿಲುವಾಡವು ಸರಳವಾಗಿದ್ದು, ವಜ್ರಾಕೃತಿಯ ಕೆತ್ತನೆಯಿಂದ ಕೂಡಿದೆ. ನವರಂಗದಲ್ಲಿ ಎಂಟು ಸ್ತಂಭಗಳಿದ್ದು, ವೈವಿಧ್ಯತೆಯಿಂದ ಕೂಡಿದೆ. ಪೀಠದ ಮೇಲೆ ಚೌಕ, ಅಷ್ಟದ ಮೇಲೆ ವೃತ್ತಾಕಾರ ಹಾಗೂ ಅಷ್ಟದ ಮೇಲೆ ಚೌಕ, ಮೇಲೇರುತ್ತಾ ಲತಾಸುರುಳಿ, ಬೋದಿಗೆಯನ್ನು ಹೊತ್ತಿದೆ. ಅಲ್ಲದೆ ಪೀಠದ ಮೇಲೆ ಚೌಕ, ಅದರ ಮೇಲೆ ವೃತ್ತ, ಮೇಲೇರುತ್ತಾ ವಿವಿಧ ಚೌಕಾಕಾರದ ಬೋದಿಗೆಯನ್ನು ಹೊತ್ತಿದೆ. ಮತ್ತು ಪೀಠದ ಮೇಲೆ ಚೌಕ, ಅಷ್ಟದ ಮೇಲೆ ಚೌಕ, ಮೇಲೇರುತ್ತಾ ಕಮಲದ ಕೆತ್ತನೆಯಿಂದ ಕೂಡಿದ ಬೋದಿಗೆ ತೊಲೆ ಹೊತ್ತಿದೆ. ನವರಂಗದ ಮೇಲ್ಛಾವಣಿಯು ಷಟಕೋನಾಕೃತಿಯಲ್ಲಿದ್ದು, ಮಧ್ಯ ಅರಳಿದ ಕಮಲವಿದೆ.

ಬಸದಿಯ ನವರಂಗದ ಪ್ರಧಾನ ದ್ವಾರದ ಲಲಾಟಬಿಂಬದಲ್ಲಿ ಪದ್ಮಾಸೀನ ಜಿನನ ಉಬ್ಬುಶಿಲ್ಪವಿದೆ. ನವರಂಗದ ಬಾಗಿಲುವಾಡುವು ಚತುರ್ಶಾಲಂಕೃತವಾಗಿದ್ದು, ಹೂವು, ಬಳ್ಳಿ, ಸ್ತಂಭಶಾಖೆ, ವಜ್ರಾಕೃತಿಯ ಕೆತ್ತನೆಯನ್ನೊಳಗೊಂಡಿದೆ. ನವರಂಗದ ಮುಂದೆ ಮುಖಮಂಟಪವಿದೆ. ಮುಖಮಂಟಪದಲ್ಲಿ ನಾಲ್ಕು ಸ್ತಂಭಗಳಿವೆ. ಮೊದಲಿನ ಎರಡು ಸ್ತಂಭಗಳ ಮೇಲೆ ಶಿಲಾಶಾಸನಗಳಿವೆ. ಉಳಿದ ಎರಡು ಸ್ತಂಭಗಳು ಪೀಠದ ಮೇಲೆ ಚೌಕ, ಅಷ್ಟ ಮೇಲೇರುತ್ತಾ ಅಷ್ಟಕೋನಾಕೃತಿ ಹಾಗೂ ಲತಾಸುರುಳಿ ಬೋದಿಗೆ ಮೇಲೆ ಹೊತ್ತಿದ ಮುಖಮಂಟಪ ಮೇಲ್ಛಾವಣಿ ಕಮಲದ ಕೆತ್ತನೆಯನ್ನೊಳಗೊಂಡಿದೆ. ಬಸದಿಯ ಹೊರಭಾಗ ಅಧಿಷ್ಠಾನ, ಭಿತ್ತಿಯನ್ನೊಳಗೊಂಡಿದೆ. ಅಧಿಷ್ಠಾನ ಹಾಗೂ ಭಿತ್ತಿ ಯಾವುದೇ ಕೆತ್ತನೆಯನ್ನೊಳಗೊಂಡಿಲ್ಲ.[೪೯]

ಸಂಖ್ಯೆ : ೦೫

| | | | |
|---|---|---|---|
| ಊರು | : ಕಾಳಗಿ | ಹೆಸರು | : ಜೈನ ಬಸದಿ |
| ಸ್ಥಳ | : ದೇವಾಂಗ ಓಣಿ | ಕಾಲಮಾನ | : ಕ್ರಿ.ಶ. ೧೧-೧೨ನೆಯ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ಕಲ್ಯಾಣ ಚಾಲುಕ್ಯ |
| ಸ್ಥಿತಿ | : ಕನಿಷ್ಠ | ಸಂರಕ್ಷಣೆ | : -- |

ಈ ಜೈನ ಬಸದಿಯು ಪ್ರಸ್ತುತ ಅಧ್ಯಯನ ಪರಿಸರದ ಒಂದು ಪ್ರಮುಖ ಜೈನ ಬಸದಿಯಾಗಿದೆ. ಇದು ಕಲ್ಯಾಣ ಚಾಲುಕ್ಯರ ಆಳ್ವಿಕೆಯಲ್ಲಿ ನಿರ್ಮಾಣವಾದಂತಹ ಬಸದಿಯಾಗಿದೆ. ಈ ಜೈನ ಬಸದಿಯು ತ್ರಿಕೂಟ ರಚನೆಯದು ಪ್ರಧಾನ ಗರ್ಭಗೃಹ ಸೇರಿದಂತೆ ಮೂರು ಗರ್ಭಗೃಹಗಳು ಮತ್ತು ಅರ್ಧಮಂಟಪಗಳಿಂದ ಕೂಡಿವೆ. ಇವುಗಳಿಗೆ ಹೊಂದಿಕೊಂಡಂತೆ ನವರಂಗವಿದ್ದು, ಪೂರ್ವದಲ್ಲಿ ಪ್ರವೇಶಮಂಟಪವಿದೆ. ಬಾಗಿಲುವಾಡಗಳಲ್ಲಿ ಸಿಂಹ, ಸೂಕ್ಷ್ಮ ಶಿಲ್ಪಗಳು ಮತ್ತು ಜ್ಯಾಮಿತಿ ಚಿತ್ರಗಳ ಅಲಂಕಾರಿಕ ಶಾಖೆಗಳನ್ನು ಬಿಡಿಸಲಾಗಿದೆ. ಜೊತೆಗೆ ಅರ್ಧಗಂಬಗಳ ರಚನೆಯು ಇದೆ. ಅರ್ಧಮಂಟಪಗಳ ಪ್ರವೇಶದಲ್ಲಿ ಸಣ್ಣ ಗಾತ್ರದ ಕಂಬಗಳೆರಡನ್ನು ನಿಲ್ಲಿಸಿದೆ. ನವರಂಗದಲ್ಲಿರುವ ಮಧ್ಯದ ಕಂಬಗಳು ಚೌಕ ರಚನೆಯವು. ಕಾಂಡ ಭಾಗದಲ್ಲಿ ಅರ್ಧ ಕೊಳವೆಗಳ ಅಲಂಕರಣವಿದೆ. ಪ್ರವೇಶ ಮಂಟಪವು ಕಕ್ಷಾಸನದಿಂದ ಕೂಡಿದೆ. ಬಸದಿಯ ಹೊರಭಿತ್ತಿ ಸರಳ ರಚನೆಯದು, ಅಲ್ಲಲ್ಲಿ ಭಗ್ನಗೊಂಡಿದೆ. ಗರ್ಭಗೃಹಗಳ ಗಾಳಿ ಬೆಳಕಿಗಾಗಿ ಜಾಲಾಂಧ್ರಗಳನ್ನು ಅಳವಡಿಸಿರುವುದು ಇಲ್ಲಿನ ವಿಶೇಷತೆಯಾಗಿದೆ. ಸದ್ಯಕ್ಕೆ ಈ ಬಸದಿಯನ್ನು ಸ್ಥಳೀಯರು ದನದ ಕೊಟ್ಟಿಗೆಯನ್ನಾಗಿ ಬಳಸಿಕೊಳ್ಳುತ್ತಿದ್ದಾರೆ. ಜೈನ ಧರ್ಮೀಯರು ಇಲ್ಲದ ಕಾರಣ ಬಸದಿಗೆ ರಕ್ಷಣೆಯಿಲ್ಲ.

ಗರ್ಭಗೃಹದಲ್ಲಿ ಸಿಂಹ ಲಾಂಛನದ ಪಾಣಿಪೀಠದ ಮೇಲೆ ಕುಳಿತ ತೀರ್ಥಂಕರನ ಶಿಲ್ಪವಿದ್ದು, ಹಿಂಬದಿಯ ಫಲಕದ ಮೇಲೆ ಏಳು ಎಡೆಗಳ ಸರ್ಪಾಲಂಕರಣವಿದೆ. ಅಕ್ಕಪಕ್ಕಗಳಲ್ಲಿ ನಿಂತ ಚಾಮರಧಾರಿಗಳ ಉಬ್ಬುಶಿಲ್ಪವಿದೆ. ಈ ಶಿಲ್ಪದ ಎರಡೂ ತೊಡೆಗಳು ಭಗ್ನಗೊಂಡಿದ್ದು ಅವುಗಳಿಗೆ ಆಧಾರವಾಗಿ ಸಿಮೆಂಟನ್ನು ತುಂಬಿ ಕೂಡಿಸಿದ್ದಾರೆ. ಉತ್ತರದ ಗರ್ಭಗೃಹದಲ್ಲಿನ ಪಾಣಿಪೀಠದ ಮೇಲೆ ಸಣ್ಣಲಿಂಗವನ್ನಿಟ್ಟಿದ್ದಾರೆ. ದಕ್ಷಿಣದ ಗರ್ಭಗೃಹದಲ್ಲಿ ಪಾಣಿಪೀಠವಿದೆ. ನವರಂಗದ ನೈರುತ್ಯ ಮೂಲೆಯಲ್ಲಿ ಸಿಂಹ ಲಾಂಛನವಿರುವ ಪಾಣಿಪೀಠವಿದೆ. ಇಷ್ಟೊಂದು ವಿಶೇಷತೆಯಿಂದ ಕೂಡಿದ ಈ ಜೈನ ಬಸದಿಯು ಪ್ರಸ್ತುತ ಅಧ್ಯಯನ ಪರಿಸರದ ಜೈನರ ಪ್ರಸಿದ್ಧಿಗೆ ಕಾರಣವಾಗಿದೆ ಎಂಬುವುದು ತಿಳಿದುಬರುತ್ತದೆ.

ಸಂಖ್ಯೆ : ೦೬

| | | | |
|---|---|---|---|
| ಊರು | : ಕೊಲ್ಲೂರು | ಹೆಸರು | : ಜೈನ ಬಸದಿ |
| ಸ್ಥಳ | : ಊರಿನ ನಡುವೆ | ಕಾಲಮಾನ | : ಕ್ರಿ.ಶ. ೧೧-೧೨ನೆಯ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ಕಲ್ಯಾಣ ಚಾಲುಕ್ಯ |
| ಸ್ಥಿತಿ | : ಕನಿಷ್ಠ | ಸಂರಕ್ಷಣೆ | : -- |

ಪ್ರಸ್ತುತ ಅಧ್ಯಯನದ ಪರಿಸರದಲ್ಲಿರುವ ಕೊಲ್ಲೂರಿನಲ್ಲಿ ಒಂದು ಪ್ರಮುಖವಾದ ಜೈನಬಸದಿ ಇದೆ. ಇದು ರಾಷ್ಟ್ರಕೂಟರ ಆಳ್ವಿಕೆಯ ಕೊನೆಯ ಕಾಲಾವಧಿಯಲ್ಲಿ ಈ ಜೈನ ಬಸದಿಯು

ನಿರ್ಮಾಣವಾಗಿದೆ. ಬಸದಿಯು ಗರ್ಭಗೃಹ, ಅರ್ಧಮಂಟಪ ಮತ್ತು ನವರಂಗದಿಂದ ಕೂಡಿದೆ. ಬಸದಿಯು ಹಾಳು ಬಿದ್ದಿದ್ದು ಜೀರ್ಣಾವಸ್ಥೆಯಲ್ಲಿದೆ. ಗರ್ಭಗೃಹದಲ್ಲಿ ಪದ್ಮಾಸೀನನಾಗಿರುವ ತೀರ್ಥಂಕರ ಶಿಲ್ಪವಿದೆ. ನವರಂಗದಲ್ಲಿ ಚತುರ್ವಂಶತಿ (ಚೌವ್ವೀಸ್) ತೀರ್ಥಂಕರ ಶಿಲ್ಪವಿದೆ. ನವರಂಗವನ್ನು ಪ್ರವೇಶಿಸಲು ಪೂರ್ವದಲ್ಲಿ ದ್ವಾರವಿದ್ದು, ಅದರ ಬಾಗಿಲುವಾಡಗಳು ಶಾಖೆಗಳು ಅಲಂಕರಣದಿಂದ ಕೂಡಿವೆ.[೫೧] ಇದಿಷ್ಟು ಈ ಕೊಲ್ಲೂರು ಜೈನ ಬಸದಿಯ ವಿಶೇಷತೆಯಾಗಿದೆ.

| | | | |
|---|---|---|---|
| ಸಂಖ್ಯೆ | : ೦೭ | | |
| ಊರು | : ಚಿತ್ತಾಪೂರ | ಹೆಸರು | : ಮಹಾವೀರ ಜೈನ ಬಸದಿ |
| ಸ್ಥಳ | : ಬ್ರಾಹ್ಮಣರ ಓಣಿ | ಕಾಲಮಾನ | : ಕ್ರಿ.ಶ. ೧೧-೧೨ನೆಯ ಶತಮಾನ |
| ಅಭಿಮುಖ | : ಪೂರ್ವ | ಶೈಲಿ | : ಕಲ್ಯಾಣ ಚಾಲುಕ್ಯ |
| ಸ್ಥಿತಿ | : ಕನಿಷ್ಠ | ಸಂರಕ್ಷಣೆ | : ಧಾರ್ಮಿಕದತ್ತಿ ಇಲಾಖೆ |

ಪ್ರಸ್ತುತ ಪರಿಸರದಲ್ಲಿರುವ ಚಿತ್ತಾಪೂರುವು ಮಾನ್ಯಖೇಟದಿಂದ ೧೩ ಕಿ.ಮೀ. ಅಂತರದಲ್ಲಿದೆ. ಇಲ್ಲಿಯ ಬ್ರಾಹ್ಮಣರ ಓಣಿಯ ಹಿಂಭಾಗದಲ್ಲಿ ಕಲ್ಯಾಣದ ಚಾಲುಕ್ಯರ ಕಾಲಾವಧಿಯಲ್ಲಿ ನಿರ್ಮಾಣವಾದ ಮಹಾವೀರ ಜೈನ ಬಸದಿಯಿದೆ. ಇದು ಗರ್ಭಗೃಹ, ನವರಂಗ ಹಾಗೂ ವಿಶಾಲವಾದ ಸಭಾಮಂಟಪಗಳನ್ನು ಹೊಂದಿರುವ ಇದು ಜೀರ್ಣೋದ್ಧಾರಗೊಂಡಿದ್ದು, ಇಲ್ಲಿ ಮಹಾವೀರ, ಪಾರ್ಶ್ವನಾಥ, ನೇಮಿನಾಥ, ಬಾಹುಬಲಿ ಮತ್ತು ಪದ್ಮಾವತಿ ಯಕ್ಷಿಯರ ಪ್ರಾಚೀನ ಶಿಲ್ಪಗಳಿವೆ.[೫೨] ಇಂತಹ ಅಂಶಗಳಿಂದ ಈ ಜೈನ ಬಸದಿಯು ಪ್ರಸ್ತುತ ಪರಿಸರದಲ್ಲಿ ಪ್ರಾಮುಖ್ಯತೆ ಪಡೆದಿದೆ.

## ಮೂರ್ತಿಶಿಲ್ಪ

ಶಿಲ್ಪ ಎಂದರೆ ಮೂರ್ತಿಗಳ ರಚನೆಯೇ ಆಗಿದೆ. 'ಶೀಲ ಸಮದ ಶೀಲ್ಯತ ಶಿಲ್ಪ' ಮನಸ್ಸು ಶಾಂತ ಸ್ಥಿತಿಯಲ್ಲಿದ್ದಾಗ ರೂಪಿತವಾಗುವ ಕರಕುಶಲ ವಸ್ತುವೇ ಶಿಲ್ಪ.[೫೩] ಶಿಲ್ಪ ಎಂದರೆ ಒಂದು ವಾಸ್ತವಿಕ ಅಥವಾ ಕಾಲ್ಪನಿಕ ಆಕೃತಿಯನ್ನು ಒಂದು ಮಾಧ್ಯಮದ ಮೂಲಕ ತೋರಿಸುವ ಕಲೆಯೇ ಆಗಿದೆ. ಅಂದರೆ ನಾಲ್ಕು ದಿಕ್ಕುಗಳಿಂದ ನೋಡಬಹುದಾದ ಮಾಧ್ಯಮಿಕ ನಿರ್ಮಾಣವೇ ಮೂರ್ತಿಶಿಲ್ಪ.[೫೪] ಮೂರ್ತಿ, ವಿಗ್ರಹ, ಬಿಂಬ, ಪ್ರತಿಬಿಂಬ ಇತ್ಯಾದಿ ಹೆಸರುಗಳೂ ಮೂರ್ತಿಶಿಲ್ಪದ ಸಮಾನಾರ್ಥಕ ಪದಗಳಾಗಿವೆ. ಪ್ರತಿಯೊಂದು ಮೂರ್ತಿಶಿಲ್ಪವು ತನ್ನದೇಯಾದ ಹಾವಭಾವ, ನಿಲುವು, ಆಯುಧಗಳು, ವಾಹನಗಳ ನ್ನೊಳಗೊಂಡಿರುತ್ತವೆ.

ದೇವಾಲಯ ನಿರ್ಮಿಸುವುದೇ ಮೂರ್ತಿ ಪೂಜೆಗಾಗಿ. ಮೂರ್ತಿಶಿಲ್ಪದ ನೆಲೆಯಲ್ಲಿಯೇ ವಾಸ್ತುಶಿಲ್ಪ ಬೆಳೆಯಿತು. ಅಂದರೆ ಇವೆರಡು ಅವಿನಾಭಾವ ಸಂಬಂಧವನ್ನು ಹೊಂದಿವೆ. ವಾಸ್ತುಶಿಲ್ಪ ದೇವರಿಗೆ ಆಲಯ ಕಟ್ಟಿದರೆ ಮೂರ್ತಿಶಿಲ್ಪ ಆ ದೇವರ ಬಿಂಬಕ್ಕೆ ಸಾಂಕೇತಿಕ ರೂಪ ಕೊಡಲು ಪ್ರಯತ್ನಿಸಿತು. ಮೂರ್ತಿಯ ರಕ್ಷಣೆಗಾಗಿ ದೇವಾಲಯಗಳು ನಿರ್ಮಾಣವಾದವು.

ಗರ್ಭಗೃಹ ದೇವಾಲಯದ ಹೃದಯವಾದರೆ ಅದರಲ್ಲಿರುವ ಶಿಲ್ಪಗಳು ಉಸಿರು, ದೇವರಿಗಾಗಿ ಕಟ್ಟಿದ ಮಂದಿರವೇ ದೇವಾಲಯ. ಅಂದರೆ ವಾಸ್ತುಶಿಲ್ಪಕ್ಕಿಂತ ಪ್ರಾಚೀನವಾದ ಇತಿಹಾಸ ಮೂರ್ತಿಶಿಲ್ಪಕ್ಕಿದೆ.

ಸಿಂಧೂ ನಾಗರಿಕತೆಯ ಉತ್ಖನನದಲ್ಲಿ ದೊರೆತ ಮುದ್ರೆಗಳ ಮೇಲೆ ಕಾಡುಪ್ರಾಣಿಗಳ, ಪಶುದೇವತೆಗಳ, ಸಸ್ಯಗಳ ಚಿತ್ರಗಳನ್ನು ಕಾಣಬಹುದು. ಜೊತೆಗೆ ಆಟಿಕೆಗಳು, ಸ್ತ್ರೀಯ ವಿಗ್ರಹ, ಗಡ್ಡಧಾರಿ ಮನುಷ್ಯನ ವಿಗ್ರಹಗಳು ದೊರಕಿವೆ. ಇವು ಬಹುಮಟ್ಟಿಗೆ ಶಿಲ್ಪಶಾಸ್ತ್ರದ ಆರಂಭದ ಜ್ಞಾನವೆಂದು ಹೇಳಬಹುದು. ವೇದಗಳ ಕಾಲದಲ್ಲಿ ಮೂರ್ತಿ ಪೂಜೆ ಮಾಡುತ್ತಿದ್ದರೋ ಇಲ್ಲವೋ ತಿಳಿದುಬಂದಿಲ್ಲ. ಆದರೆ ಪ್ರಕೃತಿಯ ಅದ್ಭುತ ಶಕ್ತಿಗಳಾದ ಅಗ್ನಿ, ವರುಣ, ಇಂದ್ರ, ಸೂರ್ಯ ಹಾಗೂ ಭೂಮಿಯನ್ನು ದೈವಿ ಸ್ವರೂಪವಾಗಿ ಆರಾಧಿಸುತ್ತಿದ್ದರು. ಪ್ರವಾಹ, ಬರಗಾಲ, ಬೇಟೆಗೆ ಹೋಗುವ ಮುನ್ನ, ಮನೆ ಕಟ್ಟುವ ಮುನ್ನ, ಅನಾರೋಗ್ಯರಾದಾಗ ಪ್ರಸ್ತುತ ದೇವರುಗಳನ್ನು ಆರಾಧಿಸುತ್ತಿದ್ದರು. ದೇವರಿಗೆ ಸಂತೋಷಪಡಿಸಲು ಪ್ರಾರ್ಥನೆ, ಹೋಮ, ಹವನ, ಬಲಿ ಕೊಡುವುದನ್ನು ಆರಂಭಿಸಿದರು. ಹೋಮದ ಸಲುವಾಗಿ ಕಟ್ಟೆ ಅಥವಾ ವೇದಿಯನ್ನು ಕಟ್ಟುತ್ತಿದ್ದರು. ಅದನ್ನು ಹೊತ್ತಿಸಲು ಕಟ್ಟಿಗೆ, ತುಪ್ಪವನ್ನು ಉಪಯೋಗಿಸುತ್ತಿದ್ದರು. ಬಲಿ ಕೊಡುವ ಸಲುವಾಗಿ ಮರದ ದಿನ್ನೆಯನ್ನು ಭೂಮಿಯಲ್ಲಿ ನೆಟ್ಟು ಅದರ ಮೇಲೆ ಪ್ರಾಣಿ ಬಲಿ ಕೊಡುತ್ತಿದ್ದರು. ಮರದ ದಿನ್ನೆಗೆ ಯಾಪ ಎಂದು ಕರೆಯುತ್ತಿದ್ದರು. ಇದೊಂದು ಪ್ರಾಚೀನ ಬಲಿಪೀಠವಾಗಿದೆ. ಹೀಗೆ ಪ್ರಾಚೀನ ಕಾಲದಲ್ಲಿ ಮೂರ್ತಿಪೂಜೆಯು ಆರಂಭವಾಯಿತು.

## ಮೂರ್ತಿಶಿಲ್ಪದ ಹಿನ್ನೆಲೆ

ಚಿತ್ತಾಪೂರ ತಾಲೂಕಿನ ಸನ್ನತಿಯಲ್ಲಿ ಮೌರ್ಯರ ಹಾಗೂ ಶಾತವಾಹನರ ಬೌದ್ಧ ಮೂರ್ತಿಶಿಲ್ಪಗಳು ದೊರಕಿವೆ. ಇವು ಕರ್ನಾಟಕದ ಶಿಲ್ಪಕಲೆಯ ಪ್ರಪ್ರಥಮ ದಾಖಲೆಗಳಾಗಿವೆ. ಕದಂಬರು ಸಹ ಮೂರ್ತಿಶಿಲ್ಪಕ್ಕೆ ಪ್ರಾಶಸ್ತ್ಯವನ್ನು ನೀಡಿದ್ದರು. ಇವರ ಕಾಲದ ಹಳೆಯ ಮೂರ್ತಿಯೆಂದರೆ ಸೊರಬ ತಾಲೂಕಿನ ಜಂಬೇನಹಳ್ಳಿಯ ದುರ್ಗಾ ಮೂರ್ತಿಶಿಲ್ಪ. ಬಾದಾಮಿ ಚಾಲುಕ್ಯರ ಕಾಲದಲ್ಲಿ ಮೂರ್ತಿಶಿಲ್ಪವು ಸಮೃದ್ಧವಾಗಿ ಬೆಳೆಯಿತು. ಐಹೊಳೆ, ಪಟ್ಟದಕಲ್ಲು, ಬಾದಾಮಿಯಲ್ಲಿನ ಮೂರ್ತಿಶಿಲ್ಪಗಳು ಇದಕ್ಕೆ ಸಾಕ್ಷಿಗಳಾಗಿವೆ. ರಾಷ್ಟ್ರಕೂಟರ ಕಾಲದಲ್ಲಿಯೂ ಸಹ ಹೆಚ್ಚಿನ ರೀತಿಯ ಮೂರ್ತಿಶಿಲ್ಪಗಳು ನಿರ್ಮಾಣವಾಗಿವೆ. ಅವು ಅಜಂತಾ ಎಲ್ಲೋರಾ ಮತ್ತು ಪ್ರಸ್ತುತ ಅಧ್ಯಯನದ ಪರಿಸರದ ಸುತ್ತಮುತ್ತಲಿನ ಪರಿಸರದಲ್ಲಿ ಮೂರ್ತಿಶಿಲ್ಪದ ಕಲೆಯು ಉನ್ನತಿಯನ್ನು ತೋರಿಸುತ್ತದೆ. ರಾಷ್ಟ್ರಕೂಟರ ನಂತರ ಇದೆ ಪರಿಸರದಲ್ಲಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿಯು ಮೂರ್ತಿಶಿಲ್ಪವು ವಿಪುಲವಾಗಿ ಬೆಳೆದಿತ್ತು. ನಂತರ ಹೊಯ್ಸಳರ ಮೂರ್ತಿಶಿಲ್ಪಕಲೆಯ ಉತ್ಕೃಷ್ಟತೆಯನ್ನು ತಲುಪಿತ್ತು. ಬೇಲೂರು, ಹಳೇಬೀಡು, ಸೋಮನಾಥಪುರದ ದೇವಾಲಯಗಳಲ್ಲಿನ ಮೂರ್ತಿಶಿಲ್ಪಗಳು ಇದಕ್ಕೆ ನಿದರ್ಶನಗಳಾಗಿವೆ.[೫೫]

ಪ್ರಸ್ತುತ ಅಧ್ಯಯನ ಕ್ಷೇತ್ರವಾದ ಮಾನ್ಯಖೇಟ ಪರಿಸರದಲ್ಲಿ ಪ್ರಾಚೀನ ಕಾಲಾವಧಿಯಿಂದ ಕಲ್ಯಾಣದ ಚಾಲುಕ್ಯರು ಕಾಲಘಟ್ಟದವರೆಗೆ ನಿರ್ಮಿಸಲಾದ ಮೂರ್ತಿಶಿಲ್ಪಗಳು ಲಭ್ಯವಾಗಿವೆ. ಆಯಾ ರಾಜವಂಶಗಳ ಕಾಲದಲ್ಲಿ ನಿರ್ಮಾಣಗೊಂಡ ವಾಸ್ತುಶಿಲ್ಪಗಳು ಬೆಳೆದುಬಂದಿವೆ. ಪ್ರಸ್ತುತ ಅಧ್ಯಯನದ ಅನುಕೂಲಕ್ಕಾಗಿ ಶೈವ, ವೈಷ್ಣವ, ಶಾಕ್ತ ಮತ್ತು ಜೈನ ಎಂದು ವಿಭಾಗಿಸಿ ಅಭ್ಯಸಿಸಲಾಗಿದೆ.

**ಶೈವ ಮೂರ್ತಿಶಿಲ್ಪಗಳು**

ಶೈವ ಧರ್ಮ ಅತಿ ಪ್ರಾಚೀನ ಧರ್ಮಗಳಲ್ಲಿ ಒಂದು. ಹರಪ್ಪ ಮಹೆಂಜೋದಾರೋ ಸಂಸ್ಕೃತಿಗಳ ಅವಶೇಷಗಳಲ್ಲಿ ಶಿವ ಸ್ತಂಭಾಕಾರದ ಲಿಂಗಗಳು ಕಂಡುಬರುವುದರಿಂದ ಶೈವ ಧರ್ಮವು ಸಿಂಧೂ ನಾಗರಿಕತೆಯ ಪೂರ್ವದಲ್ಲಿಯೇ ಅಸ್ತಿತ್ವದಲ್ಲಿತ್ತೆಂದು ಊಹಿಸಬಹುದು. ಶೈವ ಧರ್ಮವು ಎಷ್ಟು ಪ್ರಾಚೀನವೋ ಅಷ್ಟೇ ವ್ಯಾಪಕವಾಗಿ ಹರಡಿತ್ತೆಂಬುದಕ್ಕೆ ಎಲ್ಲೆಡೆಗಳಲ್ಲಿಯೂ ಕಾಣುವ ಶಿವ ದೇವಾಲಯಗಳು ಮತ್ತು ಲಿಂಗಗಳೇ ಸಾಕ್ಷಿಯಾಗಿವೆ. ಅಧ್ಯಯನ ಕ್ಷೇತ್ರವಾದ ಮಾನ್ಯಖೇಟ ಪರಿಸರದಲ್ಲಿ ಶೈವ ಶಿಲ್ಪಗಳಲ್ಲಿ ಲಿಂಗ, ನಂದಿ, ಗಣೇಶ, ಕಾರ್ತಿಕೇಯ ಪ್ರಮುಖವಾಗಿ ಈ ಪರಿಸರದಲ್ಲಿ ಕಾಣಬಹುದು.

**ಶಿವಲಿಂಗಗಳು**

ಶೈವ ಪಂಥದಲ್ಲಿ ಶಿವಲಿಂಗವು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿದೆ. ಲಿಂಗವನ್ನು ಲೋಹಗಳಿಂದ, ಮಣ್ಣಿನಿಂದ ಅಥವಾ ರತ್ನಗಳಿಂದ ಮಾಡಿರುವ ಚಿಕ್ಕ ಚಿಕ್ಕ ಲಿಂಗಗಳನ್ನು ಜಂಗಮ ಲಿಂಗವೆಂದು ಕರೆಯಲಾಗುತ್ತದೆ. ಶೈವ ಧರ್ಮೀಯರು ವೈಯಕ್ತಿಕವಾಗಿ ಸದಾಶಿವನನ್ನು ಆರಾಧಿಸಲು ಈ ರೀತಿಯ ಜಂಗಮಲಿಂಗಗಳನ್ನು ಬಳಸುವರು. ಪೂಜಾ ಸ್ಥಳಗಳಲ್ಲಿ ಪ್ರತಿಷ್ಠಾಪಿಸಲು ಶಿಲೆಯಿಂದ ಮಾಡಿರುವ ಲಿಂಗಗಳನ್ನು 'ಸ್ಥಾವರಲಿಂಗ' ಎಂದು ಕರೆಯಲಾಗುತ್ತದೆ.

ಶಿವನನ್ನು ಸಾಮಾನ್ಯವಾಗಿ ಲಿಂಗದ ಆಕೃತಿಯಲ್ಲಿ ಆರಾಧಿಸುತ್ತಾರೆ. ಲಿಂಗದಲ್ಲಿ ಶಿವನ ಮುಖವನ್ನು ಕಡೆದು ಮುಖಲಿಂಗಗಳು, ಮನುಷ್ಯಕಾರದ ಶಿವನನ್ನು ಪೂರ್ಣವಾಗಿ ಕಡೆದು ಅಳವಡಿಸಿದ ಲಿಂಗೋದ್ಭವ ಮೂರ್ತಿಗಳು ಇವೆ. ಶಿವ ಪೂಜೆಯೆಂದರೆ ಲಿಂಗಪೂಜೆ ಎಂದರ್ಥ. ಮನುಷ್ಯಕಾರದ ಶಿವನ ಸೊಂಟದ ಕೆಳಗೆ ಎರಡು ಕಾಲುಗಳು ಬೆಸದು ಏಕಪಾದ ರೀತಿಯಲ್ಲಿ ಕಂಡುಬರುವ 'ಏಕಪಾದ ಮೂರ್ತಿ' ಶಿಲ್ಪಗಳೂ ವಿರಳವಾಗಿ ಕಂಡುಬರುತ್ತವೆ.[೫೬] ಆದರೆ ಈ ರೀತಿಯಾಗಿ ಲಿಂಗಗಳು ಪ್ರಸ್ತುತ ಅಧ್ಯಯನದಲ್ಲಿ ಕಂಡುಬರುವುದಿಲ್ಲ.

ಪ್ರಸ್ತುತ ಅಧ್ಯಯನ ಪರಿಸರದ ಆರಂಭದ ಶಿವಲಿಂಗಗಳು ಕೇವಲ ಕಂಬಗಳೋಪಾದಿಯಲ್ಲಿವೆ. ಅವುಗಳಿಗೆ ಯಾವುದೇ ಪೀಠ, ಪಾಣಿವಟ್ಟಲಗಳನ್ನು ಅಳವಡಿಸಿದಂತೆ ಕಂಡುಬರುವುದಿಲ್ಲ. ನಂತರ ಇವುಗಳನ್ನು ಸೇರಿಸಲು ಪ್ರಾರಂಭವಾಯಿತು. ಲಿಂಗಗಳ ಮೇಲಿನ ನಾಳಗಳಿಗೆ ಬ್ರಹ್ಮಸೂತ್ರವನ್ನು ತೋರಿಸಲಾಗುತ್ತದೆ. ಇದು ವಿವಿಧ ಕಾಲಗಳಲ್ಲಿನ ಬೆಳವಣಿಗೆಯ ಹಂತದಲ್ಲಿ ವಿವಿಧ ರೂಪ

ಪಡೆದಿರುವುದನ್ನು ಕಾಣುತ್ತೇವೆ. ಶಿವಲಿಂಗಗಳು ಕಂಬಗಳಂತೆ ಇದ್ದು ಅವುಗಳಲ್ಲಿ ಬ್ರಹ್ಮ, ವಿಷ್ಣು ಮತ್ತು ರುದ್ರಭಾಗಗಳಿರುತ್ತವೆ. ಈ ಮೂರು ಭಾಗಗಳಲ್ಲಿ ಬ್ರಹ್ಮ ಭಾಗವು ಚಿಕ್ಕದಾಗಿದ್ದು ವಿಷ್ಣು ರುದ್ರಭಾಗಗಳು ಸಮಪ್ರಮಾಣದಲ್ಲಿರುತ್ತವೆ. ಬ್ರಹ್ಮ ಭಾಗವು ನಾಲ್ಕು ಮುಖ ವಿಷ್ಣು ಭಾಗವು ಎಂಟು ಮುಖ. ರುದ್ರ ಭಾಗವು ವೃತ್ತಕಾರದಲ್ಲಿ ಇರುತ್ತದೆ. ರುದ್ರ ಭಾಗವೇ ಪೂಜಾ ಭಾಗವಾಗಿದೆ. ಇಲ್ಲಿ ಬ್ರಹ್ಮ ಸೂತ್ರವನ್ನು ಅಳವಡಿಸಲಾಗುತ್ತದೆ.

ಪ್ರಸ್ತುತ ಅಧ್ಯಯನದಲ್ಲಿ ದೊರೆಯುವ ಪ್ರಾಚೀನ ಲಿಂಗವೆಂದರೆ ಹಂದರಕಿಯ ಲೋಕೇಶ್ವರ ಮತ್ತು ಆನೇಶ್ವರ ದೇವಾಲಯಗಳ ಗರ್ಭಗೃಹಗಳಲ್ಲಿರುವ ಶಿವಲಿಂಗಗಳು. ಇವು ಕ್ರಿ.ಶ. ೯ನೆಯ ಶತಮಾನದ ರಾಷ್ಟ್ರಕೂಟರ ಆಳ್ವಿಕೆಯ ಕಾಲಾವಧಿಯಲ್ಲಿ ನಿರ್ಮಾಣವಾದವು ಹಾಗಿವೆ. ಅಲ್ಲದೆ ಇದೆ ಪರಿಸರದ ಕಾಳಗಿಯ ಕಾಳೇಶ್ವರ ದೇವಾಲಯದ ಲಿಂಗವು ಪ್ರಾಚೀನ ಕಾಲದ್ದಾಗಿದ್ದು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ಶಿವಲಿಂಗವಾಗಿದೆ.[೫೭]

**ನಂದಿಶಿಲ್ಪಗಳು**

ಶಿವನ ಗಣ ದೇವತೆಗಳಲ್ಲಿ ಕಂಡುಬರುವ ನಂದಿ, ನಂದೀಶ ಅಥವಾ ನಂದೀಶ್ವರನನ್ನು ಮಾನವ ರೂಪದಲ್ಲಿ ಮೂರು ಕಣ್ಣುಗಳನ್ನು, ನಾಲ್ಕು ಕೈಗಳನ್ನು ಹೊಂದಿದ್ದು, ಹುಲಿ ಚರ್ಮವನ್ನು ಧರಿಸುವನೆಂದು ಹೇಳಲಾಗಿದೆ.[೫೮] ಇವನನ್ನು ವೃಷಭದ ರೂಪದಲ್ಲಿಯೂ ಗುರುತಿಸಲಾಗುತ್ತದೆ. ಪ್ರತಿ ಶಿವಾಲಯದಲ್ಲೂ ಶಿವನ ಎದುರಿಗೆ ವೃಷಭ ರೂಪದ ನಂದಿ ಶಿಲ್ಪವನ್ನು ಕಾಣುತ್ತೇವೆ. ನಂದಿಯು ಶಿವನ ವಾಹನ ಎಂದು ಪುರಾಣಗಳಲ್ಲಿ ಹೇಳಿದೆ. ಶಿವನನ್ನು 'ವೃಷಧ್ವಜ' 'ವೃಷಕೇತನ' ಎಂದು ಕರೆಯಲಾಗಿದೆ.[೫೯]

ಸಿಂಧೂ ಸಂಸ್ಕೃತಿಯಲ್ಲಿಯೂ ವೃಷಭಕ್ಕೆ ಪ್ರಾಮುಖ್ಯತೆ ಇದ್ದುದನ್ನು ಕಾಣುತ್ತೇವೆ. ಒಟ್ಟಾರೆ ನಂದಿಯು ಶೈವ ದೇವಾಲಯಗಳಲ್ಲಿ ಅತ್ಯಂತ ಪ್ರಾಮುಖ್ಯತೆ ಪಡೆದ ಶಿಲ್ಪ. ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲಿ ಬಹುತೇಕ ಶೈವ ದೇವಾಲಯಗಳಲ್ಲಿ ನಂದಿ ಶಿಲ್ಪಗಳು ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ಅತ್ಯಂತ ಎತ್ತರದ ನಂದಿ ಶಿಲ್ಪವೆಂದರೆ ಕಾಳಗಿ ಕಾಳೇಶ್ವರ ದೇವಾಲಯದಲ್ಲಿದ್ದದ್ದು. ಇದು ರಾಷ್ಟ್ರಕೂಟರ ಆಳ್ವಿಕೆಯ ಕಾಲಾವಧಿಯಲ್ಲಿ ನಿರ್ಮಾಣವಾಗಿದೆ. ಸುಮಾರು ಆರು ಅಡಿ ಎತ್ತರವಿದೆ. ಕಪ್ಪು ಶಿಲೆಯ ಈ ನಂದಿ ಗಂಟೆಹಾರ, ಹಣೆಪಟ್ಟಿ, ಕೊರಳಪಟ್ಟಿ, ಹಗ್ಗ ಗಂಟೆ, ಡುಬ್ಬ ಬಳಸಿದ ಪದಕಹಾರ, ಗಜ್ಜೆ ಮುಂತಾದ ಅಲಂಕಾರಗಳನ್ನು ಹೊಂದಿದೆ. ಉದ್ದನೆಯ ಅಡಿಕೆಯಂತೆಯೇ ರೂಪಗೊಂಡು ಇವೆರಡೂ ಭಾಗಗಳ ಮೇಲೆ ಸಮಾನಾಂತರಗಳಲ್ಲಿ ಮೂರು ಉಬ್ಬಿದ ಊರ್ಧ್ವ ರೇಖೆಗಳಿವೆ. ಈ ರೀತಿಯಾಗಿ ನಂದಿಶಿಲ್ಪಗಳನ್ನು, ಹಂದರಕಿಯ ಕಾಲಕೇಶ್ವರ, ಆನೇಶ್ವರ, ಕಾಳಗಿಯ ಕಾಳೇಶ್ವರ, ಗುಡಿಯ ಎದುರಿನ ನಂದಿಶಿಲ್ಪಗಳು ರಾಷ್ಟ್ರಕೂಟರ ಶೈಲಿಯಲ್ಲಿದ್ದು ಇವರ ಆಳ್ವಿಕೆಯಲ್ಲಿ ನಿರ್ಮಾಣವಾದವುಗಳಾಗಿವೆ. ಅದೇ ರೀತಿ ಸೇಡಂನ ಪಂಚಲಿಂಗೇಶ್ವರ ದೇವಾಲಯಗಳಲ್ಲಿರುವ

ಹಾಗೂ ಕೊಲ್ಲೂರಿನ ನಂದಿಶಿಲ್ಪವು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ಪ್ರಮುಖ ನಂದಿಶಿಲ್ಪಗಳಾಗಿವೆ.

## ವೀರಭದ್ರ

ಶಿವನ ಮತ್ತೊಂದು ರೂಪವೆ ವೀರಭದ್ರ. ದಕ್ಷನು ಒಮ್ಮೆ ಯಜ್ಞವನ್ನು ಮಾಡುವ ಸಂದರ್ಭದಲ್ಲಿ ತನ್ನ ಮಗಳು ದಾಕ್ಷಾಯಿಣಿ ಮತ್ತು ಅಳಿಯ ಶಿವನನ್ನು ಹೊರತುಪಡಿಸಿ ಉಳಿದ ಎಲ್ಲರನ್ನು ಆಹ್ವಾನಿಸಿರುತ್ತಾನೆ. ಶಿವನ ಮಾತನ್ನು ಮೀರಿ ಯಜ್ಞಾಸ್ಥಳಕ್ಕೆ ಹೋದ ದಾಕ್ಷಾಯಣಿಗೆ ಅವಮಾನವಾಗಿದ್ದರಿಂದ ಅದೇ ಯಜ್ಞಕುಂಡದಲ್ಲಿ ಹಾರಿ ತನ್ನ ಪ್ರಾಣವನ್ನು ಬಿಡುತ್ತಾಳೆ. ಇದರಿಂದ ಕುಪಿತಗೊಂಡ ಶಿವನು ತನ್ನ ಒಡೆಯನ್ನು ನೆಲಕ್ಕೆ ಬಡಿದಾಗ ವೀರಭದ್ರ ಜನ್ಮತಾಳಿದನು. ತನ್ನ ತಾಯಿಯ ಸಾವಿಗೆ ಕಾರಣನಾದ ದಕ್ಷನ ತಲೆಯನ್ನು ಕಡಿದು ಶಿವನಿಗಾದ ಅವಮಾನವನ್ನು ಹೋಗಲಾಡಿಸಿದನೆಂದು ಕೂರ್ಮ ಪುರಾಣವು ತಿಳಿಸುತ್ತದೆ. ಪ್ರಸ್ತುತ ಅಧ್ಯಯನ ಪರಿಸರದ ದಂಡೋತಿಯ ಪಟಣ ಓಣಿಯಲ್ಲಿ ವೀರಭದ್ರನ ಶಿಲ್ಪವು ಕಂಡುಬರುತ್ತದೆ. ಹಾಗೂ ಮಾನ್ಯಖೇಟದ ಊರಿನ ಹೊರಗೆ ವೀರಭದ್ರನ ಶಿಲ್ಪವು ಕಂಡುಬರುತ್ತದೆ. ಅಲ್ಲದೆ ಸೇಡಂನ ಕೆಲವು ಕಡೆ ಗಣೇಶ, ಭೈರವ, ಸರಸ್ವತಿ ಶಿಲ್ಪಗಳಂತೆ ವೀರಭದ್ರನ ಶಿಲ್ಪಗಳು ಅಲ್ಲಲ್ಲಿ ಸಿಕ್ಕಿರುವುದು ವಿಶೇಷವಾಗಿದೆ.

## ಗಣೇಶ

ಶೈವ ದೇವಾಲಯಗಳಲ್ಲಿ ಸಾಮಾನ್ಯವಾಗಿ ಗಣೇಶನನ್ನು ಪ್ರತಿಷ್ಠಾಪಿಸಲಾಗುತ್ತದೆ. ಪ್ರಸ್ತುತ ಅಧ್ಯಯನ ಪರಿಸರದ ಐತಿಹಾಸಿಕ ಗ್ರಾಮವಾದ ಕಾಳಗಿ ಕಾಳೇಶ್ವರ ದೇವಾಲಯದ ಹಳ್ಳದ ಪಕ್ಕ ತೃಟಿತಗೊಂಡಿರುವ ಪ್ರಾಚೀನ ಗಣೇಶನ ಶಿಲ್ಪವಿದೆ. ಮತ್ತು ಇದೆ ಪರಿಸರದ ಐತಿಹಾಸಿಕ ದಿಗ್ಗಾವಿ ಗ್ರಾಮದ ಆಂಜನೇಯ ದೇವಾಲಯದ ಪಕ್ಕದಲ್ಲಿ ತೃಟಿತಗೊಂಡಿರುವ ರಾಷ್ಟ್ರಕೂಟರ ಕಾಲದ ಗಣೇಶನ ಶಿಲ್ಪವು ಕಂಡುಬರುತ್ತದೆ. ಈ ಎರಡು ಶಿಲ್ಪಗಳಲ್ಲಿ ಗಣೇಶನು ಸುಖಾಸೀನದಲ್ಲಿರುವ ಈತನು ಪೀಠದ ಮೇಲೆ ಕುಳಿತಿದ್ದು ತನ್ನ ಕೈಗಳಲ್ಲಿ ಭಗ್ನ ಪಾಶ, ಅಂಕುಶ ಮತ್ತು ಫಲಗಳನ್ನು ಹಿಡಿದಿರುವನು. ಅಗಲವಾದ ಕಿವಿಯನ್ನು ಹೊಂದಿದ್ದು ಉದರದಲ್ಲಿ ನಾಗಬಂಧವಿದೆ. ಇಷ್ಟು ಈ ಗಣೇಶ ಶಿಲ್ಪದ ವಿಶೇಷತೆಯಾಗಿದೆ.

## ವೈಷ್ಣವ ಶಿಲ್ಪಗಳು

ವಿಷ್ಣು ಎಂದರೆ ವ್ಯಾಪಿಸಿರುವವನು, ಆವರಿಸಿಕೊಳ್ಳುವವನು, ಸರ್ವವ್ಯಾಪಿ ಎಂದರ್ಥವಾಗುತ್ತದೆ. ಆದ್ದರಿಂದ ಅವನು ವಿಶ್ವದ ಸತ್ಯನಾಗಿರುವುದಲ್ಲದೆ, ಅತೀತನೂ ಆಗಿದ್ದಾನೆ. ಎಲ್ಲ ವಸ್ತುಗಳ ಇರುವಿಕೆಯ ಹಿಂದಿನ ಶಕ್ತಿಯು ಅವನೆ ಆಗಿದ್ದಾನೆ. ರಕ್ಷಣೆ ಆತನ ಕೆಲಸ. ವೈಷ್ಣವ ಧರ್ಮವು ಸುಮಾರು ಕ್ರಿ.ಪೂ. ಎರಡನೇ ಶತಮಾನದಷ್ಟು ಹಳೆಯದಾದ ಇತಿಹಾಸವನ್ನು ಹೊಂದಿದೆ. ಇದಕ್ಕೆ ಹಲಿಯೋಡೆರಸ್ ವಿದಿಸೆಯಲ್ಲಿ ಸ್ಥಾಪಿಸಿದ ಗರುಡ ಸ್ತಂಭ ಸಾಕ್ಷಿಯಾಗಿದೆ. ಇದು

ಮಧ್ಯಪ್ರದೇಶದ ಜಿಲ್ಲಾ ನಗರದ ಹತ್ತಿರವಿದೆ. ವಿಷ್ಣುವಿನ ಪ್ರತಿರೂಪದ ಕುರಿತು ವಾಯು ಪುರಾಣದಲ್ಲಿ ಪಂಚವೀರರ ಹೆಸರುಗಳನ್ನು ಕಾಣಬಹುದು. ಸಂಕರ್ಷಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧ ಮತ್ತು ಸಾಂಬ ಇವು ವಿಷ್ಣುವಿನ ಪ್ರತಿರೂಪವಾಗಿವೆ. ಇವರನ್ನು ಆರಾಧಿಸುವ ವಿಚಾರ ಕ್ರಿಪೂ. ಸುಮಾರು ಎರಡನೇ ಶತಮಾನದಿಂದಲೇ ಆರಂಭವಾದದ್ದು ತಿಳಿದುಬರುತ್ತದೆ. ಕರ್ನಾಟಕದಲ್ಲಿ ಬನವಾಸಿ ಕದಂಬರು, ತಲಕಾಡಿನ ಗಂಗರು ವೈಷ್ಣವ ಧರ್ಮಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಿದ್ದರು. ಅಲ್ಲದೆ ಸಮಕಾಲೀನ ಶಾಸನಗಳು ವಿಷ್ಣು ಸ್ತುತಿಯಿಂದ ಆರಂಭವಾಗಿದ್ದು ಕಂಡುಬರುತ್ತದೆ. ಬಾದಾಮಿ ಚಾಲುಕ್ಯರ ಮನೆತನದ ಆರಂಭದ ಕೆಲವು ಅರಸರು ವೈಷ್ಣವ ಧರ್ಮದ ಅನುಯಾಯಿಯಾಗಿದ್ದರು. ಇವರು ನಿರ್ಮಿಸಿದ ಗುಹಾಲಯಗಳಲ್ಲಿ ವಿಷ್ಣುವಿನ ಶಿಲ್ಪಗಳು ಕಂಡುಬರುತ್ತವೆ. ತದನಂತರ ಪ್ರಸ್ತುತ ಅಧ್ಯಯನ ಪರಿಸರದಲ್ಲಿ ರಾಷ್ಟ್ರಕೂಟರ ಆಳ್ವಿಕೆಯಲ್ಲೂ ಅಷ್ಟೇನು ವಿಷ್ಣುವಿನ ಶಿಲ್ಪಗಳು ಕಂಡುಬರುವುದಿಲ್ಲ. ಆದರೆ ಕೆಲವು ಕಡೆ ವೈಷ್ಣವ ದೇವಾಲಯ ಮತ್ತು ಮೂರ್ತಿಶಿಲ್ಪವು ಇರುವುದು ಕಂಡುಬರುತ್ತವೆ. ವಿಶೇಷವಾಗಿ ರಾಷ್ಟ್ರಕೂಟರ ನಂತರ ಅಧಿಕಾರಕ್ಕೆ ಬಂದ ಕಲ್ಯಾಣದ ಚಾಲುಕ್ಯರ ಆಳ್ವಿಕೆ ಕಾಲಾವಧಿಯಲ್ಲಿ ವೈಷ್ಣವ ದೇವಾಲಯಗಳು ಹಾಗೂ ಮೂರ್ತಿಶಿಲ್ಪಗಳು ಅಧಿಕವಾಗಿದ್ದು ಅತ್ಯಂತ ಉತ್ತಮ ಸ್ಥಿತಿಗೆ ತಲುಪಿತು. ಮಾನ್ಯಖೇಟ ಪರಿಸರವು ಶೈವ, ಜೈನ ಶಿಲ್ಪಗಳಂತೆ ವೈಷ್ಣವ ಪಂಥಕ್ಕೆ ಸಂಬಂಧಿಸಿದ ಬಹುತೇಕ ಮೂರ್ತಿಶಿಲ್ಪಗಳು ದೊರೆತಿವೆ. ಇದಕ್ಕೆ ಪ್ರಮುಖ ಕಾರಣವೆಂದರೆ ಕಲ್ಯಾಣ ಚಾಲುಕ್ಯರು ವೈಷ್ಣವ ಧರ್ಮಕ್ಕೆ ನೀಡಿದ ಪ್ರೋತ್ಸಾಹವೆ ಪ್ರಮುಖ ಕಾರಣವಾಗಿದೆ.

### ವಿಷ್ಣುವಿನ ಶಿಲ್ಪಗಳು

ಪ್ರಸ್ತುತ ಅಧ್ಯಯನದ ಚಿತ್ತಾಪೂರ ತಾಲೂಕಿನ ರಾವೂರಿನ ವೆಂಕಟೇಶ್ವರ ಗುಡಿಯಲ್ಲಿ ವಿಷ್ಣುವಿನ ಶಿಲ್ಪವಿದೆ. ಇದು ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ದ್ವಿಬಾಹುಗಳನ್ನು ಹೊಂದಿದ ಈತನು ಬಲಗೈಯಲ್ಲಿ ಕಮಲ, ಎಡಗೈಯಲ್ಲಿ ಪ್ರಯೋಗ ಚಕ್ರವನ್ನು ಹಿಡಿದಿದ್ದಾನೆ. ಕರಂಡಮಕುಟ, ವೃತ್ತಾಕಾರದ ಕರ್ಣಕುಂಡಲ, ಕೊರಳಹಾರ, ಕಂಕಣ, ಭುಜಬಂದ, ಕೇಯೂರ, ಯಜ್ಞೋಪವೀತ, ಅರ್ಧಪಟ್ಟಿಕೆ, ವೈಜಯಂತಿಹಾರ, ಉರುದಾಮ, ಕಾಲ್ಗಡಗವನ್ನು ಧರಿಸಿದ್ದಾನೆ. ಈ ಮೂರ್ತಿಶಿಲ್ಪವು ತ್ರಿಭಂಗಿಯಲ್ಲಿದೆ. ಅಲ್ಲದೆ ಪ್ರಸ್ತುತ ಅಧ್ಯಯನ ಪರಿಸರದ ಕಾಳಗಿಯ ಸೂರ್ಯನಾರಾಯಣ ದೇವಾಲಯದ ಹೊರಭಿತ್ತಿಯ ಮೇಲೆ ಸಮಸ್ಥಾನಕ ವಿಷ್ಣುವಿನ ಶಿಲ್ಪವಿದ್ದು ಚತುರ್ಭುಜನಾಗಿದ್ದಾನೆ. ಹಿಂದಿನ ಬಲಗೈಯಲ್ಲಿ ಶಂಖ, ಎಡಗೈಯಲ್ಲಿ ಚಕ್ರವನ್ನು ಹಿಡಿದಿದ್ದಾನೆ. ಮುಂದಿನ ಎಡಗೈಯ ಮೇಲೆ ಬಲಗೈಯನ್ನು ಇಟ್ಟಂತೆ ಚಿತ್ರಿಸಲಾಗಿದೆ. ಈತನು ಕರಂಡಮಕುಟ, ಕರ್ಣಕುಂಡಲ, ಭುಜಬಂಧ, ಕೊರಳಹಾರ, ಕೆಯಾರ, ಉದರಬಂಧ, ಕಂಕಣ, ಸೊಂಟಪಟ್ಟಿ, ಉರುದಾಮ, ಯಜ್ಞೋಪವೀತ, ವೈಜಯಂತಿ, ಕಾಲ್ಗಡಗ, ಪಾದಸರವನ್ನು ಧರಿಸಿದ್ದಾನೆ.

### ಅನಂತಶಯನ ಶಿಲ್ಪಗಳು

ದಿಗ್ಗಾವಿ ಗ್ರಾಮದಲ್ಲಿ ಅನಂತಶಯನ ದೇವಾಲಯ ಗರ್ಭಗೃಹದಲ್ಲಿ ಅನಂತಶಯನ

ಶಿಲ್ಪವಿದೆ. ಇಲ್ಲಿ ಅನಂತಶಯನ ಏಳು ತಲೆಯ ಸರ್ಪದ ಮೇಲೆ ನಿದ್ರಿಸುತ್ತಿರುವನು. ಚತುರ್ಬಾಹುಗಳನ್ನು ಹೊಂದಿದ್ದಾನೆ. ಹಿಂದಿನ ಬಲಗೈಯಲ್ಲಿ ಕಮಲವನ್ನು ಹಿಡಿದಿದ್ದು, ಎಡಗೈಯಲ್ಲಿ ಶಂಖವನ್ನು ಹಿಡಿದಿದ್ದಾನೆ. ಮತ್ತು ಮುಂದಿನ ಬಲಗೈಯಲ್ಲಿ ಚಕ್ರವನ್ನು, ಎಡಗೈಯಲ್ಲಿ ಗದೆಯನ್ನು ಹಿಡಿದಿದ್ದಾನೆ. ಕಿರೀಟ ಮಕುಟ, ವರ್ತುಲಾಕಾರದ ಕರ್ಣಕುಂಡಲ, ಕಂಠಹಾರ, ಭುಜಬಂಧ, ಕಂಕಣ, ಸೊಂಟಪಟ್ಟಿ, ಕಾಲ್ಗಡಗ, ಪಾದಸರ, ಯಜ್ಞೋಪವೀತ, ಧೋತ್ರವನ್ನು ಧರಿಸಿದ್ದಾನೆ. ಈತನ ಒಂದು ಪಾದವು ಪತ್ನಿಯಾದ ಲಕ್ಷ್ಮಿಯ ತೊಡೆಯ ಮೇಲಿದೆ. ಅವಳು ಅದನ್ನು ಒತ್ತುತ್ತಿರುವಳು. ಅನಂತನ ನಾಭಿಯಿಂದ ಕಮಲವು ಮೇಲಕ್ಕೆ ಬರುವಂತೆ ಕೆತ್ತಲಾಗಿದೆ. ಅದರಲ್ಲಿ ಬ್ರಹ್ಮನು ಕುಳಿತಿರುವನು. ಪಕ್ಕದಲ್ಲಿ ಹಯಗ್ರೀವ, ಋಷಿಗಳು, ಮೀನು, ಆಮೆಯ ಶಿಲ್ಪವಿದೆ. ಇವು ಈ ಅನಂತಶಯನ ಮೂರ್ತಿಶಿಲ್ಪದ ಲಕ್ಷಣಗಳಾಗಿವೆ.

**ಮನ್ಮಥ ಮತ್ತು ರತಿ ಶಿಲ್ಪಗಳು**

ಕಾಳಗಿಯ ಸೂರ್ಯನಾರಾಯಣ ದೇವಾಲಯದ ಪೂರ್ವದ ಹೊರಭಿತ್ತಿಯ ಮೇಲೆ ಮನ್ಮಥ ಮತ್ತು ರತಿಯ ಶಿಲ್ಪವಿದೆ. ಇಲ್ಲಿ ಮನ್ಮಥನು ಕಿರೀಟ, ಮಕುಟ, ಕರ್ಣಕುಂಡಲ, ಕಂಠಹಾರ, ಉದರಬಂಧ, ಕಂಕಣ, ಸೊಂಟಪಟ್ಟಿ, ಉರುದಾಮ, ಯಜ್ಞೋಪವೀತ, ವೈಜಯಂತಿ, ಕಾಲ್ಗಡಗ, ಪಾದಸರವನ್ನು ಧರಿಸಿದ್ದಾನೆ. ಎಡಗೈಯಲ್ಲಿ ಕಬ್ಬಿನ ಗಿಡದ ಧನಸ್ಸನ್ನು ಹಿಡಿದಿದ್ದಾನೆ. ಬಲಗೈಯಲ್ಲಿ ಹೂವಿನ ವರ್ಣನ್ನು ಹಿಡಿದಿದ್ದಾನೆ. ಈತನ ಪಕ್ಕದಲ್ಲಿ ಪತ್ನಿ ರತಿ ನಿಂತಿದ್ದಾಳೆ. ತಲೆಗೆ ಮುಡಿ, ಕೊರಳಹಾರ, ಭುಜಬಂಧ, ಕಂಕಣ, ಸೊಂಟಪಟ್ಟಿ, ಉರುದಾಮೆ, ಕಾಲ್ಗಡಗ, ಪಾದಸರವನ್ನು ಧರಿಸಿದ್ದಾಳೆ. ಈಕೆ ಎಡಗೈಯಲ್ಲಿ ಹಣ್ಣನ್ನು ಹಿಡಿದಿದ್ದಾಳೆ. ಪ್ರಸ್ತುತ ಮೂರ್ತಿಶಿಲ್ಪವು ಸ್ಥಾನಕ ತ್ರಿಭಂಗಿಯಲ್ಲಿದೆ. ಇಷ್ಟು ಈ ಮನ್ಮಥ ಮತ್ತು ರತಿ ಶಿಲ್ಪಗಳ ವೈಶಿಷ್ಟ್ಯವಾಗಿದೆ.

**ಗರುಡ ಶಿಲ್ಪಗಳು**

ಪ್ರಸ್ತುತ ಅಧ್ಯಯನದ ತೆಂಗಳಿಯ ಮಲ್ಲಿಕಾರ್ಜುನ ದೇವಾಲಯದ ತೊಲೆಯ ಮೇಲೆ ಗರುಡ ಶಿಲ್ಪವಿದೆ. ಗರುಡನು ಕಿರೀಟ ಮಕುಟ, ಕರ್ಣಕುಂಡಲ, ಕಂಕಣ, ಕಾಲ್ಗಡಗ, ಧೋತ್ರವನ್ನು ಧರಿಸಿದ್ದಾನೆ. ಎಡ ಬಲ ಭುಜಗಳ ಮೇಲೆ ರೆಕ್ಕೆಯನ್ನು ಕೆತ್ತಲಾಗಿದೆ. ಈತನು ಅಂಜಲಿಹಸ್ತದ ಭಂಗಿಯಲ್ಲಿದ್ದಾನೆ.

**ಹನುಮಂತನ ಶಿಲ್ಪಗಳು**

ಹನುಮಂತನನ್ನು ಆಂಜನೇಯನ ಪುತ್ರನೆಂದೂ, ಸೂರ್ಯಪುತ್ರನೆಂದೂ, ವಾಯುಪುತ್ರನೆಂದೂ, ರಾಮಭಕ್ತನೆಂದೂ ಹಲವಾರು ಹೆಸರುಗಳಿಂದ ಕರೆಯುವುದನ್ನು ಕಂಡುಬರುತ್ತದೆ. ಮಧ್ವಾಚಾರ್ಯರ ಅವತಾರವೆಂದು ಹೇಳಲಾಗುತ್ತದೆ. ಈತ ದುಷ್ಟಶಕ್ತಿಗಳನ್ನು ನಿಗ್ರಹ ಮಾಡುವವನು, ರೋಗಗಳನ್ನು ಪರಿಹರಿಸುವನು, ಭಯ, ಭೀತಿಗಳನ್ನು ಹೋಗಲಾಡಿಸುವವನು ಇವೆಲ್ಲ ಈತನ ಸಹಾಯದಿಂದಲೇ ನಡೆಯಬೇಕೆಂದು ಈತನನ್ನು ಪೂಜಿಸಲಾಗುತ್ತದೆ. ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರ

ಕಾಲದಲ್ಲಿ ಹನುಮಂತನ ಆರಾಧನೆಯನ್ನು ಕಾಣಬಹುದು. ಪ್ರಸ್ತುತ ಅಧ್ಯಯನ ಪರಿಸರದ ಕಾಳಗಿ, ಮಾನ್ಯಖೇಟ, ದಿಗ್ಗಾವಿ ಗ್ರಾಮಗಳಲ್ಲಿ ಆಂಜನೇಯನ ಬೃಹತ್ ವಿಗ್ರಹಗಳನ್ನು ಕಾಣಬಹುದು.

**ಶಾಕ್ತ ಶಿಲ್ಪಗಳು**

ಶಾಕ್ತ ಶಿಲ್ಪಗಳು ಎಂದರೆ ಸ್ತ್ರೀ ಶಿಲ್ಪಗಳು ಎಂಬರ್ಥದಲ್ಲಿ ಬಳಸಲಾಗುತ್ತದೆ. ಮಾತೃದೇವತೆಯ ರೂಪದಲ್ಲಿರುವ ಶಕ್ತಿ ದೇವತೆಯನ್ನು ಶಾಕ್ತ ದೇವತೆಯನ್ನುತ್ತಾರೆ. ಈ ದೇವತೆಯನ್ನು ಆರಾಧಿಸುವ ಪಂಥವನ್ನು ಶಾಕ್ತಪಂಥವೆಂದು ಕರೆಯುವರು. ಕ್ರಿ.ಪೂ. ೨೦೦೦ ವರ್ಷಗಳ ಹಿಂದೆ ಹರಪ್ಪ ಸಂಸ್ಕೃತಿಯ ಕಾಲದಲ್ಲಿಯೇ ಮಾತೃದೇವತೆಗೆ ಪ್ರಮುಖ ಸ್ಥಾನವಿರುವುದನ್ನು ಇತಿಹಾಸದಿಂದ ತಿಳಿಯಬಹುದು. ಇಂತಹ ಶಕ್ತಿದೇವತೆಗಳ ಶಿಲ್ಪಗಳಾದ ಲಕ್ಷ್ಮಿ, ಪಾರ್ವತಿ, ಕಾಳಿಕಾದೇವಿ, ಸರಸ್ವತಿ, ದುರ್ಗಾದೇವಿ, ಮಹಿಷಮರ್ದಿನಿ, ಸಪ್ತಮಾತೃಕೆ ದೇವತಾ ಆರಾಧನೆ ಹಿಂದಿನಿಂದಲೂ ಸಹ ಮುಂದುವರಿದುಕೊಂಡು ಬಂದಿದೆ. ಈ ಪ್ರಸ್ತುತ ಅಧ್ಯಯನ ಪರಿಸರದಲ್ಲೂ ಅನೇಕ ಶಾಕ್ತ ಮೂರ್ತಿ ಶಿಲ್ಪಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತಿವೆ. ಅವು ಈ ಕೆಳಗಿನಂತಿವೆ.

**ಮಹಿಷಮರ್ದಿನಿ**

ಮಹಿಷಮರ್ದಿನಿ ಶಿಲ್ಪವು ಕೋಣದ ರೂಪದಲ್ಲಿರುವ ಮಹಿಷಮರ್ದಿನಿ ಮೇಲೆ ದೇವಿಯ ತನ್ನ ಎಡಗಾಲನ್ನು ಇಟ್ಟು ನಿಂತು ಹಿಂದಿನ ಬಲಗೈಯನ್ನು ತ್ರಿಶೂಲದಿಂದ ಅದರ ದೇಹಕ್ಕೆ ಹಾಕಿ ಅದರ ಬಾಯಿಯನ್ನು ಎಡಗೈಯಲ್ಲಿ ಹಿಡಿದಿರುತ್ತಾಳೆ. ಈ ರೀತಿಯ ಶಿಲ್ಪಗಳನ್ನು ಮಹಿಷಮರ್ದಿನಿ ಶಿಲ್ಪ ಎಂದು ಕರೆಯಲಾಗುತ್ತದೆ. ಈ ಶಿಲ್ಪದ ಕೈಯಲ್ಲಿ ಖಡ್ಗ, ಅಂಕುಶ, ಆಯುಧಗಳು ಕಂಡುಬರುತ್ತದೆ. ಮೂಗುತಿ, ರುಂಡಮಾಲೆ, ಕಂಠಿಹಾರ, ಕರ್ಣಕುಂಡಲ ಕೈಗಡಗ ಮತ್ತು ಕಾಲ್ಗಡಗ ಇತ್ಯಾದಿ ಆಭರಣಗಳಿಂದ ಅಲಂಕರಿಸಲಾಗುತ್ತದೆ.

ಭಾರತದ ಧಾರ್ಮಿಕ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಸ್ತ್ರೀದೇವತೆ ಆರಾಧನೆಯ ಶಕ್ತಿಯ ಒಂದು ರೂಪವಾಗಿದೆ. ಪ್ರಾಚೀನ ಕಾಲದಿಂದಲೂ ಪ್ರಪಂಚದ್ಯಾದಂತ ಪ್ರಚಲಿತದಲ್ಲಿದ್ದರೂ ಭಾರತೀಯ ಸಂಸ್ಕೃತಿಯಲ್ಲಿ ವಿಶೇಷವಾಗಿ ಬೆಳೆದು ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿದೆ. ಇದನ್ನು ಗಮನಿಸಿ ಶಕ್ತಿ ದೇವತೆಯನ್ನು ಶಿಷ್ಟ ಹಾಗೂ ಜನಪದ ದೇವತೆಗಳೆಂದು ವಿಭಾಗಿಸಿ ಆಚರಣೆಗಳನ್ನು ನಡೆಸಲಾಗುತ್ತದೆ.ಶಕ್ತಿ ದೇವತೆ ಹುಟ್ಟಿ ಬಂದಿರುವುದು ಹಿಂದಿನ ಮಾತೃ ಪ್ರಧಾನ ಕುಟುಂಬ ವ್ಯವಸ್ಥೆಯ ಸಂಕೇತವಾಗಿದೆ. ನಾಡಿನಲ್ಲಿ ಇಂದಿಗೂ ಶಕ್ತಿ ದೇವತೆಗಳೇ ಪ್ರಧಾನವಾಗಿರುವುದನ್ನು ಆರ್ಯ ಕುಟುಂಬ ಜನಾಂಗದ ಸಂಸ್ಕೃತಿಯ ಗಾಢವಾದ ಹಿನ್ನೆಲೆಯಿರುವುದು ತಿಳಿಸುತ್ತದೆ. ರೋಗ ರುಜಿನ, ಮಳೆ–ಬೆಳೆ ಬದುಕಿನ ಎಲ್ಲಾ ಬೇಕುಬೇಡಗಳನ್ನು ಪರಿಹರಿಸಿಕೊಳ್ಳಲೂ ಶಕ್ತಿ ದೇವತೆಯನ್ನು ಜನಪದರು ರೂಪಿಸಿಕೊಂಡಿದ್ದಾರೆ. ಈ ದೃಷ್ಟಿಯಿಂದ ಮಾನ್ಯಖೇಟ ಪರಿಸದಲ್ಲಿಯೂ ಸಹ ದೇವಾಲಯಗಳಿಗೆ ಸಂಬಂಧಿಸಿದಂತೆ ಶಕ್ತಿ ದೇವತೆಗಳಿಗೆ

ವಿಶಿಷ್ಟ ಸ್ಥಾನವನ್ನು ಪಡೆದಿದೆ. ಎಂದು ಹೇಳಬಹುದು. ಮಾನ್ಯಖೇಟ ಪರಿಸರದಲ್ಲಿ ಶಾತವಾಹನರು ನಂತರ ಬಾದಾಮಿ ಚಲುಕ್ಯರು, ರಾಷ್ಟ್ರಕೂಟರು ಕಲ್ಯಾಣದ ಚಾಲುಕ್ಯರು ತಮ್ಮ ಆಡಳಿದ ಅವಧಿಯಲ್ಲಿ ಸ್ತ್ರೀದೇವತೆಯನ್ನು ರಾಜ್ಯಭಾರವನ್ನು ಮಾಡಲು ಪ್ರಾರಂಭಿಸಿದಾಗ ತಮ್ಮ ಯುದ್ಧ ಮತ್ತು ಸಾಂಸ್ಕೃತಿಕ ಪ್ರತೀಕವಾಗಿ ಈ ದೇವಿಯನ್ನು ಪೂಜಿಸುವುದು, ಆರಾಧಿಸುವುದು ಬೆಳೆದು ಬಂದಿತು. ಈ ಮಹಿಷಮರ್ದಿನಿ ಶಿಲ್ಪವು ಪ್ರಸ್ತುತ ಅಧ್ಯಯನ ಪರಿಸರದ ದಿಗ್ಗಾವಿಯ ಶಂಭುಲಿಂಗೇಶ್ವರ ದೇವಾಲಯದ ಆವರಣದಲ್ಲಿ ಶಿಲ್ಪವು ದೊರೆತಿದೆ. ಈ ಕಾರಣಗಳಿಂದ ರಾಷ್ಟಕೂಟರು ಮತ್ತು ಕಲ್ಯಾಣದ ಚಾಲುಕ್ಯರು ಮಹಿಷಾಮರ್ದಿನಿಯನ್ನು ಯುದ್ಧದ ದೇವತೆಯಾಗಿ ಪೂಜಿಸುತ್ತಿದ್ದರು.

**ಚಾಮುಂಡಿ**

ಸನ್ನತಿಯ ಕಾಳಿಕಾಂಬೆಯ ದೇವಾಲಯದ ಹೊರಗೋಡೆಯಲ್ಲಿ ಈ ಚಾಮುಂಡಿಯ ಶಿಲ್ಪವಿದೆ. ಈ ಶಿಲ್ಪದಲ್ಲಿ ದೇವಿಯು ಸವ್ಯಲಲಿತಾಸನದಲ್ಲಿರುವಳು ನಾಲ್ಕು ಕೈಗಳಲ್ಲಿ ಕತ್ತಿ, ತ್ರಿಶೂಲ, ಢಮರು ಮತ್ತು ಕಪಾಲಗಳಿವೆ. ಜಟಾಮುಕುಟಧಾರಿಣಿ ಸರಗಳನ್ನು ಮತ್ತು ಕುಂಡಲಗಳನ್ನು ಧರಿಸಿರುವಳು. ಎದ್ದು ಕಾಣುವ ಕುಚಗಳಿವೆ. ಈ ದೇವಿಯ ದೇಹದ ಮೇಲೆ ಯಜ್ಞೋಪವೀತದಂತೆ ರುಂಡಮಾಲೆಯನ್ನು ಧರಿಸಿರುವಳು. ಕೈಗಳಲ್ಲಿ ಬಳೆಗಳನ್ನು, ತೋಳುಗಳಲ್ಲಿ ಪಟ್ಟಿಕೆಗಳನ್ನು ಕಾಲುಗಳಲ್ಲಿ ಕಡಗಗಳನ್ನು ಸೊಂಟಕ್ಕೆ ಪಟ್ಟಿಕೆಯನ್ನು ಧರಿಸಿರುವಳು. ಆಕೆಯ ಪಾದದ ಕೆಳಗಡೆ ಪ್ರೇತ ಮಲಗಿದೆ. ಈ ಶಿಲ್ಪದ ಕಾಲ ಸು. ಕ್ರಿ.ಶ. ೧೧ನೆಯ ಶತಮಾನದ ಆದಿ ಭಾಗವಾಗಿದೆ.

ಶ್ರೀ ಚಂದ್ರಲಾಂಬೆ ದೇವಿಯ ಉತ್ಸವವು ವಿಭಿನ್ನ ಕಾಲದಲ್ಲಿ ಶ್ರದ್ಧಾ ಭಕ್ತಿಯಿಂದ ಉತ್ಸವವು ನಡೆಯುವುದರ ಜೊತೆಗೆ ಅಲ್ಲಿರುವ ಚಾಮುಂಡಿ ಶಿಲ್ಪವು ತನ್ನ ಪ್ರಾಚೀನತೆಯನ್ನು ಹಾಗೆ ಉಳಿದುಕೊಂಡು ಬಂದಿದೆ. ಈ ಚಾಮುಂಡಿ ಶಿಲ್ಪವು ಪ್ರಸ್ತುತ ಅಧ್ಯಯನ ಪರಿಸರದಲ್ಲಿನ ಪ್ರಮುಖ ಶಿಲ್ಪವಾಗಿರುವುದರಿಂದ ಅತ್ಯಂತ ಪ್ರಾಮುಖ್ಯತೆ ಪಡೆದ ಶಿಲ್ಪವಾಗಿದೆ.

**ದುರ್ಗೆ**

ಪ್ರಸ್ತುತ ಅಧ್ಯಯನದ ಕಾಳಗಿ ಗ್ರಾಮದ ಸೂರ್ಯನಾರಾಯಣ ದೇವಾಲಯದ ಪಶ್ಚಿಮದ ಹೊರಭಿತ್ತಿಯ ಕೋಷ್ಟದಲ್ಲಿ ದುರ್ಗೆಯ ಮೂರ್ತಿಶಿಲ್ಪವಿದೆ. ಈಕೆಯು ಚತುರ್ಬಾಹುಗಳನ್ನು ಹೊಂದಿದ್ದಾಳೆ. ಹಿಂದಿನ ಬಲಗೈಯಲ್ಲಿ ಢಮರುವನ್ನು, ಎಡಗೈಯಲ್ಲಿ ತ್ರಿಶೂಲವನ್ನು ಹಿಡಿದಿದ್ದಾಳೆ. ಮುಂದಿನ ಬಲಗೈ ಅಭಯ ಮುದ್ರೆಯಲ್ಲಿದ್ದು, ಎಡಗೈಯಲ್ಲಿನ ಆಯುಧ ಅಸ್ಪಷ್ಟವಾಗಿದೆ. ಈಕೆಯು ಕಿರೀಟ, ಕರ್ಣಕುಂಡಲ, ಭುಜಬಂಧ, ಕೊರಳಹಾರ, ಬಳೆ, ಸೊಂಟಪಟ್ಟಿ, ಕಾಲ್ಗಡಗವನ್ನು ಧರಿಸಿದ್ದಾಳೆ. ಅರ್ಧಪಲ್ಯಾಂಕಾಸನದಲ್ಲಿ ಕುಳಿತ ದುರ್ಗೆಯ ಮುಂದೆ ಸಿಂಹವು ಕುಳಿತಿದೆ.

**ಕಾಳಿ ಶಿಲ್ಪ**

ಐತಿಹಾಸಿಕ ಕಾಳಗಿಯ ಮಲ್ಲಿಕಾರ್ಜುನ ದೇವಾಲಯದ ಗರ್ಭಗೃಹದ ಉತ್ತರದ ಹೊರ ಗೋಡೆಯಲ್ಲಿ ಕಾಳಿಯ ಶಿಲ್ಪವಿದೆ. ಚತುರ್ಭುಜ ಕಾಳಿ ನೃತ್ಯ ಭಂಗಿಯಲ್ಲಿ ನಿಂತಿದ್ದಾಳೆ.

ಈಕೆಯು ಹಿಂದಿನ ಬಲಗೈಯಲ್ಲಿ ಡಮರುವನ್ನು ಹಿಡಿದಿದ್ದು, ಎಡಗೈಯಲ್ಲಿನ ಆಯುಧ ಅಸ್ಪಷ್ಟವಾಗಿದೆ. ಮುಂದಿನ ಬಲಗೈಯಲ್ಲಿನ ಆಯುಧವು ಅಸ್ಪಷ್ಟವಾಗಿದೆ. ಎಡಗೈಯಲ್ಲಿನ ಖಟ್ವಾಂಗವನ್ನು ಮೊಳಕೈ ಮಧ್ಯದಲ್ಲಿ ಹಿಡಿದಿದ್ದಾಳೆ. ಮುಂಗೈ ಬೆರಳನ್ನು ಕೆನ್ನೆಯ ಮೇಲೆ ಇಡಲಾಗಿದೆ. ಈಕೆಯು ಜಟಾಮಕುಟ, ವರ್ತುಲಾಕಾರದ ಕರ್ಣಕುಂಡಲ, ಕೊರಳಹಾರಗಳು, ಭುಜಬಂಧ, ಕೈಬಳೆ, ಸೊಂಟಪಟ್ಟಿ, ಕಾಲ್ಗಡಗ, ರುಂಡಮಾಲೆಯನ್ನು ಧರಿಸಿದ್ದಾಳೆ. ಜೋತುಬಿದ್ದ ಎದೆಯ ಮೇಲೆ ಕರುಳು ಹುರಿಯಿಂದ ಗಂಟನ್ನು ಹಾಕಲಾಗಿದೆ. ಇಲ್ಲಿ ಕಾಳಿಯು ಶವದ ಮೇಲೆ ನಿಂತಿದ್ದಾಳೆ. ಕಾಳಿಯ ಬಲಭಾಗಕ್ಕೆ ಅಸ್ಥಿಪಂಜರದಂತಹ ಮನುಷ್ಯನ ಕೆತ್ತನೆಯಿದೆ. ಎಡಭಾಗಕ್ಕೆ ಕುದುರೆಯ ಕೆತ್ತನೆಯಿದ್ದು, ಹಿಂದಿನ ಎರಡು ಕಾಲುಗಳು ನೆಲದ ಮೇಲೆ, ಮುಂದಿನ ಎರಡು ಕಾಲುಗಳು ಹಾಗೂ ಕುದುರೆಯ ಮುಖ ಕಾಳಿಯ ವಿಗ್ರಹಕ್ಕೆ ತಾಗಿದಂತೆ ಕೆತ್ತಲಾಗಿದೆ. ಇದೇ ಗ್ರಾಮದ ಸಿದ್ಧೇಶ್ವರ ಮತ್ತು ಸೇಡಂದ ಪಂಚಲಿಂಗೇಶ್ವರ ದೇವಾಲಯಗಳು ಮತ್ತು ಮುಂತಾದ ದೇವಾಲಯಗಳಲ್ಲಿ ಕಾಳಿಯ ಶಿಲ್ಪಗಳು ಕಂಡುಬರುತ್ತವೆ.

**ಲಲಾಟಬಿಂಬದಲ್ಲಿ ಗಜಲಕ್ಷ್ಮಿ**

ಪ್ರಸ್ತುತ ಅಧ್ಯಯನ ಪರಿಸರದ ಶೈವ ದೇವಾಲಯಗಳ ಬಾಗಿಲುವಾಡದ ಮೇಲ್ಭಾಗದ ಪಟ್ಟಿಕೆಯ ಮಧ್ಯೆ ಚೌಕ ಅಥವಾ ಆಯತಾಕಾರದ ಫಲಕವಿರುವುದು. ಈ ಫಲಕದ ಮೇಲೆ ಮೂಲ ದೇವರಿಗೆ ಸಂಬಂಧಿಸಿದ ಬಿಂಬವು ಇರುತ್ತದೆ. ಈ ಬಿಂಬಕ್ಕೆ ಲಲಾಟಬಿಂಬ ಎಂದು ಹೆಸರು. ಪ್ರಸ್ತುತ ಅಧ್ಯಯನದ ಮಾನ್ಯಖೇಟ ಪರಿಸರದ ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರ ಹೆಚ್ಚಿನ ದೇವಾಲಯಗಳು ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಚಿತ್ರ ಇರುತ್ತದೆ. ಲಲಾಟಬಿಂಬ ಗಜಲಕ್ಷ್ಮಿ ದ್ವಿಬಾಹುಗಳನ್ನು ಹೊಂದಿದ್ದು ಎಡ ಮತ್ತು ಬಲಗೈಯಲ್ಲಿ ಕಮಲವನ್ನು ಹಿಡಿದಿದ್ದಾಳೆ. ಈಕೆ ಕಿರೀಟ ಮುಕುಟ, ಕಿವಿಯಲ್ಲಿ ಓಲೆ, ಕೊರಳಹಾರ, ಕೈಬಳೆ, ಭುಜಬಂಧ, ಕಾಲ್ಗಡಗ, ಸೀರೆ, ರವಕೆಯನ್ನು ಧರಿಸಿದ್ದಾಳೆ. ಈಕೆಯ ಅಕ್ಕಪಕ್ಕದಲ್ಲಿ ಆನೆಗಳ ಸೊಂಡಿಲು ಚಾಚಿಕೊಂಡಂತೆ ಕುಳಿತಿದೆ. ಆನೆಯ ಕೊರಳಲ್ಲಿ ಗೆಜ್ಜೆ ಸರವಿದೆ. ಪ್ರಸ್ತುತ ಮೂರ್ತಿಶಿಲ್ಪವು ಪರ್ಯಂಸನ ಭಂಗಿಯಲ್ಲಿದೆ. ಇದು ಈ ಗಜಲಕ್ಷ್ಮಿ ಶಿಲ್ಪದ ವೈಶಿಷ್ಟ್ಯತೆಯಾಗಿದೆ.

**ಸರಸ್ವತಿ ಶಿಲ್ಪ**

ಪ್ರಸ್ತುತ ಅಧ್ಯಯನ ಪರಿಸರದ ಕೊಡ್ಲಾ ಗ್ರಾಮದ ಶಂಭುಲಿಂಗೇಶ್ವರ ದೇವಾಲಯದ ಆವರಣದಲ್ಲಿ ಸರಸ್ವತಿ ಶಿಲ್ಪವಿದೆ. ಸರಸ್ವತಿ ಚತುರ್ಬಾಹುಗಳಲ್ಲಿ ಹೊಂದಿದ್ದಾಳೆ. ಈಕೆಯ ಹಿಂದಿನ ಬಲಗೈ ಮತ್ತು ಎಡಗೈಯಲ್ಲಿನ ಆಯುಧಗಳು ಮುರಿದಿವೆ. ಮುಂದಿನ ಬಲಕೈ ಮುರಿದಿದೆ. ಎಡಗೈಯಲ್ಲಿ ಪುಸ್ತಕವನ್ನು ಹಿಡಿದಿದ್ದಾಳೆ. ಈಕೆಯ ಕರಂಡಮಕುಟ, ಕರ್ಣಕುಂಡಲ, ಕೊರಳಹಾರ, ಭುಜಬಂಧ, ಕಂಕಣ, ಸೊಂಟಪಟ್ಟಿ, ಉರುದಾಮ, ಕಾಲ್ಗಡಗ, ಪಾದಸರವನ್ನು ಧರಿಸಿದ್ದಾಳೆ. ಪ್ರಭಾವಳಿಯು ಮಕರ ತೋರಣದಿಂದ ಆರಂಭವಾಗಿ ಕೀರ್ತಿಮುಖದ ಕೆತ್ತನೆಯಿಂದ

ಕೂಡಿದೆ. ಪ್ರಸ್ತುತ ಮೂರ್ತಿಶಿಲ್ಪವು ಸುಖಾಸನ ಭಂಗಿಯಲ್ಲಿದೆ. ಇದು ಈ ಪರಿಸರದಲ್ಲಿ ದೊರೆತಂತಹ ಅಪರೂಪದ ಮೂರ್ತಿಶಿಲ್ಪವಾಗಿದೆ.

**ಸಪ್ತಮಾತೃಕೆಯರು**

ಶಾಕ್ತ ಶಿಲ್ಪಗಳಲ್ಲಿ ಸಪ್ತಮಾತೃಕೆಯ ಶಿಲ್ಪಗಳು ಪ್ರಮುಖವಾಗಿವೆ. ಒಂದೇ ಶಿಲ್ಪದಲ್ಲಿ ಒಂಬತ್ತು ದೇವರುಗಳನ್ನು ತೋರಿಸಲಾಗುತ್ತದೆ. ಸಪ್ತಮಾತೃಕೆಯರ ಶಿಲ್ಪದ ಬಲಭಾಗದಲ್ಲಿ ಗಣಪತಿ ಹಾಗೂ ಎಡಭಾಗದಲ್ಲಿ ವೀರಬಾಹುವಿನ ಶಿಲ್ಪವನ್ನು ಸಾಮಾನ್ಯವಾಗಿ ಕಾಣುತ್ತೇವೆ. ಸಪ್ತಮಾತೃಕೆಯರ ಶಿಲ್ಪಗಳ ಜೊತೆಗೆ ಅವರ ವಾಹನಗಳನ್ನು ಪೀಠದಲ್ಲಿ ಚಿಕ್ಕದಾಗಿ ಕಂಡಿಸಿರುತ್ತಾರೆ.

ಬ್ರಾಹ್ಮಿ– ಬ್ರಹ್ಮನ ಹೆಂಡತಿ – ಹಂಸ

ಮಹೇಶ್ವರಿ – ಶಿವನ ಹೆಂಡತಿ – ನಂದಿ

ಕೌಮಾರಿ – ಕಾರ್ತಿಕೇಯನ ಹೆಂಡತಿ – ನವಿಲು

ವೈಷ್ಣವಿ – ವಿಷ್ಣುವಿನ ಹೆಂಡತಿ – ಗರುಡ

ವರಾಹಿ – ವರಾಹನ ಹೆಂಡತಿ – ನಂದಿ

ಇಂದ್ರಾಣಿ – ಇಂದ್ರನ ಹೆಂಡತಿ – ಆನೆ

ಚಾಮುಂಡಿ – ಹುಲಿ, ಸಿಂಹ

ಪ್ರಸ್ತುತ ಅಧ್ಯಯನ ಪರಿಸರದಲ್ಲಿ ರಾಷ್ಟ್ರಕೂಟರ ಕಾಲದಲ್ಲಿ ಕಡಿಮೆ ಸಪ್ತಮಾತೃಕೆಯರ ಶಿಲ್ಪಗಳು ಕಂಡರೆ ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯಗಳಲ್ಲಿ ಹೆಚ್ಚಿನದಾಗಿ ಸಪ್ತಮಾತೃಕೆಯ ಶಿಲ್ಪಗಳು ಕಂಡುಬರುತ್ತವೆ. ಪೂಜಿಸುವ ದೃಷ್ಟಿಯಿಂದ ಪ್ರತ್ಯೇಕವಾದ ದೇವಕೋಷ್ಠಕವನ್ನು ನಿರ್ಮಿಸಿ ಅದರಲ್ಲಿ ಪ್ರತಿಷ್ಠಾಪಿಸಿರುವುದು ಕಂಡುಬರುತ್ತದೆ. ಪ್ರಸ್ತುತ ಅಧ್ಯಯನದ ಪರಿಸರದಲ್ಲಿ ಶಂಭುಲಿಂಗೇಶ್ವರ ದೇವಾಲಯ ಆವರಣ ಹಾಗೂ ತೆಂಗಳಿಯ ಸೂರ್ಯನಾರಾಯಣ ದೇವಾಲಯದ ಮುಂಭಾಗದಲ್ಲಿ ಬಿದ್ದಿದ್ದೆ ಅಲ್ಲದೆ ರಾವೂರಿನ ಅನಂತಶಯನ ದೇವಾಲಯದ ಹಿಂಭಾಗದಲ್ಲಿರುವ ಭೂಮಾಂತರ್ಗತ ಗುಡಿ ಪ್ರವೇಶದಲ್ಲಿ ಒಡೆದು ಹೋದ ಹಾಗೂ ಕೋಡ್ಲಾದ ಚೌಡಮಾಯೆ ಶಾಕ್ತ ದೇವಾಲಯದ ಮುಂಭಾಗಗಳಲ್ಲಿ ಸಪ್ತಮಾತೃಕೆಯರ ಶಿಲ್ಪಗಳಿವೆ. ಈ ರೀತಿಯ ಸಪ್ತಮಾತೃಕೆಯರ ಶಿಲ್ಪಗಳು ಪ್ರಸ್ತುತ ಪರಿಸರದಲ್ಲಿ ಸಿಗುವುದರಿಂದ ಈ ಪರಿಸರದಲ್ಲಿ ರಾಷ್ಟ್ರಕೂಟರು ಮತ್ತು ಕಲ್ಯಾಣದ ಚಾಲುಕ್ಯರಿಗೂ ಶಕ್ತಿ ದೇವತೆಗಳಿಗೂ ನಿಕಟವಾದ ಸಂಬಂಧವಿರಬೇಕು. ಹಾಗಾಗಿ ಶಾಕ್ತ ದೇವತೆಗಳಿಗೆ ಸಂಬಂಧಿಸಿದ ಸ್ತ್ರೀ ದೇವಾಲಯಗಳು ನಿರ್ಮಾಣವಾಗಿವೆ. ಇಲ್ಲಿ ಪ್ರಮುಖ ಸ್ತ್ರೀ ದೇವಾಲಯಗಳು ಹಾಗೂ ಶಾಕ್ತ ಶಿಲ್ಪಗಳು ಕಂಡುಬರುವುದು. ಸನ್ನತಿಯ ಚಂದ್ರಲಾಂಬ ಕೊಡ್ಲಾದ ಚೌಡಮಾಯೇ, ಅಲ್ಲೂರಿನ ದುರ್ಗ, ದಿಗ್ಗಾವಿಯ ಬ್ರಹ್ಮಲಾಂಬಿಕೆ

ದೇವಾಲಯಗಳು ನಿರ್ಮಾಣದ ಜೊತೆಗೆ ದೇವಿಯ ಶಿಲ್ಪಗಳು ನಿರ್ಮಾಣವಾಗಿರುವುದು ಕಂಡುಬರುತ್ತದೆ.

### ಇತರೆ ಪಂಥಕ್ಕೆ ಸಂಬಂಧಿಸಿದ ಮೂರ್ತಿಶಿಲ್ಪಗಳು

ಇತರೆ ಪಂಥಕ್ಕೆ ಸಂಬಂಧಿಸಿದ ಮೂರ್ತಿಶಿಲ್ಪಗಳಲ್ಲಿ ಪ್ರಮುಖವಾಗಿ ಬೌದ್ಧ ಧರ್ಮದ ಮೂರ್ತಿ ಶಿಲ್ಪಗಳು ಮಾತ್ರವೆ ಕಂಡುಬರುತ್ತವೆ. ಅವು ಪ್ರಸ್ತುತ ಅಧ್ಯಯನ ಪರಿಸರದ ಸನ್ನತಿಯಿಂದ ೩ ಕಿ.ಮೀ. ಅಂತರದಲ್ಲಿರುವ ಕನಗನಹಳ್ಳಿಯಲ್ಲಿ ಬೌದ್ಧ ಧರ್ಮಕ್ಕೆ ಸಂಬಂಧಿಸಿದ ನೂರಾರು ಸುಂದರ ಶಿಲ್ಪಗಳು ಅಲಂಕಾರಕಗಳು ಮತ್ತು ಕಮಲಪುಷ್ಪದ ವಿನ್ಯಾಸಗಳನ್ನು ಹೊಂದಿರುವ ಶಿಲ್ಪಗಳು ದೊರಕಿವೆ. ಅಲ್ಲದೆ ಇನ್ನು ಇಲ್ಲಿ ಅನೇಕ ಶಿಲ್ಪ ಫಲಕಗಳೂ ದೊರೆತಿದ್ದು ಇಲ್ಲಿ ಕುಳಿತಿರುವ ಹಾಗೂ ನಿಂತಿರುವ ಅಮರವತಿ ಶಿಲ್ಪ ಶೈಲಿಯ ಬುದ್ಧನ ವಿಗ್ರಹಗಳು ದೊರೆತಿವೆ. ಅದರಲ್ಲಿ ಅತ್ಯಂತ ಪ್ರಮುಖವಾದ ಮತ್ತು ಅಪರೂಪದ ಶಿಲ್ಪವೆಂದರೆ ಮೌರ್ಯ ಚಕ್ರವರ್ತಿ ಅಶೋಕನ ಉಬ್ಬುಶಿಲ್ಪವಿರುವ ಫಲಕ. ಗಾಂಭೀರ್ಯದಿಂದ ನಿಂತಿರುವ ಅಶೋಕನ ಪಕ್ಕದಲ್ಲಿ ಅವನ ರಾಣಿ ಮತ್ತು ಇಬ್ಬರು ಚಾಮರಧಾರಿ ಸ್ತ್ರೀಯರು ನಿಂತಿದ್ದಾರೆ. ಈ ಶಿಲ್ಪ ಫಲಕದಲ್ಲಿ ತೋರಿಸಿರುವ ವ್ಯಕ್ತಿ ಅಶೋಕ ಎನ್ನಲು ಶಾತವಾಹನರ ಕಾಲದ ಬ್ರಾಹ್ಮಿ ಲಿಪಿಯಲ್ಲಿ ರಾಯ ಅಶೋಕ ಎನ್ನುವ ಬರಹವಿದೆ. ಈ ರೀತಿಯಾದ ಕಾರಣಗಳಿಂದ ಇತರ ಪಂಥದ ದೇವಾಲಯಗಳ ಶಿಲ್ಪಗಳಲ್ಲಿ ಇವು ಪ್ರಮುಖವಾಗಿವೆ.

ಇತರೆ ಪಂಥಕ್ಕೆ ಸೇರಿದ ಇಸ್ಲಾಂ ಮತ್ತು ಸೂಫಿಪಂಥಗಳಲ್ಲಿ ಯಾವುದೇ ಸಂತನ ಮತ್ತು ಇಸ್ಲಾಂ ಧರ್ಮದ ಮೂರ್ತಿಶಿಲ್ಪಗಳು ಸಿಗುವುದಿಲ್ಲ. ಕೇವಲ ಅವರ ದರ್ಗಾವು ಕಂಡುಬರುತ್ತವೆ. ಹಿಂದೂ ಧರ್ಮದಲ್ಲಿ ಸಮಾಧಿಗಿಂತಲೂ ಅತ್ಯಂತ ಪ್ರಾಮುಖ್ಯ ಪಡೆದಿರುತ್ತವೆ. ಈ ದರ್ಗಾವನ್ನೇ ಅವರ ಪೂಜಾ ಸ್ಥಳವಾಗಿರುತ್ತವೆ. ಅದರ ಮೇಲೆನೆ ಜುಮ್ಮ ಮಸೀದಿ ಕಟ್ಟಿ ಪೂಜಿಸುವ ಪರಿಪಾಠವನ್ನು ಕ್ರಿ.ಶ. ೧೩–೧೪ನೆಯ ಶತಮಾನದ ಪೂರ್ವದಿಂದಲೂ ರೂಢಿಯಲ್ಲಿರುವುದು ವಿಶೇಷತೆಯಾಗಿದೆ.

### ಜೈನ ಮೂರ್ತಿಶಿಲ್ಪಗಳು

ಜೈನ ಶಿಲ್ಪಗಳು ಎಂದು ಕರೆಯಲಾಗುವ ಕುರುಹುಗಳು ಸಿಂಧೂ ನಾಗರಿಕತೆಯ ಮುದ್ರೆಗಳು, ಋಗ್ವೇದದಲ್ಲಿ ಕಂಡುಬರುತ್ತವೆ. ಜೈನಧರ್ಮದಲ್ಲಿ ಚತುರ್ವಿಂಶತಿ ತೀರ್ಥಂಕರರಿದ್ದಾರೆ. ಇದು ವೃಷಭನಾಥನಿಂದ ಆರಂಭವಾಗಿ ಮಹಾವೀರನವರೆಗಿನ ಶಿಲ್ಪಗಳನ್ನು ಒಳಗೊಂಡಿರುತ್ತದೆ. ವೃಷಭನಾಥ, ನೇಮಿನಾಥ ಮತ್ತು ಮಹಾವೀರನ ಶಿಲ್ಪಗಳು ಸಾಮಾನ್ಯವಾಗಿ ಕುಳಿತ ಭಂಗಿಯಲ್ಲಿರುವುದು ಕಂಡುಬರುತ್ತದೆ. ಉಳಿದ ತೀರ್ಥಂಕರರ ಶಿಲ್ಪಗಳು ಸಮಸ್ಥಾನಕ ಇಲ್ಲವೆ ಕಾಯೋತ್ಸರ್ಗ ಭಂಗಿಯಲ್ಲಿರುವುದು ಕಾಣಬಹುದು. ಜೈನ ಶಿಲ್ಪಕಲೆಯನ್ನು ಉಳಿದ ಧರ್ಮದ ಶಿಲ್ಪಕಲೆಯೊಂದಿಗೆ ತುಲನಾತ್ಮಕ ಅಧ್ಯಯನ ಮಾಡಿ ನೋಡಿದರೆ ಜೈನ ಶಿಲ್ಪಕಲೆ ಹೆಚ್ಚಿನ

ಬೆಳವಣಿಗೆ ಕಾಣದಿರುವುದು ಕಂಡುಬರುತ್ತದೆ. ಉದಾಹರಣೆಗೆ ತೀರ್ಥಂಕರರ ಶಿಲ್ಪಗಳಲ್ಲಿ ಹೆಚ್ಚಿನ ಬದಲಾವಣೆಗಳು ಕಾಣುವುದಿಲ್ಲ. ೨೪ ತೀರ್ಥಂಕರರ ಲಕ್ಷಣಗಳು ಒಂದೇ ತೆರನಾಗಿ ಕಾಣುವುದರಿಂದ ತೀರ್ಥಂಕರರನ್ನು ಗುರುತಿಸುವಾಗ ಪೀಠದ ಮೇಲಿನ ಲಾಂಛನದಿಂದ ಗುರುತಿಸಲಾಗುತ್ತದೆ. ವೃಷಭನಿಗೆ ಜಟಾವಲಕುಟ, ಸುಪಾರ್ಶ್ವನಾಥನಿಗೆ ತಲೆಯ ಮೇಲೆ ಐದು ತಲೆಯ ಸರ್ಪ, ಪಾರ್ಶ್ವನಾಥನ ತಲೆಯ ಮೇಲೆ ಏಳು ತಲೆಯ ಸರ್ಪದ ಕೆತ್ತನೆ ಕಾಣಬಹುದು.

ಜೈನ ಶಿಲ್ಪಗಳು ಅಸೀನ ಇಲ್ಲವೆ ಸ್ಥಾನಿಕ ಭಂಗಿಯಲ್ಲಿ ಕಂಡುಬರುತ್ತವೆ. ಆಸೀನ/ಪದ್ಮಾಸನ/ಪರ್ಯಂಕಾಸನ ಆಸೀನನಾಗಿದ್ದಾಗ ಎಡಗಾಲ ಮೇಲೆ ಬಲಗಾಲು ಇಟ್ಟು ಪಾದದ ಮೇಲೆ ಹಸ್ತವನ್ನು ಒಂದರ ಮೇಲೊಂದು ಇಟ್ಟು ಪದ್ಮಾಸನವನ್ನು ಧ್ಯಾನಸ್ಥನಾದಂತೆ ಕುಳಿತಿರುವುದೇ ಪರ್ಯಂಕಾಸನ, ಸ್ಥಾನಿಕ/ಕಾಯೋತ್ಸರ್ಗೇ/ಖಡ್ಗಾಸನದಲ್ಲಿ ದೇಹವನ್ನು ದಂಡಿಸಿದಂತೆ ಕೈಗಳನ್ನು ಇಳಿಬಿಟ್ಟ ಸಮಭಂಗಿಯಲ್ಲಿ ನಿಂತಿರುವುದೇ ಖಡ್ಗಾಸನ, ನಗ್ನ, ನಿರಾಭರಣ, ಗುಂಗುರು ಕೂದಲು, ಕೆಲವೊಮ್ಮೆ ಎದೆಯ ಮೇಲೆ ಶ್ರೀವತ್ಸ ಚಿಹ್ನೆಗಳು ಜೈನ ಶಿಲ್ಪಗಳ ಲಕ್ಷಣಗಳಾಗಿವೆ. ಜೈನ ಧರ್ಮದಲ್ಲಿ ಎರಡು ಪಂಗಡಗಳನ್ನು ಕಾಣಬಹುದು. ಶ್ವೇತಾಂಬರ, ದಿಗಂಬರ ಶ್ವೇತಾಂಬರ ಜಿನಮೂರ್ತಿಗೆ ಬಟ್ಟೆಗಳನ್ನು ತೊಡಿಸಿರುತ್ತಾರೆ. ದಿಗಂಬರ ಜಿನ ಶಿಲ್ಪವು ನಗ್ನವಾಗಿರುತ್ತದೆ. ಪ್ರಸ್ತುತ ಅಧ್ಯಯನ ಪರಿಸರದಲ್ಲಿ ರಾಷ್ಟ್ರಕೂಟ ಆಳ್ವಿಕೆಗಿಂತಲೂ ಕಲ್ಯಾಣ ಚಾಲುಕ್ಯರ ಕಾಲಾವಧಿಯಲ್ಲಿ ದಿಗಂಬರ ಪಂಥವೇ ಹೆಚ್ಚು ಪ್ರಚಲಿತವಿದ್ದದ್ದು ತಿಳಿದುಬರುತ್ತದೆ.[೪೧]

**ಪಾರ್ಶ್ವನಾಥನ ಶಿಲ್ಪಗಳು**

ಪ್ರಸ್ತುತ ಅಧ್ಯಯನ ಪರಿಸರದ ಐತಿಹಾಸಿಕ ಗ್ರಾಮವಾದ ದಂಡೋತಿಯಲ್ಲಿ ಪಾರ್ಶ್ವನಾಥನ ಶಿಲ್ಪವು ಜೈನ ಬಸದಿಯ ಹೊರಭಾಗದಲ್ಲಿ ಬಿದ್ದಿದೆ. ಇದು ಸ್ಥಾನಿಕ/ಕಾಯೋತ್ಸರ್ಗ/ಖಡ್ಗಾಸನದಲ್ಲಿ ದೇಹವನ್ನು ದಂಡಿಸಿದಂತೆ ಕೈಗಳನ್ನು ಇಳಿಬಿಟ್ಟ ಸಮಭಂಗಿಯಲ್ಲಿ ನಿಂತಿರುವ ಶಿಲ್ಪವು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿದೆ. ಈ ಶಿಲ್ಪವು ನಗ್ನ, ನಿರಾಭರಣ, ಗುಂಗುರು ಕೂದಲು, ಎದೆಯ ಮೇಲೆ ಶ್ರೀವತ್ಸ ಚಿಹ್ನೆಯು ಕಂಡುಬರುತ್ತದೆ. ಜೋತುಬಿದ್ದ ಕಿವಿಗಳು, ಗಂಭೀರವಾದ ಮುಖಭಾವ, ತಲೆಯ ಮೇಲೆ ಏಳು ತಲೆಯ ನಾಗ ಅದರ ಮೇಲೆ ಮುಕ್ಕೊಡೆ ಈ ಮೂರ್ತಿಶಿಲ್ಪದ ವೈಶಿಷ್ಟ್ಯತೆಯಾಗಿದೆ. ಪಾರ್ಶ್ವನಾಥನ ಬಲ ಎಡಕ್ಕೆ ಧರಣೇಂದ್ರ ಯಕ್ಷ ಮತ್ತು ಪದ್ಮಾವತಿ ಯಕ್ಷಿಣಿಯರಿದ್ದಾರೆ. ಪ್ರಭಾವಳಿಯ ಸುತ್ತ ನಾಗ ತೋರಣಾಲಂಕೃತ ಕೆತ್ತನೆಯಿದೆ. ತುದಿಗೆ ಕೀರ್ತಿಮುಖವಿದೆ. ಇವು ಈ ಮೂರ್ತಿ ಶಿಲ್ಪದ ಲಕ್ಷಣಗಳಾಗಿವೆ. ಸೇಡಂನ ಶಾಂತಿನಾಥ ಬಸದಿಯಲ್ಲೂ ಇದೇ ತರದ ಪಾರ್ಶ್ವನಾಥನ ಶಿಲ್ಪವು ಬಸದಿಯ ಒಳಗಡೆ ಕಂಡುಬರುತ್ತದೆ.

**ಮಹಾವೀರನ ಶಿಲ್ಪಗಳು**

ಪ್ರಸ್ತುತ ಅಧ್ಯಯನದ ಚಿತ್ತಾಪೂರ ತಾಲೂಕಿನಲ್ಲಿ ಮಹಾವೀರನ ಮೂರ್ತಿಶಿಲ್ಪವು ಕಂಡುಬರುತ್ತದೆ. ತಾಲೂಕಿನ ಬಸದಿಯಲ್ಲಿ ಈ ಮೂರ್ತಿಶಿಲ್ಪವು ಪದ್ಮಾಸನದಲ್ಲಿ ಧ್ಯಾನ

ಮುದ್ರೆಯಲ್ಲಿದೆ. ಜೋತುಬಿದ್ದ ಕಿವಿಗಳು, ಗಂಭೀರವಾದ ಮುಖಭಾವ, ಗುಂಗುರು ಕೂದಲು, ಪದ್ಮಾಸನದಲ್ಲಿ ಕುಳಿತ ತೀರ್ಥಂಕರನ ಕಾಲುಗಳು ಒಂದರ ಮೇಲೊಂದು, ತಲೆಯ ಮೇಲಿನ ಮುಕ್ಕೊಡೆ ಈ ಮೂರ್ತಿಶಿಲ್ಪದ ವೈಶಿಷ್ಟ್ಯತೆಯಾಗಿದೆ. ಮಹಾವೀರನ ಶಿಲ್ಪದ ಎಡಬಲಕ್ಕೆ ಮಾತಂಗ ಯಕ್ಷ ಮತ್ತು ಸಿದ್ಧಾಯಿಕಾ ಯಕ್ಷಿಣಿಯರಿದ್ದಾರೆ. ಪ್ರಭಾವಳಿಯ ಸುತ್ತ ನಾಗ ತೋರಣಾಲಂಕೃತ ಕೆತ್ತನೆಯಿದೆ. ಇವು ಈ ಚಿತ್ತಾಪೂರದ ಮಹಾವೀರನ ಶಿಲ್ಪದ ಲಕ್ಷಣವಾಗಿದೆ.

**ಅಡಿಟಿಪ್ಪಣಿಗಳು**

೧. ಅಪರ್ಣ ಕೂ.ಸ., ೧೯೯೯, ದೇವಾಲಯ ವಾಸ್ತುಶಿಲ್ಪ ಪರಿಚಯ, ಪು.೧೨

೨. ಗೋಪಾಲ ಬಾ.ರಾ., ೨೦೦೩, ಕರ್ನಾಟಕದ ನೆಲೆಗಳು (ಸಂ–೪) ಪು.೩೩

೩. ಪ್ರಭಾಕರ್ ಎಂ.ಎನ್., ೨೦೧೧, ದೇವಾಲಯವಾಸ್ತು, ಪು.೧೭

೪. ಚಿದಾನಂದಮೂರ್ತಿ ಎಂ., ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೧೯೩

೫. ಪ್ರಭಾಕರ್ ಎಂ.ಎನ್., ೨೦೦೦, ದೇವಾಲಯ ವಾಸ್ತು ಚಂದ್ರಿಕೆ, ಪು.೩೭

೬. ಅಪರ್ಣ ಕೂ.ಸ., ಪೂರ್ವೋಕ್ತ, ೧೯೯೯, ಪು.೬೪

೭. ಪ್ರಭಾಕರ್ ಎಂ.ಎನ್., ೨೦೦೦, ದೇವಾಲಯ ವಾಸ್ತುಚಂದ್ರಿಕೆ, ಪು.೩೭

೮. ಅಪರ್ಣ ಕೂ.ಸ., ಪೂರ್ವೋಕ್ತ, ೧೯೯೯, ಪು.೬೧

೯. ಗೋಪಾಲ ಆರ್ (ಸಂ), ೨೦೦೭, ಗುಲ್ಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.೩೭೪

೧೦. ಅದೇ, ಪು.೩೭೪

೧೧. ಮಹದೇವ ಸಿ., ವಾಸುದೇವ ಬಡಿಗೇರ ಮತ್ತು ರಮೇಶನಾಯಕ, ಕರ್ನಾಟಕ ದೇವಾಲಯ ಕೋಶ, ಕಲಬುರಗಿ ಜಿಲ್ಲೆ, ಪು.೩೨೦

೧೨. ಪಾಟೀಲ ಎಂ.ಬಿ. (ಸಂ), ೧೯೯೭, ಗುಲ್ಬರ್ಗಾ ಜಿಲ್ಲೆಯ ಗ್ಯಾಸೆಟಿಯರ್, ಪು.೬೮೬

೧೩. ಮಹದೇವ ಸಿ., ವಾಸುದೇವ ಬಡಿಗೇರ ಮತ್ತು ರಮೇಶನಾಯಕ, (ಸಂ) ಪೂರ್ವೋಕ್ತ, ಪು.೨೫೫

೧೪. ಗೋಪಾಲ ಆರ್. (ಸಂ), ಪೂರ್ವೋಕ್ತ, ಪು.೩೭೧

೧೫. ಮಹದೇವ ಸಿ., ವಾಸುದೇವ ಬಡಿಗೇರ ಮತ್ತು ರಮೇಶನಾಯಕ, (ಸಂ) ಪೂರ್ವೋಕ್ತ, ಪು.೨೨೧–೨೨೨

೧೬. ಅದೇ, ಪು.೩೨೧-೩೨೨

೧೭. ಹನುಮಾಕ್ಷಿ ಗೋಗಿ, ೧೯೯೬, ಗುಲ್ಬರ್ಗಾ ಜಿಲ್ಲೆಯ ಶಾಸನಗಳು (ಶಾ.ಸಂ.೧), ಪು.೧೮೩

೧೮. ಮಹದೇವ ಸಿ., ವಾಸುದೇವ ಬಡಿಗೇರ ಮತ್ತು ರಮೇಶನಾಯಕ, (ಸಂ) ಪೂರ್ವೋಕ್ತ, ಪು.೨೦೩-೨೦೪

೧೯. ಅದೇ, ಪು.೨೦೦

೨೦. ಅದೇ, ಪು.೨೧೪-೨೧೫

೨೧. ಅದೇ, ಪು.೧೬೮

೨೨. ಹನುಮಾಕ್ಷಿಗೋಗಿ, ೧೯೯೬, ಪೂರ್ವೋಕ್ತ, ಪು.೧೩೬

೨೩. ಗೋಪಾಲ ಆರ್. (ಸಂ), ಪೂರ್ವೋಕ್ತ, ಪು.೩೫೩

೨೪. ಮಹದೇವ ಸಿ., ವಾಸುದೇವ ಬಡಿಗೇರ ಮತ್ತು ರಮೇಶನಾಯಕ, (ಸಂ) ಪೂರ್ವೋಕ್ತ, ಪು.೩೨೪-೩೨೫

೨೫. ಅದೇ, ಪು.೩೨೪-೩೨೫

೨೬. ಪಾಟೀಲ ಎ.ಂಬಿ. (ಸಂ), ೧೯೯೭, ಪೂರ್ವೋಕ್ತ, ಪು.೬೯೭-೬೯೮

೨೭. ಮಹದೇವ ಸಿ., ವಾಸುದೇವ ಬಡಿಗೇರ ಮತ್ತು ರಮೇಶನಾಯಕ, (ಸಂ) ಪೂರ್ವೋಕ್ತ, ಪು-೧೮೩-೧೮೪

೨೮. ಅದೇ, ಪು.೧೯೨-೧೯೩

೨೯. ಅದೇ, ಪು.೨೨೬

೩೦. ಅದೇ, ಪು.೩೧೭-೩೧೮

೩೧. ಎಂಟಿಕ್ವೇರಿಯನ್ ರಿಮೇನ್ಸ್ ಇನ್ ಹೈದರಬಾದ್ ಸ್ಟೇಟ್, ೧೯೫೩, ಪು.೨೦ ಡೈರೆಕ್ಟರ್ ಆರ್ಕಿಯಾಲಾಜಿಕಲ್ ಡಿಪಾರ್ಟ್‌ಮೆಂಟ್ ಗವರ್ನಮೆಂಟ್ ಆಫ್ ಹೈದರಾಬಾದ್

೩೨. ಪಾಟೀಲ ಎ.ಂಬಿ. (ಸಂ), ೧೯೯೭, ಪೂರ್ವೋಕ್ತ, ಪು.೭೨೬

೩೩. ಮಹದೇವ ಸಿ., ವಾಸುದೇವ ಬಡಿಗೇರ ಮತ್ತು ರಮೇಶನಾಯಕ, (ಸಂ) ಪೂರ್ವೋಕ್ತ, ಪು.೨೧೦-೨೧೧

೩೪. ಅದೇ, ಪು.೧೮೬-೧೮೭

೩೫. ಅದೇ, ಪು.೨೧೨

೩೬. ಅದೇ, ಪು.೨೪೮

೩೭. ಅದೇ, ಪು.೧೮೦–೧೮೧

೩೮. ಮೂರ್ತಿ ಕೆ.ಎಲ್.ಎನ್., ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ, ಪು.೧೫

೩೯. ಮಹದೇವ ಸಿ., ವಾಸುದೇವ ಬಡಿಗೇರ ಮತ್ತು ರಮೇಶನಾಯಕ, (ಸಂ) ಪೂರ್ವೋಕ್ತ, ಪು.೩೧೬–೩೧೭

೪೦. ಅದೇ, ಪು.೨೫೨–೨೫೪

೪೧. ಅದೇ, ಪು.೨೫೩

೪೨. ಅದೇ, ಪು.೨೦೬–೨೦೭

೪೩. ನರಸಿಂಹಮೂರ್ತಿ ಎ.ವಿ., ಗೋಪಾಲ್ ಆರ್, ೨೦೦೭, ಕರ್ನಾಟಕ ವಾಸ್ತುಶಿಲ್ಪ ಉದ್ಯಾನ, ಪು.೨೫

೪೪. ಅದೇ, ಪು.೨೫

೪೫. ಪಾಟೀಲ ಎ.ಂಬಿ. (ಸಂ), ೧೯೯೭, ಪೂರ್ವೋಕ್ತ, ಪು.೭೫೭

೪೬. ಮಹದೇವ ಸಿ., ವಾಸುದೇವ ಬಡಿಗೇರ ಮತ್ತು ರಮೇಶನಾಯಕ, (ಸಂ) ಪೂರ್ವೋಕ್ತ, ಪು.೩೨೩–೩೨೪

೪೭. ಅದೇ, ಪು.೩೨೧

೪೮. ಪಾಟೀಲ ಎ.ಂಬಿ. (ಸಂ), ೧೯೯೭, ಪೂರ್ವೋಕ್ತ, ಪು.೭೨೭

೪೯. ಹನುಮಾಕ್ಷಿಗೋಗಿ, ೧೯೯೬, ಪೂರ್ವೋಕ್ತ, ಪು.೪೯೬

೫೦. ಮಹದೇವ ಸಿ., ವಾಸುದೇವ ಬಡಿಗೇರ ಮತ್ತು ರಮೇಶನಾಯಕ, (ಸಂ) ಪೂರ್ವೋಕ್ತ, ಪು.೧೭೯–೧೮೦

೫೧. ಅದೇ, ಪು.೧೯೩

೫೨. ಅದೇ, ಪು.೧೯೭

೫೩. ಕರುಗುಂದ ಟಿ. ಪಂಕಜಾಕ್ಷ., ೨೦೦೬, ಶಿಲ್ಪ ಸೌಂದರ್ಯ, ಪು.೩

೫೪. ಶಿವರಾಮ ಕಾರಂತ ಕೆ., ೧೯೭೫, ಭಾರತೀಯ ಶಿಲ್ಪ, ಪು.೧

೫೫. ತಿಪ್ಪೇರುದ್ರಸ್ವಾಮಿ ಎಚ್., ೧೯೯೮, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು.೬೨೫

೫೬. ದತ್ತಾತ್ರೇಯ ಜಿ., ಕುಲಕರ್ಣಿ., ೨೦೦೬, ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ) ಪು.೨೬೩

೫೭. ಪಾಟೀಲ ಎ.ಂಬಿ. (ಸಂ), ೧೯೯೭, ಪೂರ್ವೋಕ್ತ, ಪು.೭೯೫-೭೯೬

೫೮. ರಾಮಚಂದ್ರರಾವ್ ಎಸ್.ಕೆ., ೧೯೭೯, ಭಾರತದ ದೇವಾಲಯ ನೆಲೆ ಹಿನ್ನೆಲೆ, ಪು.೧೩೦-೧೬೦

೫೯. ಅದೇ, ಪು.೧೨೪

೬೦. ಅದೇ, ಪು.೩೩೧

೬೧. ಭಟಸೂರಿ ಕೆ.ಜಿ., ೨೦೧೧, ಹಾಡುವಳ್ಳಿ, ಜೈನ ಶಾಸನ ವಾಸ್ತುಶಿಲ್ಪ, ಮೂರ್ತಿಶಿಲ್ಪ, ಪು.೩೯



# ಅಧ್ಯಾಯ: ನಾಲ್ಕು

# ಶಾಸನಗಳು ಮತ್ತು ಸ್ಮಾರಕ ಶಿಲ್ಪಗಳು

## ೪.೧ ಶಾಸನಗಳು

ಇತಿಹಾಸ ರಚನೆಯಲ್ಲಿ ಶಾಸನಗಳು ಪ್ರಮುಖ ಪಾತ್ರ ವಹಿಸುತ್ತವೆ. ಹಾಗಾಗಿ ಶಾಸನಗಳು ಇತಿಹಾಸದ ಬೆನ್ನೆಲುಬು ಎಂದರೆ ತಪ್ಪಾಗಲಾರದು. ಶಾಸನಗಳ ಪ್ರಾಚೀನತೆಯನ್ನು ಗಮನಿಸುವುದಾದರೆ ಕ್ರಿಪೂ. ನಾಲ್ಕು–ಐದನೇ ಶತಮಾನದಲ್ಲಿ ಅಲ್ಲಲ್ಲಿ ಶಾಸನಗಳು ಕಂಡುಬಂದರೆ ಮೌರ್ಯರ ನಂತರದ ಕಾಲದಲ್ಲಿ ಹೆಚ್ಚಿನ ಶಾಸನಗಳು ದೊರೆತಿವೆ. ಆ ಕಾಲದ ನಂತರವೇ ಇತಿಹಾಸ ಕಾಲವು ಆರಂಭಾಗುತ್ತದೆ. ಇತಿಹಾಸ ಆರಂಭ ಕಾಲದ ದಾಖಲೆಗಳು, ಶಾಸನಗಳು ಇವು ಇತಿಹಾಸಕ್ಕೆ ಅಗಾಧವಾದ ಮಾಹಿತಿಯನ್ನು ಒದಗಿಸುತ್ತವೆ. ಒಂದು ಸಾಮ್ರಾಜ್ಯದ ಸಾಂಸ್ಕೃತಿಕ ಇತಿಹಾಸವನ್ನು ಪ್ರತಿಬಿಂಬಿಸುವುದಕ್ಕೆ ಶಾಸನಗಳು ಅವಶ್ಯಕ.

### ಶಾಸನದ ಅರ್ಥ ಮತ್ತು ವ್ಯಾಖ್ಯೆಗಳು

ಶಾಸನ ಎಂಬ ಸಂಸ್ಕೃತ ಪದಕ್ಕೆ "ಆಜ್ಞೆ" ಎಂಬುದು ಮೂಲಾರ್ಥ. ಶಾಸನವೆಂಬುದು 'ಶಾಸ್' ಎಂಬ ಧಾತುವಿನಿಂದ ಬಂದಿದೆ. 'ಶಾಸ್' ಎಂಬ ಧಾತುವಿಗೆ ಆಜ್ಞಾಪಿಸು, ರಕ್ಷಿಸು, ನಿಯಂತ್ರಿಸು ಎಂಬ ಅರ್ಥಗಳಿವೆ. ಈ ಶಾಸನಕ್ಕೆ ಸಮಾನಾರ್ಥಕವಾಗಿ ಬಳಕೆಯಾಗುತ್ತಿರುವ ಇಂಗ್ಲಿಷ್‌ನ "Inscription" ಎಂಬ ಪದದಿಂದ ಕರೆಯಲಾಗಿದೆ. ಈ ಶಬ್ದಕ್ಕೆ ಮೂಲತ "ರಾಜಾಜ್ಞೆ" ಎಂಬ ಅರ್ಥವಿದೆ. "Inscrible" ಎಂದರೆ 'ಕೆತ್ತು', 'Inscription" ಎಂದರೆ 'ಕೆತ್ತಿದ್ದು'[೧] ಎಂಬ ಅರ್ಥವನ್ನು ಕೊಡುತ್ತದೆ.

"ಶಾಸನವೆಂದರೆ ಯಾವುದಾದರೊಂದು ಗಟ್ಟಿಯಾದ ಪದಾರ್ಥದ ಮೇಲೆ ಕೊರೆದ ಯಾವುದೇ ಬರಹವೆಂದು ಅಕ್ಷರಶಃ ಅರ್ತವಾಗುತ್ತದೆ."[೨]

"ಶಾಸನವೆಂದರೆ ರಾಜರ ಆಜ್ಞೆಗಳನ್ನು ತಿಳಿಸುವ ಬರಹಗಳನ್ನು ಹೇಳುತ್ತವೆ ಎಂದು ಕೌಟಿಲ್ಯ ತನ್ನ ಅರ್ಥಶಾಸ್ತ್ರದಲ್ಲಿ ಹೇಳಿದ್ದಾರೆ."[೩]

"ಬ್ರಿಟಾನಿಕಾ ವಿಶ್ವಕೋಶದಲ್ಲಿ ಶಾಸನಗಳೆಂದರೆ ಗಟ್ಟಿಯಾದ ಅಥವಾ ಶಾಶ್ವತ ಯಾವುದಾದರೂ ಒಂದು ವಸ್ತುವಿನ ಮೇಲೆ ಕೊರೆದ ದಾಖಲೆಗಳು ಅವು ಬರೆದವಲ್ಲಾ, ಹಸ್ತಪ್ರತಿಗಳಲ್ಲ."[೪]

ಈ ರೀತಿಯಾಗಿ ಶಾಸನಗಳನ್ನು ಹಲವು ವಿದ್ವಾಂಸರು ತಮ್ಮದೇ ಆದ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಒಟ್ಟಿನಲ್ಲಿ ಶಾಸನಗಳೆಂದರೆ ಯಾವುದಾದರೂ ಒಂದು ವಸ್ತುವಿನ ಮೇಲೆ ಲಿಪಿಗಳು ಹಾಳಾಗದಂತೆ ಕೊರೆಯಲ್ಪಟ್ಟಿರುವುದಕ್ಕೆ ಶಾಸನಗಳೆಂದು ಕರೆಯುವರು.

### ೪.೨. ಶಾಸನದ ಮಹತ್ವ ಮತ್ತು ಶಾಸನದ ಪ್ರಕಾರಗಳು

ಇತಿಹಾಸವನ್ನು ಪುನರ್‌ರಚಿಸುವ ಕಾರ್ಯದಲ್ಲಿ ಶಾಸನಗಳ ಪಾತ್ರ ಮಹತ್ವದ್ದಾಗಿದೆ. ಅಂದರೆ ರಾಜ ಮನೆತನಗಳ ರಾಜಕೀಯ ಇತಿಹಾಸವನ್ನು ಕಟ್ಟಿಕೊಡುವುದರಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಶಾಸನಗಳು ಕಾಲಾನುಕ್ರಮದಲ್ಲಿ ನಿರ್ಧರಿಸುತ್ತವೆ. ಶಾಸನಗಳ ಅಧ್ಯಯನದಿಂದ ಭಾಷೆಯ ಬೆಳವಣಿಗೆಯನ್ನು ತಿಳಿಯಬಹುದು. ಇತಿಹಾಸವು ಧಾರ್ಮಿಕ ಕ್ಷೇತ್ರಕ್ಕೆ ಸಂಬಂಧಿಸಿದಂತೆ ರಾಜಮಹಾರಾಜರು ನೀಡಿರುವ ಕೊಡುಗೆಗಳ ಬಗ್ಗೆ ತಿಳಿಸಿಕೊಡುತ್ತವೆ.

ಶಾಸನಗಳು ಸಾಮಾಜಿಕ, ಆರ್ಥಿಕವಾಗಿ ಯಾವ ಸ್ಥಿತಿಯಲ್ಲಿತ್ತು ಮತ್ತು ಸಂಸ್ಕೃತಿ ಇತಿಹಾಸ ಬಗ್ಗೆ ಇತಿಹಾಸ ತಜ್ಞರಲ್ಲಿರುವ ಜ್ಞಾನದ ಕೊರತೆಯನ್ನು ಶಾಸನಗಳ ಅಧ್ಯಯನದಿಂದ ಹೋಗಲಾಡಿಸಿಕೊಳ್ಳಬಹುದು. ಧರ್ಮ, ಭಾಷೆ, ಲಿಪಿ, ಸಾಹಿತ್ಯ ಇತ್ಯಾದಿಗಳ ಮೇಲೆ ಬೆಳಕು ಚೆಲ್ಲುತ್ತದೆ. ಪ್ರಾಚೀನ ಕಾಲದ ಕಾನೂನುಗಳನ್ನು, ಶಾಪ ವಾಕ್ಯಗಳನ್ನು ಈ ಶಾಸನಗಳ ಅಧ್ಯಯನದಿಂದ ತಿಳಿಯಬಹುದು. ಐತಿಹಾಸಿಕ ಘಟನೆಗಳನ್ನು ತಿಳಿಸಿಕೊಡುವಲ್ಲಿ ಶಾಸನಗಳು ಪ್ರಮುಖ ಪಾತ್ರ ವಹಿಸುತ್ತವೆ. ದಾನ ಧರ್ಮಗಳನ್ನು ಮಾಡುತ್ತಿದ್ದ ಕನ್ನಡ ನಾಡಿನ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಳೆದುಬಂದಿದೆ. ವಿದ್ಯೆಗೆ ಪ್ರೋತ್ಸಾಹ ನೀಡುವ ಉದ್ದೇಶದಿಂದ ವಿದ್ಯಾಪೀಠಗಳಿಗೆ ಪಂಡಿತರಿಗೆ ಹಾಗೂ ಮಠ ಮಂದಿರಗಳಲ್ಲಿ ರಾಜರು, ಅಧಿಕಾರಿಗಳು ಹೇರಳವಾಗಿ ದತ್ತಿ ಕೊಟ್ಟಿದ್ದಾರೆ. ಧರ್ಮ ಕಾಯಕವನ್ನು ನಡೆಸುವುದಕ್ಕಾಗಿ ಬಸದಿಗಳನ್ನು ಕಟ್ಟಿದ್ದಾರೆ. ಜನರ ಕಲ್ಯಾಣಕ್ಕಾಗಿ ಕೆರೆ ಕಾಲುವೆಗಳನ್ನು ಊರು ಕೇರಿಗಳನ್ನು ನಿರ್ಮಿಸಿದ್ದಾರೆ. ಹೀಗೆ ಮಾಡಿದ ಕೆಲಸ ಶಾಶ್ವತವಾಗಿ ತಿಳಿಯಲೆಂದು ನಿರಂತರವಾಗಿ ಮುಂದುವರಿಯಲೆಂದು ತಮ್ಮ ಹೆಸರು ಚಿರವಾಗಿ ಉಳಿಯಬೇಕೆಂದು ಶಾಸನಗಳನ್ನು ಹಾಕಿಸಿದ್ದಾರೆ.

ರಾಜ ಮಹಾರಾಜರು ಸಾಮಂತ ನಾಯಕರು ಶಾಸನಗಳನ್ನು ಕೊರೆಸುವಾಗ ಮೂರು ವಿಧದಲ್ಲಿ ಹಾಕಿಸುತ್ತಿದ್ದರು. ಶಿಲಾಶಾಸನ, ಲೋಹಶಾಸನ ಹಾಗೂ ಮಣ್ಣಿನ ವಸ್ತುಗಳು ಹಾಗೂ ಇತರೆ ಸಾಮಾಗ್ರಿಗಳನ್ನು ಆಯ್ದುಕೊಂಡು ಶಾಸನಗಳನ್ನು ರಚನೆ ಮಾಡುತ್ತಿದ್ದರು. ಲೋಹಗಳಿಗೆ ಸಂಬಂಧಿಸಿದ ತಾಮ್ರ, ಕಬ್ಬಿಣ, ಚಿನ್ನ, ಬೆಳ್ಳಿ, ಕಂಚು, ಹಿತ್ತಾಳೆ,[3] ಶಿಲೆಗೆ ಸಂಬಂಧಿಸಿದ ಬಂಡೆ, ಸ್ತಂಭಗಳು ಇತ್ಯಾದಿ ಶಾಸನಗಳನ್ನು ಕೊರೆಸುತ್ತಿದ್ದರು. ಪ್ರಮುಖವಾಗಿ ಶಾಸನಗಳನ್ನು ರಚನೆ ಮಾಡುವ ಸಂದರ್ಭದಲ್ಲಿ ಶಾಶ್ವತವಾಗಿ ಉಳಿದಿರುವಂತಹ ವಸ್ತುಗಳನ್ನು ಆಯ್ಕೆ ಮಾಡಿಕೊಂಡು ಶಾಸನಗಳನ್ನು ರಚನೆ ಮಾಡುವುದು ಸಾಮಾನ್ಯವಾಗಿತ್ತು. ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಕ್ಷೇತ್ರಕಾರ್ಯಕ್ಕೆ ಹೋದಂತಹ ಸಂದರ್ಭದಲ್ಲಿ ನನಗೆ ದೊರೆತ ಶಾಸನಗಳೆಂದರೆ ಶಿಲಾಶಾಸನಗಳು. ಅವುಗಳನ್ನು ಕುರಿತಾಗಿ ಈ ಪ್ರಬಂಧದಲ್ಲಿ ತಿಳಿಸಲಾಗಿದೆ.

ಸಂಖ್ಯೆ : ೦೧

ಗ್ರಾಮ : ಕಾಳಗಿ ಸ್ಥಳ : ಮಲ್ಲಿಕಾರ್ಜುನ ಗುಡಿಯಲ್ಲಿದೆ

ಕಾಲಮಾನ : ಕ್ರಿ.ಶ. ೧೧೬೩ ಅಳತೆ : ೧೦೪x೪೩ ಸೆ.ಮೀ.

ಪ್ರಕಟಣೆ : ಹೈ.ಕ.ಭಾ.ಶಿ.ಶಾ (ಸ.ಸಂ.೭೫), ೧೯೯೨, ಪು. ೧೮೨

ಈ ಶಾಸನವು ಮಲ್ಲಿಕಾರ್ಜುನ ಗುಡಿಯಲ್ಲಿದೆ. ಐತಿಹಾಸಿಕ ಕಾಳಗಿ ಗ್ರಾಮವು ಮಾನ್ಯಖೇಟದಿಂದ ೨೦ ಕಿ.ಮೀ. ದೂರದಲ್ಲಿದೆ. ಇಲ್ಲಿನ ಕ್ರಿ.ಶ. ೧೧೬೩ರ ಶಾಸನವು ಮಹಾಮಂಡಲೇಶ್ವರ ಬಾಣ ವೀರಗೊಂಕರಸನು ಗೊಂಕೇಶ್ವರ ದೇವಾಲಯವನ್ನು ನಿರ್ಮಿಸಿ, ಕಲ್ಯಾಣ ಶಕ್ತಿ ಪಂಡಿತನಿಗೆ ತೆಂಗಳಿ ೨೦ಕ್ಕೆ ಸೇರಿದ ಮಲ್ಲಗಾಣವನ್ನು ದಾನ ನೀಡುತ್ತಾನೆ. ಈ ಊರಿನ ಶಾಸನೋಕ್ತ ದೇವಾಲಯಗಳು ಇಂದು ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತಿವೆ. ಪ್ರಸ್ತುತ ಮಲ್ಲಿಕಾರ್ಜುನ ದೇವಾಲಯವೇ ಶಾಸನೋಕ್ತ ಗೊಂಕೇಶ್ವರ ದೇವಾಲಯವಾಗಿದೆ.[೬]

ಸಂಖ್ಯೆ : ೦೨

ಗ್ರಾಮ : ಕುರುಕುಂಟೆ

ಸ್ಥಳ : ಹಳ್ಳಿಯ ಹೊರಗಿರುವ ಪಾಳುದೇವಾಲಯದ ಸಮೀಪ ಬಿದ್ದಿರುವ ಕಲ್ಲಿನ ಮೇಲೆ

ಕಾಲಮಾನ : ಕ್ರಿ.ಶ. ೯೩೩ ಅಳತೆ : ೯೧x೪೩ ಸೆ.ಮೀ.

ಪ್ರಕಟಣೆ : ಎ.ಆರ್.ಐ.ಇ., ೧೯೭೬-೭೭, ನಂ.ಬಿ. ೧೪೫

ಕುರುಕುಂಟೆ ಗ್ರಾಮವು ಮಾನ್ಯಖೇಟದಿಂದ ೨೦ ಕಿ.ಮೀ. ದೂರದಲ್ಲಿದೆ. ಇಲ್ಲಿನ ಶಾಸನವೊಂದು ಕನ್ನಡ ಭಾಷೆ ಮತ್ತು ಲಿಪಿಯಲ್ಲಿದೆ. ಕಾಲ ಶಕ ೮೫೫ ಜಯ ಸಂವತ್ಸರವಾಗಿದ್ದು ಇದು ಕ್ರಿ.ಶ. ೯೩೩ಕ್ಕೆ ಸರಿಹೊಂದುತ್ತದೆ. ನಾಲ್ಕನೆಯ ಗೋವಿಂದನ ಕಾಲದ ಶಾಸನವು ಈಗ ಭಾಗಶಃ ಅಳಿಸಿ ಹೋಗಿದೆ. ಕುಳಕುಂಟೆಯೇ (ಇಂದಿನ ಕುರಕುಂಟ) ಮಹಾಜನರನ್ನು ಮತ್ತು ಮುಡಲೆಯ ಭರತಯ್ಯ ಸಿರಚನ್ದ್ರ ನಾವುಗ ಮತ್ತಿತರರನ್ನು ಇಲ್ಲಿನ ಶಾಸನದಲ್ಲಿ ಹೆಸರಿಸುತ್ತದೆ.[೭]

ಸಂಖ್ಯೆ : ೦೩

ಗ್ರಾಮ : ದಿಗ್ಗಾವಿ

ಸ್ಥಳ : ಶಂಭುಲಿಂಗೇಶ್ವರ ದೇವಾಲಯದ ಆವರಣದಲ್ಲಿದೆ.

ಕಾಲಮಾನ : ಕ್ರಿ.ಶ. ೧೦ನೆಯ ಶತಮಾನ ಅಳತೆ : ೭೪x೪೬ ಸೆ.ಮೀ.

ಪ್ರಕಟಣೆ : ಎ.ಆರ್.ಐ.ಇ. ೧೯೬೦-೬೧, ನಂ. ಬಿ. ೪೮೯

ದಿಗ್ಗಾವಿ ಗ್ರಾಮವು ಮಾನ್ಯಖೇಟದಿಂದ ೨೦ ಕಿ.ಮೀ. ದೂರದಲ್ಲಿದೆ. ಇಲ್ಲಿನ ಊರ ಮುಂದೆ ಇರುವ ಶಂಭುಲಿಂಗೇಶ್ವರ ದೇವಾಲಯದಲ್ಲಿರುವ ಶಾಸನವು ಆರನೆಯ ವಿಕ್ರಮಾದಿತ್ಯನ ರಾಣಿ ಮಲೆಯಮತಿ ದೇವಿಯು ಅಗ್ರಹಾರ ದಿಗ್ಗಿವಿಗೆಯ ಮೇಲಾಳ್ವಿಕೆಯನ್ನು ನಡೆಸುತ್ತಿದ್ದಾಗ

ಅವಳ ಸೂಚನೆಯಂತೆ ಮಹಾಮಂಡಲೇಶ್ವರ ಲೋಕರಸನು ಸ್ವಯಂಭೂ ಸೋಮೇಶ್ವರ ದೇವಾಲಯಕ್ಕೆ ಸೇರಿದ ಗಂಗೀತೀರ್ಥದ ಬಳಿಯಲ್ಲಿ ದಾವಣ ಭಟ್ಟರು, ನಿರ್ಮಿಸಿದ ಚಿಕ್ಕ ಸಂಜೆಮಠದ ಜನಾರ್ಧನ ದೇವರ ಜವಾಬ್ದಾರಿಯನ್ನು ಮಹಾಜನರಿಗೆ ಒಪ್ಪಿಸಿ, ಅದರ ಪೂಜೆಗೆ ೪೦ ಮತ್ತರು ಹೊಲ, ಹೂತೋಟ ಮತ್ತು ನಿವೇಶನಗಳನ್ನು ದಾನ ನೀಡಿದನು. ಇದೇ ಸಂದರ್ಭದಲ್ಲಿ, ನೆರೆಯ ಅಗ್ರಹಾರ ನಾಗವಾಡಿ ೪೦೦ ಮಹಾಜನರು ಕೂಡ ಈ ದೇವರ ಸೇವೆಗೆ ಗದ್ದೆಯನ್ನು ದಾನಬಿಟ್ಟರು. ಶಾಸನವು ತ್ರಿಭುವನ ನಾರಾಯಣ ದೇವರ ಬಗೆಗೂ ಉಲ್ಲೇಖಿಸುತ್ತದೆ.

ಈ ಮೇಲಿನ ಶಾಸನದಿಂದ ದಿಗ್ಗಾವಿಯಲ್ಲಿ ಸ್ವಯಂಭೂ ಸೋಮೇಶ್ವರ ತ್ರಿಭುವನ ನಾರಾಯಣ, ಜನಾರ್ಧನ ಮತ್ತು ಚಿಕ್ಕ ಸಂಜೆಮಠಗಳಿದ್ದವೆಂಬುದು ಸುಸ್ಪಷ್ಟ. ಇಂದಿನ ಶಂಭುಲಿಂಗ ಗುಡಿಯೇ ಶಾಸನೋಕ್ತ ಸ್ವಯಂಭೂ ಸೋಮೇಶ್ವರ ತ್ರಿಭುವನ ನಾರಾಯಣ, ಜನಾರ್ಧನ ಮತ್ತು ಚಿಕ್ಕ ಸಂಜೆಮಠಗಳಿದ್ದವೆಂಬುದು ಸುಸ್ಪಷ್ಟ, ಇದೊಂದು ದೇವಾಲಯಗಳ ದೊಡ್ಡ ಸಂಕೀರ್ಣ. ಇದರಲ್ಲಿ ಉತ್ತರಾಭಿಮುಖವಾಗಿರುವ ತ್ರಿಕೂಟ ದೇವಾಲಯವೆ ತ್ರಿಭುವನ ನಾರಾಯಣ ದೇವಾಲಯವೆಂಬುದು[೮] ಶಾಸನದಿಂದ ತಿಳಿದುಬರುತ್ತದೆ.

ಸಂಖ್ಯೆ : **೦೪**

ಗ್ರಾಮ : ಪೇಟೆಶಿರೂರು ಸ್ಥಳ : ಮಲ್ಲಿಕಾರ್ಜುನ ಗುಡಿಯಲ್ಲಿದೆ.

ಕಾಲಮಾನ : ಕ್ರಿ.ಶ. ೧೧೧೯ ಅಳತೆ : ೭೪x೪೩ ಸೆ.ಮೀ.

ಪ್ರಕಟಣೆ : ಎ.ಆರ್.ಐ.ಇ. ೧೯೬೧-೬೨, ನಂ. ಬಿ. ೫೧೭

ಮಾನ್ಯಖೇಟದಿಂದ ಪಶ್ಚಿಮಕ್ಕೆ ೨೫ ಕಿ.ಮೀ. ದೂರದಲ್ಲಿರುವ ಪೇಟೆಶಿರೂರು ಒಂದು ಐತಿಹಾಸಿಕ ಗ್ರಾಮವಾಗಿದ್ದು, ಕಲ್ಯಾಣ ಚಾಲುಕ್ಯರ ಆಳ್ವಿಕೆಯಲ್ಲಿ ಅತ್ಯಂತ ವಿಶೇಷತೆಯನ್ನು ಹೊಂದಿದ ಗ್ರಾಮವಾಗಿತ್ತು. ಶಾಸನಗಳಲ್ಲಿ ಶ್ರೀಪುರ ಎಂದಿದ್ದು, ಆರನೆಯ ವಿಕ್ರಮಾದಿತ್ಯನ ಒಂದೆ ಶಾಸನ ಬೆಳಕಿಗೆ ಬಂದಿದೆ. ಶ್ರೀ ಪುರದ ರೆಬ್ಬಣ್ಣಯ್ಯ ದಂಡನಾಯಕನು ಕ್ರಿ.ಶ. ೧೧೧೧ರಲ್ಲಿ ರೆಬ್ಬೇಶ್ವರ ದೇವಾಲಯ ನಿರ್ಮಿಸಿ, ದೇವರ ಸೇವೆಗೆ ಮತ್ತು ಮಠದಲ್ಲಿ ಓದುವ ಮಣಿಗಳಿಗೆ ಬಂಕೂರು ನಾರೇಶ್ವರ ಮಠದ ಆಚಾರ್ಯ ಸದ್ಯೋತಜಾತ ಪಂಡಿತರಿಗೆ ೪೫ ಮತ್ತರು ಹೊಲ, ಎರಡು ಮತ್ತರು ಗದ್ದೆ, ಹೂತೋಟ, ಮೂರು ಗಾಣ, ಎಲೆ ಅಡಿಕೆ ಹಾಗೂ ಭತ್ತಗಳ ಆಯವನ್ನು ದಾನಬಿಡುತ್ತಾರೆ. ಈ ಶಾಸನವು ಇಲ್ಲಿನ ಮಲ್ಲಿಕಾರ್ಜುನ ಗುಡಿಯಲ್ಲಿದೆ. ಶಾಸನವು ನೆರೆಯ ಬಮುಕುರು (ಭಂಕೂರು) ಪಾಳನೂರುಗಳನ್ನು ಉಲ್ಲೇಖಿಸುತ್ತದೆ. ಶಾಸನೋಕ್ತ ರೆಬ್ಬೇಶ್ವರ ದೇವಾಲಯವೇ ಇಂದಿನ ಮಲ್ಲಿಕಾರ್ಜುನ ದೇವಾಲಯವಾಗಿದೆ.[೯]

ಸಂಖ್ಯೆ : **೦೫**

ಗ್ರಾಮ : ಸೇಡಂ

ಸ್ಥಳ : ಶಾಂತಿನಾಥ ಬಸದಿಯ ದ್ವಾರಬಾಗಿಲು ಪಕ್ಕದಲ್ಲಿ ನಿಲ್ಲಿಸಿದ ಕಲ್ಲು
ಕಾಲಮಾನ : ಕ್ರಿ.ಶ. ೧೧೨೪ ಅಳತೆ : ೧೨೨x೪೩ ಸೆ.ಮೀ.
ಪ್ರಕಟಣೆ : ಎ.ಆರ್.ಐ.ಇ. ೧೯೭೧-೭೨, ನಂ. ಬಿ. ೧೭೧

ಸೇಡಂನ ಶಾಂತಿನಾಥ ಬಸದಿಯಲ್ಲಿರುವ ಕ್ರಿ.ಶ. ೯೨೪ರ ಶಾಸನವು ತ್ರಿಭುವನಮಲ್ಲ ದೇವನದು. ಸೇಡಿಂಬ ಅಗ್ರಹಾರದ ಮುನ್ನೂರು ಮಹಾಜನರು ಬಸದಿಯನ್ನು ನಿರ್ಮಾಣ ಮಾಡಿದರು. ಅಲ್ಲಿ ಶಾಂತಿನಾಥ ತೀರ್ಥಂಕರರನ್ನು ಪ್ರತಿಷ್ಠೆ ಮಾಡಿ, ಸುವರ್ಣ ಕಳಸಾರೋಹಣ ಮಾಡಿ ಬ್ರಹ್ಮಜಿನಾಲಯವೆಂದು ಹೆಸರಿಟ್ಟರು. ಈ ಬಸದಿಗೆ ಭೂಮಿಯನ್ನು ದತ್ತಿ ಬಿಡುತ್ತಾರೆ. ಅಲ್ಲದೆ ಶಾಸನವು ಅಲ್ಲಿನ ಲೋಕ ಜಿನಾಲಯವನ್ನು ಉಲ್ಲೇಖಿಸುತ್ತದೆ.[೧೦] ಇಷ್ಟು ಈ ಶಾಸನದ ವಿಶೇಷತೆಯಾಗಿದೆ.

## ೪.೨. ಸ್ಮಾರಕ ಶಿಲ್ಪಗಳು

ವೀರಗಲ್ಲುಗಳು ಕನ್ನಡ ನಾಡಿನ ವೀರತತ್ವದ ಪ್ರತೀಕವಾಗಿದೆ. ಇವುಗಳನ್ನು ಸ್ಮಾರಕಶಿಲ್ಪಗಳೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ದಕ್ಷಿಣ ಭಾರತದಲ್ಲಿ ವೀರಗಲ್ಲುಗಳು ಒಂದು ವಿಶಿಷ್ಟ ರೂಪದಲ್ಲಿ ಬೆಳೆದು ಬಂದಿರುವುದನ್ನು ಕಾಣಬಹುದು. ಕಲ್ಲಿನ ಮೇಲಿನ ಶಿಲ್ಪವು ವೀರನ ಪರಾಕ್ರಮದ ಸಂಕೇತದಂತೆ ತೋರುತ್ತದೆ. ಕ್ಷಣಮಾತ್ರದಲ್ಲಿ ಹೋಗುವ ಈ ದೇಹಕ್ಕೆ ರಣರಂಗದಲ್ಲಿ ಸಾಯಲು ಚಿಂತೆಯೇಕೆ? ಈ ಸೂರ್ಯಮಂಡಲವನ್ನು ಭೇದಿಸುವ ಶಕ್ತಿ ವಿರಾಯೋಗಿ ಮತ್ತು ರಣಮುಖದಲ್ಲಿ ಸತ್ತ ವೀರನೊಬ್ಬನಿಗೆ ಮಾತ್ರ ಸಾಧ್ಯ. ಹಾಗೂ ಪ್ರಾಣ ನಿತ್ಯ, ಮಾನ ಶಾಶ್ವತ ಆದ್ದರಿಂದ ಪ್ರಾಣ ಬಿಟ್ಟಿದರೂ ಮಾನವನ್ನು ಕಾಪಾಡಬೇಕು ಎಂಬ ಇತ್ಯಾದಿ ಧ್ಯೇಯಗಳನ್ನು ಸಮಾಜದಲ್ಲಿ ಬಿತ್ತರಗೊಂಡವು. ಇದರಿಂದ ಸ್ಫೂರ್ತಿಗೊಂಡ ಯುವಕರು, ಧೈರ್ಯವಂತರು ಸಮಾಜದ ಪರವಾಗಿ ಮಡಿದಿದ್ದಾರೆ. ಒಡೆಯನ ರಕ್ಷಣೆಗಾಗಿ, ಆತನ ಶತ್ರುಗಳೊಡನೆ, ಕಳ್ಳರೊಡನೆ, ತುರುಗೋಳ್ ಮತ್ತು ಹೆಣ್ಣಿನ ಮಾನ ರಕ್ಷಣೆಗಾಗಿ, ಮುಂತಾದ ಭಾವನೆಗಳಲ್ಲಿ ಭಾಗಿಯಾಗಿ ಸ್ವ ಇಚ್ಛೆಯಿಂದ ಹೋರಾಡಿ ಅನೇಕ ವೀರರು ಮಡಿದಿದ್ದಾರೆ. ಹೀಗೆ ಹೋರಾಡಿ ಗೆದ್ದರೆ ಲಕ್ಷ್ಮಿ ಲಭಿಸುತ್ತದೆ. ಮೃತನಾದರೆ ದೇವಾಂಗನೆಯರು ಲಭಿಸುತ್ತಾರೆ[೧೧] ಎನ್ನುವ ನಂಬಿಕೆಯು ಅಂದಿನ ಸಮಾಜದಲ್ಲಿ ಭಾವಿಸಿತ್ತು.

ಈ ರೀತಿಯಾಗಿ ಮಡಿದ ವೀರರ ವೀರತತ್ವ, ಶೌರ್ಯ, ಸಾಹಸ, ಪರಾಕ್ರಮ ಹಾಗೂ ತ್ಯಾಗದ ಸವಿನೆನಪಿಗಾಗಿ ನೆಟ್ಟ ವೀರಗಲ್ಲುಗಳನ್ನು ನಾಡಿನಾದ್ಯಂತ ಕಂಡುಬರುತ್ತವೆ. ನನ್ನ ಅಧ್ಯಯನ ಕ್ಷೇತ್ರ ಪರಿಸರದಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಈ ವಿಷಯಕ್ಕೆ ಸಂಬಂಧಿಸಿದ ಕೆಲವು ಶಿಲ್ಪಗಳು ಕಂಡುಬಂದಿವೆ. ಅವುಗಳಲ್ಲಿ ತುರುಕಾಳಗ, ಪೆಣ್ಬುಯಲ್ ಹಾಗೂ ಒಂಟಿ ವೀರ ಇರುವ ವೀರಗಲ್ಲು ದೊರಕಿವೆ. ಈ ಶಿಲ್ಪಗಳಲ್ಲಿನ ಸೂಕ್ಷ್ಮ ಕೆತ್ತನೆಯ ಅವಲೋಕನದಿಂದ ಈ ಪರಿಸರದ ವೀರಪರಂಪರೆಯನ್ನು ಅರಿಯುವ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

ಸಂಖ್ಯೆ : ೦೧
ಶಿಲ್ಪ : ವೀರಗಲ್ಲು ಗ್ರಾಮ : ಕಾಳಗಿ
ಸ್ಥಳ : ನೀಲಕಂಠ ಕಾಳೇಶ್ವರ ದೇವಾಲಯದ ಹತ್ತಿರ
ಕಾಲಮಾನ : ಕ್ರಿ.ಶ. ೧೦-೧೧ನೆಯ ಶತಮಾನ
ಅಳತೆ : ೧೨೨x೭೬ ಸೆ.ಮೀ.

ಈ ಸ್ಮಾರಕ ನಾಲ್ಕು ಹಂತಗಳಲ್ಲಿದೆ. ಮೊದಲನೆ ಮತ್ತು ಎರಡನೆಯ ಹಂತದಲ್ಲಿ ಹೊರಟಾದ ಚಿತ್ರಣವನ್ನು ಕಂಡಿಸಲಾಗಿದೆ. ಮೊದಲ ಹಂತದಲ್ಲಿ ವೀರನು ನಿಂತಿರುವ ಭಂಗಿಯಲ್ಲಿದ್ದು ಎಡಗೈಯಲ್ಲಿ ಗುರಾಣಿ ಬಲಗೈಯಲ್ಲಿ ಉದ್ದನೆಯ ಭರ್ಚಿಯನ್ನು ಹಿಡಿದಿರುವನು. ಶತ್ರು ಒಬ್ಬನು ಎಡಗೈಯಲ್ಲಿ ಗುರಾಣಿ ಬಲಗೈಯಲ್ಲಿ ಉದ್ದನೆಯ ಭರ್ಚಿಯನ್ನು ಹಿಡಿದು ವೀರನೊಂದಿಗೆ ಹೋರಾಡುತ್ತಿರವಂತೆ ಚಿತ್ರಿಸಿದೆ. ವೀರನ ಮುಂದೆ ಮತ್ತು ಹಿಂಬದಿಯಲ್ಲಿರುವ ಶತ್ರುಗಳು ಬಿಲ್ಲು ಬಾಣಗಳನ್ನು ಹಿಡಿದು ಯುದ್ಧ ಸನ್ನದ್ಧವಾಗಿರುವಂತೆ ಬಿಡಿಸಲಾಗಿದೆ. ಎರಡನೆ ಹಂತದಲ್ಲಿ ವೀರನನ್ನು ಪ್ರಧಾನವಾಗಿ ಚಿತ್ರಿಸಲಾಗಿದೆ. ಹಾರುತ್ತಿರುವ ಕುದುರೆಯ ಮೇಲೆ ಕುಳಿತಿರುವ ವೀರನು ಬಲಗೈಯಲ್ಲಿ ಲಗಾಮು ಎಡಗೈಯಲ್ಲಿ ಉದ್ದನೆಯ ಭರ್ಚಿಯನ್ನು ಹಿಡಿದಿದ್ದಾನೆ. ವೀರನ ಮುಂದೆ ಹಾಗೂ ಹಿಂದೆ ಕುದುರೆಯ ಮೇಲೆ ಕುಳಿತ ಶತ್ರು ಪಾಳೆಯು ವೀರನನ್ನು ಸುತ್ತುವರಿದಿದೆ. ಶತ್ರುಗಳು ಭರ್ಚಿ ಆಯುಧಗಳನ್ನು ಹಿಡಿದು ಹೋರಾಡುತ್ತಿರುವಂತೆ ಕಂಡಿರಿಸಿದೆ. ಮೂರನೆ ಹಂತದಲ್ಲಿ ವೀರನು ಅಪ್ಸರೆಯರಿಬ್ಬರ ಹೆಗಲ ಮೇಲೆ ಕೈಯಾಕಿಕೊಂಡು ಸ್ವರ್ಗಕ್ಕೆ ಹೋಗುವ ಚಿತ್ರಣವಿದೆ. ಕೊನೆಯ ಹಂತದ ಮಧ್ಯದಲ್ಲಿ ದ್ರಾವಿಡ ಮಾದರಿಯ ಮಂಟಪವಿದ್ದು ಅದರ ಒಳಗೆ ಶಿವಲಿಂಗವಿದೆ. ಆ ಶಿವಲಿಂಗದ ಎಡಭಾಗದಲ್ಲಿ ವೀರನು ಕೈಮುಗಿದುಕೊಂಡು ಕುಳಿತಿರುವನು. ಅವನ ಹಿಂಬದಿಯಲ್ಲಿ ಅಪ್ಸರೆಯರಿಬ್ಬರು ನಿಂತಿದ್ದಾರೆ. ಲಿಂಗದ ಬಲಭಾಗದಲ್ಲಿ ಯತಿಗಳಿಬ್ಬರನ್ನು ಕಂಡಿರಿಸಿದೆ.

ಸಂಖ್ಯೆ : ೦೨
ಶಿಲ್ಪ : ವೀರಗಲ್ಲು ಗ್ರಾಮ : ಕಾಳಗಿ
ಸ್ಥಳ : ನರಸಿಂಹ ತೀರ್ಥದ ಪಕ್ಕದಲ್ಲಿ ನಿಲ್ಲಿಸಿದ ಕಲ್ಲು
ಕಾಲಮಾನ : ಕ್ರಿ.ಶ. ೧೦-೧೧ನೆಯ ಶತಮಾನ ಅಳತೆ : ೧೦೪x೬೧ ಸೆ.ಮೀ.

ಸ್ಮಾರಕವು ಮೂರು ಹಂತದಲ್ಲಿ ಕಂಡರಿಸಿದೆ. ಮೊದಲ ಹಂತದಲ್ಲಿ ವೀರನನ್ನು ಪ್ರಧಾನವಾಗಿ ಚಿತ್ರಿಸಲಾಗಿದೆ. ವೀರನು ಬಲಗೈಯಲ್ಲಿ ಬಾಕು ಆಯುಧವನ್ನಿಡಿದು ಶತ್ರುವಿನ ಕುದುರೆಯ ಕತ್ತಿನ ಭಾಗಕ್ಕೆ ತಿವಿದಿದ್ದಾನೆ. ಕೈ ಮತ್ತು ಕಾಲುಗಳನ್ನು ಕಡಗ ಮತ್ತು ತೋಳ ಬಂದಿಗಳಿವೆ. ವೀರಗಚ್ಚೆಯನ್ನು ಕಟ್ಟಿದ್ದು ಸೊಂಟದಲ್ಲಿ ಚಾಕು ಇಟ್ಟುಕೊಂಡಿದ್ದಾನೆ. ಅವನ ದೇಹದ ಮೇಲೆ ಜನಿವಾರವಿದ್ದು ಕೇಶವನ್ನು ನೆತ್ತಿಯ ಮೇಲಿರುವಂತೆ ತುರುಬಿನಾಕಾರದಲ್ಲಿ ಕಟ್ಟಿದ್ದಾನೆ. ವೀರನ ಹಿಂಬದಿಯಲ್ಲಿ ಅವನ ಸೇವಕನೊಬ್ಬನನ್ನು ಚಿಕ್ಕದಾಗಿ ಕೆತ್ತಿದ್ದು ಅವನು ವೀರನಿಗೆ ಕೊಡೆಯನ್ನು

ಹಿಡಿದಿದ್ದಾನೆ. ಈ ವೀರನು ರಾಜ ಪ್ರಮುಖನೆಂಬುವುದನ್ನು ಸೂಚಿಸುತ್ತದೆ. ವೀರನ ಮುಂದೆ ಶತ್ರು ಒಬ್ಬನು ಕುದುರೆ ಮೇಲೆ ಕುಳಿತಿರುವಂತೆ ಕಂಡಿರಿಸಿದೆ. ಹೋರಾಟದಲ್ಲಿ ಮಡಿದ ಇಬ್ಬರ ಶತ್ರುಗಳ ಶವವು ನೆಲದ ಮೇಲೆ ಬಿದ್ದಿರುವಂತೆ ಕೆತ್ತಲಾಗಿದೆ. ಹಂತ ಎರಡರಲ್ಲಿ ವೀರನು ಚಾಮರ ಸೇವೆಯೊಂದಿಗೆ ಅಪ್ಸರೆಯರೊಡನೆ, ಸ್ವರ್ಗಕ್ಕೆ ತೆರಳುವ ದೃಶ್ಯವಿದೆ. ಮೂರನೆ ಹಂತದಲ್ಲಿ ಶಿವಲಿಂಗ ಮತ್ತು ಕುಳಿತಿರುವ ವೀರನನ್ನು ಕಂಡಿರಿಸಲಾಗಿದೆ.

ಸಂಖ್ಯೆ : ೦೩

ಶಿಲ್ಪ : ವೀರಗಲ್ಲು ಗ್ರಾಮ : ಮಾನ್ಯಖೇಟ

ಸ್ಥಳ : ಕೋಟೆ ಒಳಗಡೆ ಮಸೀದಿ ಹತ್ತಿರ ಬಿದ್ದಿದೆ

ಕಾಲಮಾನ : ಕ್ರಿ.ಶ. ೧೦-೧೧ನೆಯ ಶತಮಾನ ಅಳತೆ : ೯೧ x ೪೩ ಸೆ.ಮೀ.

ಕಪ್ಪು ಶಿಲೆಯಲ್ಲಿ ಸ್ಮಾರಕವನ್ನು ಮೂರು ಹಂತಗಳಲ್ಲಿ ಕೆತ್ತಲಾಗಿದೆ. ಮೊದಲ ಹಂತದಲ್ಲಿ ಹೋರಾಟದ ಚಿತ್ರವಿದೆ. ವೀರನು ಉದ್ದನೆಯ ಭರ್ಚಿಯನ್ನು ಎರಡು ಕೈಗಳಲ್ಲಿ ಹಿಡಿದು ಶತ್ರುವಿನ ಹೊಟ್ಟೆಯ ಭಾಗಕ್ಕೆ ತಿವಿದಿದ್ದಾನೆ. ಶತ್ರುವು ಎಡಗೈಯಲ್ಲಿ ಗುರಾಣಿ ಬಲಗೈಯಲ್ಲಿ ಚಾಕುವೊಂದನ್ನು ಹಿಡಿದಿರುವಂತೆ ಕಂಡುಬರುತ್ತದೆ. ವೀರನ ಕೈ ಕಾಲುಗಳಲ್ಲಿ ಕಡಗಗಳಿವೆ. ಮಲ್ಲಕಚ್ಚೆಯನ್ನು ಕಟ್ಟಿದ್ದು ಅದರ ಕುಚ್ಚಗಳು ಎಡ ಮತ್ತು ಬಲ ಬದಿಗಯಲ್ಲಿ ನೇತಾಡುತ್ತಿವೆ. ಕಿವಿಯಲ್ಲಿ ಓಲೆ ಆಭರಣಗಳಿದ್ದು, ಕೇಶವನ್ನು ತುರುಬಿನಂತೆ ಕಟ್ಟಿದ್ದಾನೆ. ಈ ಹಂತದ ಮೇಲಿನ ಮಧ್ಯಪಟ್ಟಿಯಲ್ಲಿ ನಾಲ್ಕು ತುರುಗಳನ್ನು ಬಿಡಿಸಲಾಗಿದೆ. ಹಂತ ಎರಡರಲ್ಲಿ ವಈರನು ಚಾಮರ ಸೇವೆಯೊಂದಿಗೆ ಅಪ್ಸರೆಯರೊಡನೆ ಸ್ವರ್ಗಕ್ಕೆ ತೆರಳುವ ದೃಶ್ಯವಿದೆ. ಕೊನೆಯ ಹಂತದಲ್ಲಿ ಶಿವಲಿಂಗ ಮತ್ತು ಅದರ ಮುಂದೆ ಕೈಮುಗಿದು ಕುಳಿತ ವೀರನನ್ನು ಕಂಡರಿಸಲಾಗಿದೆ. ಶಿಲ್ಪದಲ್ಲಿ ತುರುಗಳ ಚಿತ್ರವಿರುವುದರಿಂದ ವೀರನು ಅವುಗಳ ರಕ್ಷಣೆಗಾಗಿ ಹೋರಾಡಿ ಮಡಿದಿರುವುದು ಸ್ಪಷ್ಟವಾಗುತ್ತದೆ.

ಸಂಖ್ಯೆ : ೦೪

ಶಿಲ್ಪ : ವೀರಗಲ್ಲು ಗ್ರಾಮ : ಬಟಗೇರ

ಸ್ಥಳ : ಆಂಜನೇಯ ದೇವಾಲಯದ ಹತ್ತಿರ

ಕಾಲಮಾನ : ಕ್ರಿ.ಶ. ೧೧-೧೨ನೆಯ ಶತಮಾನ ಅಳತೆ : ೧೦೪ x ೬೧ ಸೆ.ಮೀ.

ಈ ಶಿಲ್ಪವನ್ನು ಕಪ್ಪು ಶಿಲೆಯನ್ನು ಬಳಸಿ ಮೂರು ಹಂತಗಳಲ್ಲಿ ಕಂಡರಿಸಲಾಗಿದೆ. ಮೊದಲ ಹಂತದಲ್ಲಿ ವೀರನನ್ನು ಪ್ರಧಾನವಾಗಿ ಕಾಣುವಂತೆ ಕಂಡಿರಿಸಿದೆ. ವೀರನು ಎಡಗೈಯಲ್ಲಿ ಅಳೆತ್ತರದ ಬಿಲ್ಲನ್ನು ಬಲಗೈಯಲ್ಲಿ ಚಾಕುವೊಂದನ್ನು ಹಿಡಿದಿದ್ದಾನೆ. ಕೈ ಮತ್ತು ಕಾಲುಗಳನ್ನು ಕಡಗ ಮತ್ತು ತೋಳಬಂದಿಗಳಿವೆ. ವೀರಗಚ್ಚೆಯನ್ನು ಕಟ್ಟಿದ್ದು, ಸೊಂಟದಲ್ಲಿ ಚೂರಿಯೊಂದನ್ನು ಸಿಕ್ಕಿಸಿಕೊಂಡಿದ್ದಾನೆ. ದೇಹದ ಮೇಲೆ ಜನಿವಾರವಿದೆ. ಕಿವಿಯಲ್ಲಿ ಓಲೆ ಆಭರಣವಿದ್ದು ಗಡ್ಡವನ್ನು

ಬಿಟ್ಟಿದ್ದಾನೆ. ಮತ್ತು ಕೇಶವನ್ನು ತುರಿಜಿನಂತೆ ಕಟ್ಟಿಕೊಂಡಿದ್ದಾನೆ. ವೀರನ ಮುಂದೆ ಚಿಕ್ಕದಾಗಿ ಶತ್ರು ಒಬ್ಬನನ್ನು ಕೈಮುಗಿದುಕೊಂಡು ನಿಂತಿರುವಂತೆ ಕಂಡರಿಸಿದೆ. ಶತ್ರುವು ಕೈಮುಗಿದುಕೊಂಡು ನಿಂತಿರುವ ಭಂಗಿ ಮತ್ತು ಕೆದರಿಕೊಂಡಿರುವ ಅವನ ಕೇಶವನ್ನು ನೋಡಿದರೆ ವೀರನಿಗೆ ಶರಣಾಗಿರುವಂತೆ ಕಾಣುತ್ತದೆ. ವೀರನ ತಲೆಯ ಮೇಲೆ ಐದು ತುರುಗಳನ್ನು ಚಿಕ್ಕದಾಗಿ ಬಿಡಿಸಿದೆ. ಎರಡನೇ ಹಂತದಲ್ಲಿ ವೀರನು ಅಪ್ಸರೆಯರ ಹೆಗಲ ಮೇಲೆ ಕೈಹಾಕಿಕೊಂಡು ಸ್ವರ್ಗಕ್ಕೆ ಹೋಗುವ ದೃಶ್ಯವಿದೆ. ಕೊನೆಯ ಹಂತದಲ್ಲಿ ಶಿವಲಿಂಗ ಮತ್ತು ಕೈಮುಗಿದುಕೊಂಡು ಕುಳಿತಿರುವ ವೀರನನ್ನು ಕಂಡಿರಸಲಾಗಿದೆ. ಈ ಶಿಲ್ಪದಲ್ಲಿ ತುರುಗಳು ಮತ್ತು ಕೈ ಮುಗಿದುಕೊಂಡು ನಿಂತಿರುವ ಶತ್ರುವನ್ನು ಗಮನಿಸಿದರೆ ತುರುಗಳನ್ನು ಕದಿಯಲು ಬಂದ ಶತ್ರುವಿನ ವಿರುದ್ಧ ಹೋರಾಡಿ ಮಡಿದ ವೀರನ ಸ್ಮಾರಕ ಎಂಬುವುದು ತಿಳಿಯುತ್ತದೆ. ಇದು ಈ ಪ್ರಸ್ತುತ ಪರಿಸರದ ಪ್ರಮುಖ ವೀರಗಲ್ಲುಗಳಲ್ಲಿ ಒಂದು ಆಗಿದೆ.

ಸಂಖ್ಯೆ : ೦೫
ಶಿಲ್ಪ : ವೀರಗಲ್ಲು ಗ್ರಾಮ : ಕಾಳಗಿ
ಸ್ಥಳ : ನೀಲಕಂಠ ಕಾಳೇಶ್ವರ ನವರಂಗದ ಗುಡಿಯ ಪಶ್ಚಿಮಾಭಿಮುಖವಾಗಿರುವ ದೇವಕೋಶ್ಠದಲ್ಲಿ
ಕಾಲಮಾನ : ಕ್ರಿ.ಶ. ೧೧-೧೨ನೆಯ ಶತಮಾನ ಅಳತೆ : ೬೧ x ೪೩ ಸೆ.ಮೀ.

ಈ ಸ್ಮಾರಕವನ್ನು ಎರಡು ಹಂತದಲ್ಲಿ ಕೆತ್ತಲಾಗಿದೆ. ಮೊದಲ ಹಂತದಲ್ಲಿ ವೀರನನ್ನು ಆಲಿಡಾ ಭಂಗಿಯಲ್ಲಿ ನಿಂತಿರುವಂತೆ ಪ್ರಧಾನವಾಗಿ ಕಂಡರಿಸಲಾಗಿದೆ. ವೀರನು ಎಡಗೈಯಲ್ಲಿ ಬಿಲ್ಲು ಆಯುಧವನ್ನು ಹಿಡಿದಿದ್ದಾನೆ. ಬಲಗೈಯಲ್ಲಿ ಹಿಡಿದಿರುವ ಆಯುಧ ಯಾವುದೆಂದು ತಿಳಿದುಬರುತ್ತಿಲ್ಲ. ಕೈಗಳಲ್ಲಿ ಕಡಗ ಮತ್ತು ತೋಳಬಂದಿಗಳಿವೆ. ಮಲ್ಲಗಚ್ಚೆಯನ್ನು ಕಟ್ಟಿದ್ದು ಅದರ ಕುಚ್ಚುಗಳು ನೇತಾಡುತ್ತಿವೆ. ಎರಡನೇ ಹಂತದಲ್ಲಿ ಕುಳಿತಿರುವ ವೀರ ಮತ್ತು ಅವನ ಎರಡು ಬದಿಯಲ್ಲಿ ಅಪ್ಸರೆಯರಿಬ್ಬರು ಕುಳಿತಿರುವಂತೆ ಕಂಡರಿಸಲಾಗಿದೆ.

ಸಂಖ್ಯೆ : ೦೫
ಶಿಲ್ಪ : ವೀರಗಲ್ಲು ಗ್ರಾಮ : ದಿಗ್ಗಾವಿ
ಸ್ಥಳ : ಮರೆಮ್ಮ ದೇವಾಲಯದ ಹತ್ತಿರ
ಕಾಲಮಾನ : ಕ್ರಿ.ಶ. ೧೧-೧೨ನೆಯ ಶತಮಾನ ಅಳತೆ : ೧೦೪ x ೪೩ ಸೆ.ಮೀ.

ಕಪ್ಪು ಶಿಲೆಯಲ್ಲಿ ಈ ಸ್ಮಾರಕವನ್ನು ಕಂಡಿರಿಸಲಾಗಿದೆ. ಹಂತ ಒಂದರಲ್ಲಿ ದೇಹದಾಡ್ಯನಾಗಿರುವ ವೀರನು ಎರಡು ಕೈಗಳಲ್ಲಿ ಉದ್ದವಾದ ಭರ್ಚಿಯನ್ನು ಹಿಡಿದು ಶತ್ರುವಿನ ಹೊಟ್ಟೆ ಭಾಗಕ್ಕೆ ತಿವಿದು ಮೇಲಕ್ಕೆ ಎತ್ತಿರುವಂತೆ ಕೆತ್ತಿದೆ. ಶತ್ರುವು ಭಯಗೊಂಡು ಎರಡು ಕೈಗಳನ್ನು ಜೋಡಿಸಿ ಕೈ ಮುಗಿಯುತ್ತಿರುವಂತೆ ಕಂಡುಬರುತ್ತದೆ. ವೀರನ ಕೈಯಲ್ಲಿ ಕಡಗ ಮತ್ತು ತೋಳಬಂದಿ

ಇವೆ. ಸೈನಿಕ ಮಾದರಿಯ ಉಡುಪನ್ನು ಧರಿಸಿದ್ದು, ಸೊಂಟದಲ್ಲಿ ಸಾಧಾರಣವಾದ ಡಾಬುವನ್ನು ಹಾಕಿದ್ದಾನೆ. ಹಾಗೂ ಬಾಕು ಆಯುಧವನ್ನು ಸಿಕ್ಕಿಸಿಕೊಂಡಿದ್ದಾನೆ. ಕೊರಳಲ್ಲಿ ರುದ್ರಾಕ್ಷಿ ಮಾದರಿಯ ಹಾರವಿದೆ. ಕಿವಿಯಲ್ಲಿ ಓಲೆಗಳಿದ್ದು ಕೇಶವನ್ನು ತುರುಬಿನಂತೆ ಬಲಭಾಗಕ್ಕೆ ಇರುವಂತೆ ಕಟ್ಟಿದ್ದಾನೆ. ಮತ್ತೊಬ್ಬ ಶತ್ರುವು ವೀರನ ಕಾಲ ಕೆಳಗೆ ಉದ್ದನೆ ಮಲಗಿರುವಂತೆ ಕಂಡುಬರುತ್ತಿದ್ದು ಪ್ರಯಾಸ ವೀರನಿಗೆ ಶರಣಾಗುವಂತೆ ಭಾಸವಾಗುತ್ತದೆ. ಮೇಲಿನ ಹಂತದಲ್ಲಿ ಶಿವಲಿಂಗ, ನಿಂತಿರುವ ಆಕಳು ಮತ್ತು ಸೂರ್ಯ, ಚಂದ್ರರನ್ನು ಕಂಡಿರಿಸಿದೆ.

ಸಂಖ್ಯೆ : **೦೭**

ಶಿಲ್ಪ : ವೀರಗಲ್ಲು ಗ್ರಾಮ : ಸೇಡಂ

ಸ್ಥಳ : ಪಂಚಲಿಂಗೇಶ್ವರ ದೇವಾಲಯದ ಆವರಣದಲ್ಲಿದೆ.

ಕಾಲಮಾನ : ಕ್ರಿ.ಶ. ೧೪–೧೫ನೆಯ ಶತಮಾನ ಅಳತೆ : ೭೪ x ೪೩ ಸೆ.ಮೀ.

ಬೆಣಚು ಕಲ್ಲಿನಲ್ಲಿರುವ ಈ ಸ್ಮಾರಕವನ್ನು ಒಂದು ಹಂತದಲ್ಲಿ ಚಿತ್ರಿಸಲಾಗಿದೆ. ದೃಢಕಾಯನಾಗಿರುವ ವೀರನು ಎಡಗೈಗೆ ಹಾಕಿಕೊಂಡ ಗುರಾಣಿ, ಬಲಗೈಯಲ್ಲಿ ಉದ್ದನೆಯ ಭರ್ಚಿಯನ್ನು ಹಿಡಿದಿರುವನು. ಎಡಗೈಯಲ್ಲಿನ ಗುರಾಣಿಯು ಶತ್ರುವಿನ ಹೊಡೆತವನ್ನು ತಡೆದಿರುವಂತಿದೆ. ಶತ್ರುವು ಗುರಾಣಿಗೆ ಹೊಡೆಯುವ ಯತ್ನದಲ್ಲಿ ಹಿಮ್ಮುಕವಾಗಿ ಬೀಳುವ ಸ್ಥಿತಿಯಲ್ಲಿ ಕಂಡಿರಸಲಾಗಿದೆ. ವೀರನು ಕೈಗಳಲ್ಲಿ ಕಡಗ ಮತ್ತು ತೋಳಬಂದಿಯನ್ನು ಹಾಕಿದ್ದಾನೆ. ಸೈನಿಕ ಮಾದರಿಯ ಉಡುಪನ್ನು ಧರಿಸಿದ್ದು ಸೊಂಟದಲ್ಲಿ ಸಾಧಾರಣವಾದ ಡಾಬನ್ನು ಕಟ್ಟಿದ್ದಾನೆ. ಮತ್ತು ಬಾಕು ಆಯುಧವೊಂದನ್ನು ಇಟ್ಟುಕೊಂಡಿದ್ದಾನೆ. ಕಿವಿಯಲ್ಲಿ ಓಲೆ ಆಭರಣಗಳಿದ್ದು ಶಿಲ್ಪದ ಮೇಲ್ಭಾಗವು ತೃಟಿತಗೊಂಡಿರುವುದರಿಂದ ತಲೆಯಲ್ಲಿ ಕಟ್ಟಿಕೊಂಡಿರಬಹುದಾದ ಕೇಶವು ಕಂಡುಬರುವುದಿಲ್ಲ.

ಸಂಖ್ಯೆ : **೦೮**

ಶಿಲ್ಪ : ವೀರಗಲ್ಲು ಗ್ರಾಮ : ಮಾನ್ಯಖೇಟ

ಸ್ಥಳ : ಕಾಗಿಣಾ ನದಿಯ ದಂಡೆಯ ಮೇಲೆ ಊರಿನ ಕಡೆ ಇದೆ.

ಕಾಲಮಾನ : ಕ್ರಿ.ಶ. ೧೬ನೆಯ ಶತಮಾನ ಅಳತೆ : ೭೪ x ೪೩ ಸೆ.ಮೀ.

ಬೆಣಚು ಕಲ್ಲಿನಲ್ಲಿರುವ ಈ ಸ್ಮಾರಕ ಎರಡು ಹಂತಗಳಲ್ಲಿವೆ. ಮೊದಲ ಹಂತದಲ್ಲಿ ವೀರನು ಕುದುರೆ ಮೇಲೆ ಕುಳಿತಿದ್ದು ಎಡಗೈಯಲ್ಲಿ ಲಗಾಮು, ಬಲಗೈಯಲ್ಲಿ ಉದ್ದನೆಯ ಭರ್ಚಿಯನ್ನು ಓಡಿದಿದ್ದಾನೆ. ಕುದುರೆಯ ಮುಂದೆ ವ್ಯಕ್ತಿಯೊಬ್ಬನನ್ನು ಚಿತ್ರಿಸಿದ್ದು ಪ್ರಾಯಶಃ ವೀರನ ಸೇವಕನೆಂಬುದು ತಿಳಿಯುತ್ತದೆ. ಕುದುರೆಯ ಬೆನ್ನಿನ ಮೇಲೆ ವೀರನು ಕುಳಿತುಕೊಳ್ಳಲು ಅನುಕೂಲಕ್ಕಾಗಿ ಜಿನನ್ನು ಹಾಕಿದೆ. ಅದು ಅಲುಗಾಡದಂತೆ ಕಟ್ಟಿದ ಪಟ್ಟಿಯೊಂದು ಕುದುರೆಯ ಬಾಲದ ಕೆಳಗಡೆ ಹಾದು ಬಂದಿದೆ. ಇದೆ ಹಂತದ ಎಡ ಮತ್ತು ಬಲಭಾಗದಲ್ಲಿ ಸೂರ್ಯ,

ಚಂದ್ರರನ್ನು ಕೆತ್ತಲಾಗಿದೆ. ಹಂತ ಎರಡರಲ್ಲಿ ಕಡಗಗಳನ್ನು ಹಾಕಿರುವ ಎರಡು ಕೈಗಳು ಮೇಲಕ್ಕೆ ಎತ್ತಿರುವಂತೆ ಕಂಡರಿಸಿದೆ. ಇವು ಏನೆಂಬುದು ತಿಳಿಯುತಿಲ್ಲ. ಬಹುಶಃ ಎರಡು ಕೈ ಮೇಲಕ್ಕೆ ಎತ್ತಿರುವುದನ್ನು ನೋಡಿದರೆ ವೀರನು ತಾನು ಹೋರಾಟದಲ್ಲಿ ಜಯಶೀಲನಾದನೆಂದು ಈ ರೀತಿ ಎರಡು ಕೈಗಳನ್ನು ಎತ್ತಿರುವಂತೆ ಚಿತ್ರಿಸಿರಬಹುದೆ? ಅಥವಾ ಹೋರಾಟದಲ್ಲಿ ಮಡಿದ ವೀರ ಮತ್ತು ಆತನ ಜೊತೆಯಲ್ಲಿಯೇ ಸತಿ ಹೋಗಿರುವ ಪತ್ನಿ ಇವರಿಬ್ಬರ ಸಂಖೇತವಾಗಿ ಈ ಕೆಗಳನ್ನು ಚಿತ್ರಿಸಿರಬಹುದೆ? ತಿಳಿಯಲಿಲ್ಲ.

ಸಂಖ್ಯೆ : ೦೯
ಶಿಲ್ಪ : ವೀರಗಲ್ಲು ಗ್ರಾಮ : ಕೊಡ್ಲಾ
ಸ್ಥಳ : ಸೇಡಂ ರಸ್ತೆಯ ಚೌಡಮಾಯೇ ಗುಡಿಯ ಹತ್ತಿರ
ಕಾಲಮಾನ : ಕ್ರಿ.ಶ. ೧೫–೧೬ನೆಯ ಶತಮಾನ ಅಳತೆ : ೬೧ x ೪೩ ಸೆ.ಮೀ.

ಗ್ರಾಮದ ಚೌಡಮಾಯೇ ದೇವಸ್ಥಾನದ ಬಳಿಯಲ್ಲಿ ಮೂರು ಒಂಟಿ ವೀರರ ಶಿಲ್ಪಗಳಿವೆ. ಈ ಶಿಲ್ಪಗಳನ್ನು ಸುಣ್ಣದ ಕಲ್ಲಿನಲ್ಲಿ ಕಂಡಿರಿಸಲಾಗಿದೆ. ದೇವಸ್ಥಾನದ ಎಡಭಾಗದಲ್ಲಿರುವ ಶಿಲ್ಪದಲ್ಲಿ ವೀರನು ಉದ್ದವಾದ ಭರ್ಚಿಯನ್ನು ಹಿಡಿದಿದ್ದಾನೆ. ಸೊಂಟದಲ್ಲಿ ಚೂರಿಯೊಂದನ್ನು ಇಟ್ಟುಕೊಂಡಿದ್ದಾನೆ. ಕಿವಿಯಲ್ಲಿ ಓಲೆ ಆಭರಣವಿದೆ. ದಪ್ಪನೆಯ ಮೀಸೆ ಮತ್ತು ಗಡ್ಡವನ್ನು ಬಿಟ್ಟಿದ್ದಾನೆ. ತಲೆಯ ಕೂದಲನ್ನು ತುರುಬಿನ ರೀತಿಯಲ್ಲಿ ಬಲಭಾಗಕ್ಕೆ ಇರುವಂತೆ ಕಟ್ಟಿದ್ದಾನೆ. ದೇವಸ್ಥಾನದ ಮೆಟ್ಟಿಲಿನ ಬಳಿ ಇರುವ ಶಿಲ್ಪದಲ್ಲಿ ವೀರನನ್ನು ನಿಂತಿರುವ ಭಂಗಿಯಲ್ಲಿ ಕಂಡಿರಿಸಿದೆ. ಎಡಗೈಯಲ್ಲಿ ಆಳೆತ್ತರದ ಬಿಲ್ಲನ್ನು ಬಲಗೈಯಲ್ಲಿ ಬಾಕುವನ್ನು ಹಿಡಿದಿದ್ದಾನೆ. ವೀರಗಚ್ಚೆಯನ್ನು ಕಟ್ಟಿದ್ದು ತಲೆಯ ಕೂದಲನ್ನು ತುರುಬಿನಂತೆ ಕಟ್ಟಿಕೊಂಡಿದ್ದಾನೆ. ಮೆಟ್ಟಿಲುಗಳ ಪಕ್ಕದಲ್ಲಿನ ಮತ್ತೊಂದು ಶಿಲ್ಪದಲ್ಲಿ ವೀರನನ್ನು ನಿಂತಿರುವಂತೆ ಕೆತ್ತಲಾಗಿದೆ. ವೀರನು ಬಲಗೈಯಲ್ಲಿ ಬಾಕುವನ್ನು ಹಿಡಿದಿದ್ದಾನೆ. ಕೈಕಾಲುಗಳಲ್ಲಿ ಕಡಗ ಮತ್ತು ತೋಳಬಂದಿಗಳಿವೆ. ಸೈನಿಕ ಮಾದರಿಯ ಉಡುಪನ್ನು ಧರಿಸಿದ್ದು ಸೊಂಟದಲ್ಲಿ ಸಾದಾ ಡಾಬವನ್ನು ಕಟ್ಟಿದ್ದಾನೆ. ವೀರನ ತಲೆಯ ಭಾಗವು ಶಿಲ್ಪದಲ್ಲಿ ತೃಟಿತಗೊಂಡಿದ್ದು ಕೊರಳಲ್ಲಿ ಆಭರಣ ಧರಿಸಿರವುದು ಮಾತ್ರ ಕಂಡುಬರುತ್ತದೆ. ಇಂತಹ ಅನೇಕ ವೀರಗಲ್ಲುಗಳಿಂದ ಪ್ರಸ್ತುತ ಪರಿಸರಕ್ಕೆ ವೀರಗಲ್ಲುಗಳು ತಮ್ಮದೇ ಆದ ಪ್ರಾಮುಖ್ಯತೆಯನ್ನು ನೀಡಿದ್ದಾವೆ.

**ಮಹಾಸತಿ ಕಲ್ಲುಗಳು**

ಪತಿಯು ಕಾರಣಾಂತರಗಳಿಂದ ಮಡಿದಾಗ ಅವನ ಸತಿಯೂ ಕೂಡ ಬೆಂಕಿಗೆ ಬಿದ್ದು ಪ್ರಾಣವನ್ನು ಅರ್ಪಿಸುತ್ತಿದ್ದ ವಿಧಾನ ಸತಿಪದ್ಧತಿಯಾಗಿದೆ. ಇದು ಅವಳ ಪತಿ ಭಕ್ತಿಯನ್ನು ತೋರಿಸುವ ಆಚರಣೆಯಾದರೂ ಇದರ ಹಿಂದೆ ಸಾಮಾಜಿಕ ಕಟ್ಟಳೆಗಳು, ಸಂಪ್ರದಾಯಗಳು, ಶೋಷಣೆಯ ಅಂಶಗಳು ಬಲವಾದ ಪ್ರೇರಣೆಯನ್ನು ನೀಡುತ್ತಿದ್ದವು. ಗಂಡನ ಹಿಂದೆಯೇ ಸತಿ

ಹೋಗದವಳಿಗೆ ಸಮಾಜದಲ್ಲಿ ಅಷ್ಟಾಗಿ ಗೌರವವಿರಲಿಲ್ಲ. ಅಲ್ಲದೆ ಪ್ರಾಚೀನ ಕಾಲದಲ್ಲಿ ಪತಿಯಿಲ್ಲದೇ ಸತಿಗೆ ಬದುಕು ಹಾಗೂ ರಕ್ಷಣೆಗೆ ಅನ್ಯಮಾರ್ಗವಿಲ್ಲದೆ ಈ ರೀತಿಯ ಆಚರಣೆಯನ್ನು ಅನಿವಾರ್ಯವಾಗಿಯಾದರೂ ಆಚರಿಸಬೇಕಾಗಿತ್ತು. ಮಡಿದ ಗಂಡನೊಂದಿಗೆ, ಚಿತೆಯನ್ನು ಪ್ರವೇಶ ಮಾಡುವುದರ ಮೂಲಕ ಸಾಯುವ ವಿಧಿಯನ್ನು 'ಸಹಗಮನ' ಎಂಬುದಾಗಿ ಕರೆಯುತ್ತಾರೆ. ಹಾಗೂ 'ಸತಿ' ಹೋಗುವುದು ಎಂಬುದಾಗಿಯೂ ಕರೆಯುತ್ತಾರೆ. ಈ ರೀತಿ ಅಗ್ನಿ ಪ್ರವೇಶವನ್ನು ಮಾಡಿ ಮಡಿದ ಮಹಿಳೆಯರ ಸ್ಮಾರಕಗಳೇ ಮಹಾಸತಿಗಲ್ಲುಗಳು. ಇವುಗಳನ್ನು 'ಮಾಸ್ತಿಗಲ್ಲು', 'ಮಾಸ್ತಮ್ಮ', 'ವ್ಯಾಸನತೋಳು' ಎಂಬುದಾಗಿ ಜನ ಹಲವಾರು ಕಡೆ ಇಂದಿಗೂ ಕರೆಯುತ್ತಾರೆ.[೧೨] ಗಂಡನೊಡನೆ ಹೀಗೆ ಸಹಗಮನ ಮಾಡುವ ಸ್ತ್ರೀಯರು ದೈವತ್ವಕ್ಕೇರಿ ಎಲ್ಲರಿಂದಲೂ ಪೂಜಿಸಲ್ಪಡುತ್ತಿದ್ದರು. ಆದ್ದರಿಂದ ಆಕೆಯು ಸಹಗಮನ ಮಾಡಿದ ಸ್ಥಳದಲ್ಲಿ ಸ್ಮಾರಕಗಳನ್ನು ಸ್ಥಾಪಿಸುತ್ತಿದ್ದರು. ಕರ್ನಾಟಕದಾದ್ಯಂತ ಇಂತಹ ಮಾಸ್ತಿಕಲ್ಲುಗಳು ಹೇರಳವಾಗಿ ದೊರೆಯುತ್ತವೆ. ಮಾಸ್ತಿಕಲ್ಲುಗಳಲ್ಲಿ ಸಾಧಾರಣವಾಗಿ ಶಾಸನರಹಿತವಾದ ಶಿಲ್ಪವು ಹೆಚ್ಚಾಗಿ ಕಂಡುಬರುತ್ತದೆ. ಕೆಲವೊಮ್ಮೆ ಶಿಲ್ಪದ ಜೊತೆಗೆ ಸಹಗಮನ ಮಾಡಿದ ಮಾಸ್ತಿ ಬಗ್ಗೆ, ಆಕೆಯ ಕುಟುಂಬದ ಬಗ್ಗೆ ಹಾಗೂ ಆಕೆಯು ಸಹಗಮನ ಮಾಡಿದ ರೀತಿಯ ಬಗ್ಗೆ ವಿವರವಾದ ವರ್ಣನೆಯು ಶಾಸನ ರೂಪದಲ್ಲಿ ಇರುವುದನ್ನು ಗಮನಿಸಬಹುದು.[೧೩]

### ಮಹಾಸತಿ ಕಲ್ಲುಗಳ ಸ್ವರೂಪ

ಮಹಾಸತಿಕಲ್ಲುಗಳಲ್ಲಿ ಹಲವು ವಿಧಗಳನ್ನು ಗುರುತಿಸಲಾಗಿದೆ. ಅವುಗಳೆಂದರೆ ಕಂಬದಿಂದ ಹೊರಟ ಬಲಗೈಯ ಎತ್ತಿದ ಸ್ಮಾರಕ, ಕಂಬದಿಂದ ಎರಡು ಬಲಗೈ ಎತ್ತಿದ ಸ್ಮಾರಕ ಮತ್ತು ಕಂಬದಿಂದ ಹೊರಟ ಬಲಗೈ ಎತ್ತಿದ ಶಿಲ್ಪದೊಂದಿಗೆ ಸತಿ-ಪತಿ ಕುಳಿತ ಚಿತ್ರ. ಇನ್ನುಳಿದ ಶಿಲ್ಪಗಳು ಸತಿಯರನ್ನು ಮಾತ್ರ ಒಳಗೊಂಡ ವಿವಿಧ ಸ್ತರಗಳ ಸ್ಮಾರಕ, ಸತಿ-ಪತಿಯರನ್ನು ಒಳಗೊಂಡ ಸ್ಮಾರಕ ವೀರಗಲ್ಲುಗಳಲ್ಲಿಯೂ ಸತಿ ಶಿಲ್ಪ ಇತ್ಯಾದಿ, ಬಲಗೈಯನ್ನು ಎತ್ತಿದ ಶಿಲ್ಪವುಳ್ಳ ಸ್ಮಾರಕಗಳೇ ಅಧಿಕ ಸಂಖ್ಯೆಯಲ್ಲಿ ಕರ್ನಾಟಕದಲ್ಲಿ ದೊರಕುವುದು ವಿಶೇಷವಾಗಿದೆ. ಅಧ್ಯಯನದ ದೃಷ್ಟಿಯಿಂದ ಮಹಾಸತಿ ಸ್ಮಾರಕಗಳನ್ನು ಮುಖ್ಯವಾಗಿ ಎರಡು ಭಾಗ ಮಾಡಿಕೊಳ್ಳಬಹುದು. ಒಂದು ಸಹಗಮನ ಶಿಲ್ಪ ಮತ್ತೊಂದು ಅನುಗಮನಶಿಲ್ಪ.

### ಸಹಗಮನ ಸ್ಮಾರಕ ಶಿಲ್ಪ

ಪತಿಯು ಮಡಿದಾಗ ಅವನ ಶವದ ಜೊತೆಯಲ್ಲಿಯೇ ಚಿತೆಗೆ ಬಿದ್ದು ಅಥವಾ ಸಮಾಧಿಯಲ್ಲಿ ಹುಗಿಸಿಕೊಂಡು ಪ್ರಾಣ ಬಿಡುತ್ತಿದ್ದ ಆಚರಣೆಯು 'ಸಹಗಮನ'ವೆನಿಸುತ್ತದೆ. ಈ ರೀತಿಯ ಘಟನೆಗಳನ್ನು ತಿಳಿಸುವ ಸ್ಮಾರಕ ಶಿಲ್ಪಗಳು ನಮಗೆ ಹೆಚ್ಚು ದೊರೆಯುವುದಿಲ್ಲ. ಕ್ರಿ.ಶ. ೧೦ನೇ ಶತಮಾನದ ಆರಂಭದಲ್ಲಿ ಪ್ರವಾಸ ಮಾಡಿದ ಅರಬ್ಬ್ ಪ್ರವಾಸಿಗ ಸುಲೈಮಾನನು ಹೇಳುವಂತೆ ಎಲ್ಲೋ ವಿರಳವಾಗಿ ಮಾತ್ರ ರಾಣಿಯರು ತಮ್ಮ ಗಂಡಂದಿರ ಚಿತೆಯನ್ನೇರುತ್ತಿದ್ದರು. ಅಲ್ಲಿಯೂ

ಯಾವ ರೀತಿಯ ಬಲವಂತವಿರಲಿಲ್ಲ. ಚಿತೆಯೇರುವುದು ಬಿಡುವುದು ವೈಯಕ್ತಿಕ ವಿಷಯವಾಗಿತ್ತು ಎಂದು ಹೇಳಿದ್ದಾನೆ. ಭಾರತಕ್ಕೆ ಭೇಟಿ ನೀಡಿದ ಅನೇಕ ವಿದೇಶಿ ಪ್ರವಾಸಿಗರು ತಾವೇ ಸ್ವತಃ ಕಣ್ಣಾರೆ ಕಂಡಿದ್ದಾರೆ.[೧೫] ಮಾಸ್ತಿಕಲ್ಲುಗಳ ಅಧ್ಯಯನದಲ್ಲಿ ನಮಗೆ ತೊಡಕಾಗುವ ಅಂಶವೆಂದರೆ ಬಹುತೇಕ ಮಾಸ್ತಿಕಲ್ಲುಗಳಲ್ಲಿ ಬರಹವಿಲ್ಲದಿರುವುದು. ಇದರಿಂದಾಗಿ ಆ ಸ್ಮಾರಕ ಶಿಲ್ಪ ಅನುಗಮನವೆ ಅಥವಾ ಸಹಗಮನವೆ ಎಂದು ನಿರ್ಧರಿಸಲಾಗುವುದಿಲ್ಲ. ಸ್ಮಾರಕದಲ್ಲಿ ಪತಿ ಜೊತೆ ಸಾಯುತ್ತಿರುವ ವಿವರಣೆ ಇದ್ದಲ್ಲಿ ಮಾತ್ರ ಆ ಸ್ಮಾರಕ ಸಹಗಮನ ಶಿಲ್ಪ ಎಂದು ಗುರುತಿಸಬಹುದು.

**ಅನುಗಮನ ಸ್ಮಾರಕ ಶಿಲ್ಪ**

ಸ್ಮಾರಕ ಶಿಲ್ಪಗಳಲ್ಲಿ ಸಹಗಮನವನ್ನು ಸೂಚಿಸುವ ಶಿಲ್ಪವಾಗಲೀ ಅಥವಾ ಪಾಠವಾಗಲಿ ಇಲ್ಲದಿದ್ದ ಪಕ್ಷದಲ್ಲಿ ಇಂತಹ ಸ್ಮಾರಕ ಶಿಲ್ಪಗಳನ್ನು ಅನುಗಮನ ಶಿಲ್ಪಗಳು ಎಂದು ಭಾವಿಸಬಹುದು. 'ಅನುಗಮನ'ವೆಂದರೆ ದೂರದಲ್ಲೆಲ್ಲೋ ಸ್ಥಳದಲ್ಲಿ ಪತಿ ಮಡಿದರೆ ತನ್ನ ಪತಿ ಮಡಿದ ವಿಷಯ ತಿಳಿದು ನಂತರ ಸತಿಯು ಅವನ ಪ್ರಿಯವಸ್ತುವನ್ನು ಹಿಡಿದು ಚಿತೆಯೇರುವುದು ಅನುಗಮನ.[೧೬] ಗಂಡ ಯಾವುದೇ ರೀತಿಯಿಂದ ಸತ್ತಿರಲಿ, ಹೆಂಡತಿ ಚಿತೆಯೇರಬೇಕೆಂಬುದು ಇಲ್ಲಿಯ ನಿಯಮ. ಆಗ ಹೆಂಡತಿ ತನ್ನ ಗಂಡನನ್ನು ಸೇರಲು ಪ್ರತ್ಯೇಕ ಅಗ್ನಿಕುಂಡವನ್ನು ನಿರ್ಮಿಸಿಕೊಂಡು ಸಾಯುತ್ತಿದ್ದ ವಿಧಾನ.[೧೭] ಸತಿಯಾಗಬೇಕಾಗಿದ್ದವಳು ಚಿತೆಯಲ್ಲಿ ಬಿದ್ದು ಪ್ರಾಣತ್ಯಾಗ ಮಾಡಬೇಕು ಎಂಬ ನಿಯಮವನ್ನು ನಮ್ಮವರು ಪಾಲಿಸಿಕೊಂಡು ಬಂದಿಲ್ಲ. ಗಂಡನಾದವನ ಶವದೊಂದಿಗೆ ಇವಳು ಆ ಸಮಾಧಿಯಲ್ಲಿ ಹುಗಿಸಿಕೊಳ್ಳುತ್ತಿದ್ದಳು. ಅನುಗಮನ ಸ್ಮಾರಕ ಶಿಲ್ಪಗಳನ್ನು ಪೂರ್ಣಸತಿ ಸ್ಮಾರಕ, ಪೂರ್ಣ ಮತ್ತು ಇತರ ಸ್ಮಾರಕ, ಇಬ್ಬರು ಸತಿಯರ ಪೂರ್ಣ ಸ್ಮಾರಕ ಮತ್ತು ಇತರರ ಶಿಲ್ಪ, ವೀರ-ಮಾಸ್ತಿಶಿಲ್ಪ, ಹಂತಗಳಿರುವ ವೀರಮಾಸ್ತಿ ಶಿಲ್ಪ, ಒಕ್ಕೈ ಮಾಸ್ತಿ, ಇಕ್ಕೈ ಮಾಸ್ತಿ, ಬಹುಕೈ ಮಾಸ್ತಿ ಎಂದು ಹಲವು ರೀತಿಯಲ್ಲಿ ವಿಭಾಗಿಸಬಹುದು.[೧೮]

ಸಂಖ್ಯೆ : ೦೧

ಶಿಲ್ಪ : ಒಕ್ಕೈ ಮಾಸ್ತಿಕಲ್ಲು  ಗ್ರಾಮ : ಮಾನ್ಯಖೇಟ

ಸ್ಥಳ : ಕೋಟೆಯ ಒಳಗಡೆ ಮಸೀದಿಯ ಹತ್ತಿರ ಬಿದ್ದಿರುವ ಒಕ್ಕೈ ಮಾಸ್ತಿಕಲ್ಲು

ಕಾಲಮಾನ : ಕ್ರಿ.ಶ. ೧೧-೧೨ನೆಯ ಶತಮಾನ  ಅಳತೆ : ೧೦೪ x ೪೩ ಸೆ.ಮೀ.

ಈ ಶಿಲ್ಪವನ್ನು ಕಪ್ಪು ಶಿಲೆಯಲ್ಲಿ ಕಂಡರಿಸಿದೆ. ಶಿಲ್ಪದ ಎಡಭಾಗದಲ್ಲಿ ಉದ್ದನೆಯ ಕಂಬದಿಂದ ಹೊರಟ ಬಲಗೈಯು ಮೇಲಕ್ಕೆ ಎತ್ತಿ ಆಶೀರ್ವಾದಿಸುವಂತಿದೆ. ಕೈಯಲ್ಲಿ ಬಳೆ ಮತ್ತು ತೋಳಬಂದಿ ಇದೆ. ಶಿಲ್ಪದ ಕೆಳಭಾಗದಲ್ಲಿ ಪೀಠದ ಮೇಲೆ ವೀರನು ಕುದುರೆಯ ಮೇಲೆ ಕುಳಿತಿರುವಂತೆ ಚಿಕ್ಕದಾಗಿ ಬಿಡಿಸಲಾಗಿದೆ. ಅಗ್ನಿ ಪ್ರವೇಶಗೊಂಡ ಸತಿಯ ಶಿಲ್ಪವಾಗಿರುವುದರಿಂದ ಅವಳ ಎತ್ತಿದ ಕೈಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿ ವೀರನ ಶಿಲ್ಪವನ್ನು ಗೌಣವಾಗಿ ಕಂಡರಿಸಿದೆ. ಕೊನೆಯ ಹಂತದಲ್ಲಿ ಶಿವಲಿಂಗ, ಕೈಮುಗಿದು ಕುಳಿತಿರುವ ಸತಿಪತಿ, ಸೂರ್ಯಚಂದ್ರರನ್ನು ಕೆತ್ತಲಾಗಿದೆ.

ಸಂಖ್ಯೆ : ೦೨
ಶಿಲ್ಪ : ವೀರಮಾಸ್ತಿ ಗ್ರಾಮ : ಕೊಡ್ಲಾ
ಸ್ಥಳ : ಶಂಭುಲಿಂಗೇಶ್ವರ ದೇವಾಲಯದ ಆವರಣದಲ್ಲಿದೆ.
ಕಾಲಮಾನ : ಕ್ರಿ.ಶ. ೧೫-೧೬ನೆಯ ಶತಮಾನ ಅಳತೆ : ೯೧x೪೩ ಸೆ.ಮೀ.

ಒಂದು ಹಂತದಲ್ಲಿರುವ ಈ ಶಿಲ್ಪದಲ್ಲಿ ಸತಿಪತಿಗಳಿಬ್ಬರನ್ನು ಸಮಭಂಗಿಯಲ್ಲಿ ನಿಂತಿರುವಂತೆ ಕಂಡಿರಸಲಾಗಿದೆ. ಶಿಲ್ಪದ ಬಲಭಾಗದಲ್ಲಿರುವ ವೀರನು ತನ್ನ ಎರಡು ಕೈಗಳಿಂದ ಪತ್ನಿಯ ಕೈಯನ್ನು ಹಿಡಿದಿರುವಂತೆ ಕಂಡುಬರುತ್ತದೆ. ಸೈನಿಕ ಮಾದರಿಯ ಉಡುಪನ್ನು ಧರಿಸಿದ್ದು ಸೊಂಟದಲ್ಲಿ ಆಯುಧವೊಂದನ್ನು ಇಟ್ಟುಕೊಂಡಿದ್ದಾನೆ. ಕಿವಿಯಲ್ಲಿ ಓಲೆ ಆಭರಣಗಳಿವೆ. ಶಿಲ್ಪದ ಎಡಭಾಗದಲ್ಲಿರುವ ಮಾಸ್ತಿಯು ಎರಡು ಕೈಗಳನ್ನು ಇಳಿಬಿಟ್ಟಿದ್ದು ಕೈ ಮತ್ತು ಕಾಲುಗಳಲ್ಲಿ ಕಡಗಗಳನ್ನು ಧರಿಸಿರುವಳು. ಸೀರೆಯನ್ನು ತೊಟ್ಟಿದ್ದು, ಅದರ ನೆರಿಗೆಗಳು ಪಾದಗಳವರೆಗೆ ಇಳಿಬಿದ್ದಿವೆ. ಕಿವಿಯಲ್ಲಿ ಓಲೆ ಆಭರಣಗಳಿರುವುದು ಕಂಡುಬರುತ್ತದೆ.

**೪.೩. ಕೆರೆ-ಬಾವಿಗಳು**

ಕ್ರಿ.ಶ. ೯-೧೦ನೆಯ ಶತಮಾನದಲ್ಲಿ ರಾಷ್ಟ್ರಕೂಟರು ಹಾಗೂ ೧೦ನೆಯ ಶತಮಾನದ ಕಾಲಭಾಗದಿಂದ ೧೨ನೆಯ ಶತಮಾನದವರೆಗಿನ ಕಾಲ (೩೦೦ ವರ್ಷ) ಕೆರೆ-ಬಾವಿಗಳ ಸುವರ್ಣಯುಗವಾಗಿತ್ತು.[೯] ರಾಷ್ಟ್ರಕೂಟರ ಆಳ್ವಿಕೆಯಲ್ಲಿ ಗಂಗರು ಅವರ ಅಧೀನರಾಜರಾದರು. ಇಬ್ಬರು ಅನೇಕ ಕೆರೆಗಳನ್ನು ಕರ್ನಾಟಕದ ತುಂಬೆಲ್ಲಾ ಕಟ್ಟಿಸಿದರು. ಇಲ್ಲವೇ ಕಟ್ಟಲು ಪ್ರೋತ್ಸಾಹವಿತ್ತರು.[೨೦] ಅದರ ಪ್ರಭಾವವನ್ನು ಪ್ರಸ್ತುತ ಪರಿಸರದ ಮೇಲೆ ಆಗಿ ಇಲ್ಲಿ ಕೂಡ ಅನೇಕ ಕೆರೆ-ಬಾವಿಗಳು ನಿರ್ಮಾಣವಾದವು. ಮುಂದುವರೆದು ರಾಷ್ಟ್ರಕೂಟರ ನಂತರ ಇದೇ ಪರಿಸರದಲ್ಲಿ ವಿದ್ವಾಂಸರು ನೆಲೆಸುವುದಕ್ಕಾಗಿ ಅಸಂಖ್ಯಾತ ಹೊಸ ಹಳ್ಳಿಗಳನ್ನು ಕಟ್ಟುವುದು, ಅಗ್ರಹಾರಗಳನ್ನು ನಿರ್ಮಿಸುವುದು, ಅಲ್ಲಿ ಕೆರೆ-ಬಾವಿಗಳನ್ನು ನಿರ್ಮಿಸುವುದು, ಸತ್ರ ಅಥವಾ ವಿಶ್ರಾಂತಿ ಗೃಹಗಳನ್ನು ಹಾಗೂ ದೇವಸ್ಥಾನಗಳನ್ನು ಕಟ್ಟುವುದು ಇದೆಲ್ಲದರ ಯುಗ, ಆ ಕಾಲದ, ವಾಸ ಸ್ಥಳವಾಗಿ ಅಗ್ರಹಾರ, ಸತ್ರ, ಕೆರೆ, ಬಾವಿ, ದೇವಾಲಯ ಈ ಎಲ್ಲಾ ಸಂಸ್ಥೆಗಳು ಪರಸ್ಪರ ಸಂಬಂಧಿಸಿದ್ದೇ ಆಗಿದ್ದವು. ಯಾವುದೇ ಒಂದು ಹಳ್ಳಿಯನ್ನು ರಚಿಸಿದಾಗ ನೀರು ಸರಬರಾಜು ಮೂಲಭೂತ ಅಗತ್ಯ. ಹತ್ತಿರದಲ್ಲಿ ನದಿ ಇಲ್ಲದಿದ್ದಲ್ಲಿ ಆ ಹಳ್ಳಿಯಲ್ಲಿ ಕೆರೆ ನಿರ್ಮಿಸಿ ಮಳೆಯ ಆಧಾರಿತವಾಗಿ ವರ್ಷಪೂರ್ತಿ ಜನರ ಜೀವನಾಡಿಯಾಗಿ ಕೆರೆ-ಬಾವಿಗಳ ಕರ್ತವ್ಯ ಪ್ರಮುಖವಾಯಿತು.

ಕೆರೆ-ಬಾವಿಯನ್ನು ಕಟ್ಟಿ ಮುಗಿಸಿದಾಗ ನಂತರ ಕೃತಜ್ಞತೆಯ ರೂಪವಾಗಿ ಒಂದು ಗುಡಿಯನ್ನು ಅದರ ಹತ್ತಿರ ಕಟ್ಟಲಾಗಿತ್ತು. ಕೆಲವೊಮ್ಮೆ ಕೆರೆ ಅಥವಾ ಬಾವಿ ಒಡೆದಾಗ ಅದರ ದುರಸ್ತಿಗೆ ದೇವಾಲಯದ ನಿಧಿಯು ಒದಗುತ್ತಿತ್ತು. ಅಲ್ಲದೇ ದೇವಾಲಯಗಳಿಗೆ ಬೇಕಾದಷ್ಟು ಜಮೀನು ಇರುತ್ತಿತ್ತು. ಆದ್ದರಿಂದ ಕೆರೆ-ಬಾವಿಗಳಿಂದ ನೀರಾವರಿ ಸೌಲಭ್ಯವನ್ನು ಒದಗಿಸುವುದರಲ್ಲಿ

ದೇವಾಲಯದ್ದು ಮುಖ್ಯ ಪಾತ್ರವಿರುತ್ತಿತ್ತು. ಈ ಎಲ್ಲಾ ಸಂಘಗಳ ಎಲ್ಲಾ ಮೇಲುಸ್ತುವಾರಿ ಪಡೆದಿದ್ದ ಸಂಸ್ಥೆಯೇ ಹಳ್ಳಿಯ ಸ್ವಯಂ ಆಡಳಿತದ ಅಥವಾ ಗ್ರಾಮಸಭೆ, ಕರ್ನಾಟಕದ ಇತಿಹಾಸದಲ್ಲಿ ಈ ಯುಗಕ್ಕೂ ಹಿಂದೆಯಾಗಲಿ ಅಥವಾ ಅನಂತರವಾಗಲಿ ಅಂತ ಸಂಸ್ಥೆ ಇರಲಿಲ್ಲ. ಅದಕ್ಕೆ ಮುಂದಾಳತ್ವ ಒದಗಿಸುತ್ತಿದ್ದವರು ಗಾವುಂಡರು ಅಥವಾ ಹಳ್ಳಿಯ ಮುಖ್ಯಸ್ಥರು.

ಕ್ರಿ.ಶ. ೮ನೇ ಶತಮಾನದಿಂದ ೧೨ನೇ ಶತಮಾನದ ಅವಧಿಯಲ್ಲಿನ ಊರುಗಳಲ್ಲಿ ನಗರ ಅಥವಾ ಶ್ರೇಣಿ ಎಂಬ ಪ್ರಾತಿನಿಧಿಕ ಸಂಸ್ಥೆಗಳು ಇದ್ದವು. ಅವುಗಳ ಮುಖಂಡರು, ನಗರ ಶ್ರೇಷ್ಠಿ ಹಾಗೂ ಪಟ್ಟಣ ಶ್ರೇಷ್ಠಿ, ಅವರು ಕೂಡ ದೇವಾಲಯಗಳನ್ನು ಕೆರೆಗಳನ್ನು ಕಟ್ಟುವುದರಲ್ಲಿ ಬಾವಿಗಳನ್ನು ತೋಡಿಸುವುದರಲ್ಲಿ ಮುಖ್ಯ ಪಾತ್ರವಹಿಸುತ್ತಿದ್ದರು. ಈ ಯುಗದಲ್ಲಿ ಸರ್ವ ಜನರಿಗೂ ನೀರಿನ ಸೌಲಭ್ಯಗಳಿಗಾಗಿ ಕೆರೆ–ಬಾವಿಗಳ ನಿರ್ಮಾಣ ಹಾಗೂ ಅವುಗಳ ಸಂರಕ್ಷಣೆಯಲ್ಲಿ ಜನತೆಯ ಪಾತ್ರ ಅತ್ಯುನ್ನತ ಮಟ್ಟದಲ್ಲಿತ್ತು.[೨೧] ಈ ರೀತಿಯಾದ ಕಾರಣದಿಂದ ನಿರ್ಮಾಣವಾದ ಕೆರೆ–ಬಾವಿಗಳು ಅನೇಕ ಇದ್ದು ಪ್ರಸ್ತುತ ಅಧ್ಯಯನದಲ್ಲಿ ಪ್ರಮುಖವಾದವುಗಳ ಕುರಿತು ಮಾಹಿತಿ ಈ ಕೆಳಗೆ ಇದೆ.

**ಅಲ್ಲೂರಿನ ಕೆರೆ**

ಏರಿಯ ಉದ್ದ : ೧೦೦೦ ಮೀ.   ತೂಬಿನ ಸಂಖ್ಯೆ : ಎರಡು

ಕೋಡಿಯ ಸಂಖ್ಯೆ : ಒಂದು   ಕಾಲುವೆ ಸಂಖ್ಯೆ : ಎರಡು

ಪ್ರಸ್ತುತ ಪರಿಸರದಲ್ಲಿರುವ ಅಲ್ಲೂರಿನ ಕೆರೆಯು ಅತ್ಯಂತ ಪ್ರಾಚೀನ ಕೆರೆಯಾಗಿದೆ. ಇದು ಕಲ್ಯಾಣ ಚಾಲುಕ್ಯರ ಆಳ್ವಿಕೆ ಕಾಲದಲ್ಲಿ ನಿರ್ಮಾಣವಾಗಿದ್ದು ನಂತರ ಹೈಹಯರ ಕಾಲದಲ್ಲಿ ವಿಸ್ತರಿಸಿ ದುರಸ್ತಿ ಮಾಡಲಾಯಿತು. ಈ ಅಲ್ಲೂರಿನ ಕೆರೆಗೆ ಅದರದೆ ಆದ ಇತಿಹಾಸವಿದೆ. ಇದು ಅಲ್ಲೂರಿನ ಬೆಟ್ಟಗುಡ್ಡಗಳ ಮಧ್ಯದಲ್ಲಿದೆ. ಪೂರ್ವ, ಉತ್ತರದ ಕಡೆ ಬೆಟ್ಟ ಆವರಿಸಿದ್ದು ಪಶ್ಚಿಮದ ಕಡೆ ಕೃಷಿ ಭೂಮಿಯನ್ನು ಹೊಂದಿದೆ. ಅಲ್ಲೂರು ಅರಲೂರು ೩೦೦ ಎಂಬ ಹೆಸರಿನಿಂದ ಹೈಹಯರ ರಾಜಧಾನಿಯಾಗಿತ್ತು. ಇಲ್ಲಿ ಈ ಕಾಲದಲ್ಲಿಯೇ ನೀರಿನ ಅವಶ್ಯಕತೆ ಇದ್ದು ಕೆರೆಯನ್ನು ನಿರ್ಮಿಸಿದ್ದನ್ನು ವಿಸ್ತರಿಸಿದರು. ಈ ಕೆರೆಯು ಮಳೆಯ ಆಧಾರದ ಮೇಲೆ ಇದೆ. ಮಳೆಗಾಲದಲ್ಲಿ ಸುರಿದ ಮಳೆ ನೀರು ಅಕ್ಕಪಕ್ಕದ ಪೂರ್ವ ಗ್ರಾಮಗಳಿಂದ ಹರಿದು ಬಂದ ಈ ಕೆರೆಯಲ್ಲಿ ಸಂಗ್ರಹವಾಗುತ್ತವೆ. ಅವು ವರ್ಷ ಪೂರ್ತಿ ಜನರು ಮತ್ತು ಪ್ರಾಣಿ ಪಕ್ಷಿಗಳಿಗೂ ಆಶ್ರಯ ತಾಣವಾಗಿದೆ. ಬೇಸಿಗೆಯಲ್ಲಿ ಕಡಿಮೆ ನೀರು ಇರುತ್ತವೆ. ಆದರೆ ಮಳೆಗಾಲದಲ್ಲಿ ಅತೀ ಹೆಚ್ಚಿನ ನೀರು ಸಂಗ್ರವಾಗಿ ಅಲ್ಲೂರು ಹಾಗೂ ಐತಿಹಾಸಿಕ ಅಳೊಳ್ಳಿ ಗ್ರಾಮದ ಕೆಲವು ಎಕರೆ ಭೂಮಿಗೆ ನೀರಾವರಿ ವ್ಯವಸ್ಥೆ ಕಲ್ಪಿಸುತ್ತದೆ. ಪ್ರಸ್ತುತವಾಗಿ ಕೆರೆಯ ದುರಸ್ತಿ ಕಾರ್ಯವು ಕರ್ನಾಟಕ ಸರ್ಕಾರದಿಂದ ಎರಡು ವರ್ಷಗಳಿಂದ ನಡೆಯುತ್ತಲಿದೆ. ಮುಂದಿನ ದಿನಗಳಲ್ಲಿ ಅದರ ಉಪಯೋಗವಾಗಲಿದೆ.

**ನಾಲವಾರದ ಕೆರೆ**

ಏರಿಯಾ ಉದ್ದ : ೫೦೦ ಮೀ. ತೂಬಿನ ಸಂಖ್ಯೆ : ಒಂದು

ಕೊಡಿಯ ಸಂಖ್ಯೆ : ಒಂದು ಕಾಲುವೆ ಸಂಖ್ಯೆ : ಎರಡು

ಈ ಕೆರೆಯು ಮಾನ್ಯಖೇಟದಿಂದ ೪೦ ಕಿ.ಮೀ. ದೂರದಲ್ಲಿದೆ. ಇದು ನಲವಾರ ಗ್ರಾಮದಿಂದ ೩ ಕಿ.ಮೀ. ದೂರದ ರೈಲ್ವೆ ನಿಲ್ದಾಣದ ಹತ್ತಿರವಿದೆ. ಈ ಕೆರೆಯು ಕೇವಲ ಮಳೆಯಾಧರಿತದಿಂದ ಕೂಡಿದ ಕೆರೆಯಾಗಿದೆ. ಕೃಷಿಗೆ ಅಷ್ಟೇನು ಉಪಯೋಗಕರವಾಗಿಲ್ಲ. ಆದರೆ ಬೇಸಿಗೆ ಕಾಲದಲ್ಲಿ ಪ್ರಸ್ತುತ ಮತ್ತು ಪ್ರಾಚೀನ ಕಾಲದಿಂದಲೂ ಈ ಪರಿಸರದಲ್ಲಿ ನೀರಿನ ಅಭಾವವಿರುವುದರಿಂದ ಕೆರೆ ಬಾವಿಗಳನ್ನು ನಿರ್ಮಾಣ ಮಾಡಿದ್ದರು. ಇಲ್ಲಿನ ಕೆರೆಯನ್ನು ಜನರಿಗೆ ಕುಡಿಯುವ ನೀರು ಹಾಗೂ ಪ್ರಾಣಿಗಳಿಗಾಗಿ ನಿಜಾಮರು ನೂರಾರು ಕೆರೆಗಳನ್ನು ನಿರ್ಮಿಸಿದರು. ಅವರಲ್ಲಿ ಈ ಕೆರೆಯು ಸಹ ಸೇರಿದೆ. ಈ ಕೆರೆಯ ದಕ್ಷಿಣ ಭಾಗದಲ್ಲಿ ಬೆಟ್ಟ ಇರುವುದರಿಂದ ಅಲ್ಲಿ ಬಿದ್ದ ಮಳೆ ನೀರು ಬರಿದು ಬಂದು ಕೆರೆಯಲ್ಲಿ ಸಂಗ್ರಹವಾಗಿ ವರ್ಷಪೂರ್ತಿ ಜನರ ಉಪಯೋಗಕ್ಕೆ ಪ್ರಾಣಿ ಪಕ್ಷಿಗಳಿಗೆ ಸಹಕಾರಿಯಾಗಿದೆ.

**ಕೊಡದೂರು ಕೆರೆ**

ಏರಿ ಉದ್ದ : ೨೦೦ ಮೀ. ಕೊಡಿಯ ಸಂಖ್ಯೆ : ಒಂದು

ಕಾಲುವೆ ಸಂಖ್ಯೆ : ಒಂದು

ಕೊಡದೂರು ಕೆರೆಯು ಮಾನ್ಯಖೇಟದಿಂದ ೩೦ ಕಿ.ಮೀ. ದೂರದಲ್ಲಿದೆ. ಇದು ಸುಮಾರು ೧೭-೧೮ನೆಯ ಶತಮಾನದಲ್ಲಿ ನಿರ್ಮಾಣ ಮಾಡಿದಂತೆ ಕಂಡುಬರುತ್ತದೆ. ಈ ಕೆರೆಯು ಅಷ್ಟೇನು ವಿಶೇಷತೆಯಿಂದ ಕೂಡಿಲ್ಲ. ಆದರೆ ಮಳೆಗಾಲದಲ್ಲಿನ ನೀರಿನಿಂದ ನೀರು ಸಂಗ್ರಹವಾಗಿ ಜನರ ನೀರಿನ ಅವಶ್ಯಕತೆ ಮತ್ತು ಪ್ರಾಣಿಗಳಿಗೆ ಆಶ್ರಯ ತಾಣವಾಗಿದೆ. ಇದು ಸಹ ನಿಜಾಮರ ಆಳ್ವಿಕೆಯ ಕಾಲದಲ್ಲಿ ನಿರ್ಮಾಣವಾದ ಕೆರೆಯಾಗಿದೆ. ಸಣ್ಣ ಕೆರೆಯಾದ್ದರಿಂದ ಕೆಲವು ಬಾರಿ ಬೇಸಿಗೆ ಸಮಯದಲ್ಲಿ ಇದು ಬತ್ತಿಹೋಗುತ್ತದೆ.

**ಕೊಡ್ಲಾ ಕೆರೆ**

ಏರಿ ಉದ್ದ : ೫೦೦ ಮೀ. ತೂಬಿನ ಸಂಖ್ಯೆ : ಒಂದು

ಕೊಡಿಯ ಸಂಖ್ಯೆ : ಎರಡು ಕಾಲುವೆ ಸಂಖ್ಯೆ : ಎರಡು

ಕೊಡ್ಲಾ ಗ್ರಾಮವು ರಾಷ್ಟ್ರಕೂಟರ ಹಾಗೂ ಕಲ್ಯಾಣದ ಚಾಲುಕ್ಯರ ಕಾಲದಿಂದಲೂ ಐತಿಹಾಸಿಕ ನೆಲೆಯಾಗಿದೆ. ಇಲ್ಲಿನ ಜನರ ಅವಶ್ಯಕತೆಗಾಗಿ ಊರಿನ ಹೊರಭಾಗದ ಚೌಡಮಾಯೇ ಮತ್ತು ಶಂಭುಲಿಂಗೇಶ್ವರ ದೇವಾಲಯದ ಹತ್ತಿರ ದಕ್ಷಿಣದ ದಿಕ್ಕಿನಲ್ಲಿ ಒಂದು ಪ್ರಾಚೀನ

ಕೆರೆಯಿದ್ದು ಇದು ಸಹ ಮಳೆಗಾಲದಲ್ಲಿ ತುಂಬಿ ವರ್ಷವಿಡೀ ಜನರ ಅವಶ್ಯಕತೆಯನ್ನು ಹೊಂದಿದ ನೀರಿನ ಸೌಲಭ್ಯವನ್ನು ಒದಗಿಸುವಂತಹ ಕೆರೆಯಾಗಿದೆ. ರಾಷ್ಟ್ರಕೂಟರ ಕಾಲದಲ್ಲಿ ನಿರ್ಮಾಣವಾದ ಕೆರೆಯಾದರು ಕಲ್ಯಾಣದ ಚಾಲುಕ್ಯರು ಹಾಗೂ ನಿಜಾಮರ ಕಾಲದಲ್ಲಿ ದುರಸ್ತಿ ಹೊಂದಿದೆ. ಮಳೆ ನೀರು ಕೆರೆಗೆ ಹರಿದು ಬಂದು ನೀರು ಸಂಗ್ರಹವಾಗಿ ವರ್ಷ ಪೂರ್ತಿ ಜನರ ದಿನನಿತ್ಯದ ಬಳಕೆಗೆ ಹಾಗೂ ಪ್ರಾಣಿಗಳಿಗೆ ನೀರಿನ ಸೌಲಭ್ಯವನ್ನು ಒದಗಿಸುವಂತಹ ಕೆರೆಯಾಗಿದೆ.

**ಅಣಿಕೆರಿ ಕೆರೆ**

ಏರಿಯ ಉದ್ದ : ೪೦೦ ಮೀ.  ತೂಬಿನ ಸಂಖ್ಯೆ : ಒಂದು

ಕೊಡಿಯ ಸಂಖ್ಯೆ : ಒಂದು  ಕಾಲುವೆ ಸಂಖ್ಯೆ : ಎರಡು

ಅಣಿಕೇರಿ ಗ್ರಾಮವು ಮಾನ್ಯಖೇಟದಿಂದ ೩೦ ಕಿ.ಮೀ. ದೂರದಲ್ಲಿದ್ದು ಇದು ನಿಜಾಮರ ಆಳ್ವಿಕೆಯ ಕಾಲದಲ್ಲಿ ನಿರ್ಮಾಣವಾದ ಕೆರೆಯಾಗಿದೆ. ಇದು ಮಳೆಯ ನೀರಿನಿಂದ ಮಳೆಗಾಲದಲ್ಲಿ ನೀರು ಸಂಗ್ರಹವಾಗಿ ವರ್ಷವಿಡೀ ಅಲ್ಲಿನ ಸುತ್ತಮುತ್ತಲಿನ ಗ್ರಾಮಕ್ಕೂ ಕೂಡ ಕುಡಿಯಲು ಹಾಗೂ ಪ್ರಾಣಿ ಪಕ್ಷಿಗಳಿಗೂ ಬಳಕೆಗೆ ಬರುತ್ತದೆ. ಹೈದ್ರಾಬಾದಿನ ನಿಜಾಮರು ನೀರಿನ ಸೌಕರ್ಯಕ್ಕಾಗಿ ಪ್ರಸ್ತುತ ಪರಿಸರದ ಅನೇಕ ಕಡೆ ಕೆರೆಗಳನ್ನು ನಿರ್ಮಿಸಿದರು. ಅವುಗಳಲ್ಲಿ ಉಳಿದಿರುವುದೆ ಕಡಿಮೆ ಅದರಲ್ಲಿ ಈ ಕೆರೆಯು ಇಂದಿಗೂ ಜನರ ಜೀವನಾಡಿಯಾಗಿದೆ.

**ಮಾನ್ಯಖೇಟದಲ್ಲಿನ ಬಾವಿಗಳು**

ರಾಷ್ಟ್ರಕೂಟರ ರಾಜಧಾನಿಯಾದ ಈ ಗ್ರಾಮದಲ್ಲಿ ಯಾವುದೇ ಕೆರೆಯು ಕಂಡುಬರುವುದಿಲ್ಲ. ಏಕೆಂದರೆ ಕಾಗಿನ ನದಿಯ ದಡದಲ್ಲಿರುವುದರಿಂದ. ಆದರೆ ಮಾನ್ಯಖೇಟದ ಜನರು ನೀರಾವರಿಗೆ ಅಲ್ಲದೆ ಕುಡಿಯುವ ನೀರು ಮತ್ತು ಪ್ರಾಣಿ ಪಕ್ಷಿಗಳಿಗೆ ದಿನಬಳಕೆಗಾಗಿ ಊರಿನ ಅನೇಕ ಕಡೆ ಬಾವಿಗಳನ್ನು ತೋಡಿರುವುದು ಕಂಡುಬರುತ್ತವೆ. ಕಾಗಿಣಾ ನದಿಯು ಪ್ರಾಚೀನ ಕಾಲದಿಂದಲೂ ಮಳೆಗಾಲದಲ್ಲಿ ತುಂಬಿ ಹರಿಯುತ್ತದೆ. ಆದರೆ ಬೇಸಿಗೆ ಸಮಯದಲ್ಲಿ ನೀರಿನ ಅಭಾವವು ಹೆಚ್ಚುವುದರಿಂದ ಊರಿನ ಅಲ್ಲಲ್ಲಿ ಬಾವಿಗಳ ಮೂಲಕ ಗ್ರಾಮಕ್ಕೆ ನೀರು ಒದಗಿಸುವ ಕಾರ್ಯ ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರು ನಿರ್ಮಿಸಿರುವುದರಿಂದ ಅಲ್ಲಿನ ಜನರ ಅವಿಭಾಜ್ಯ ಅಂಗದಂತೆ ಕಾರ್ಯನಿರ್ವಹಿಸಿದವು. ಮಾನ್ಯಖೇಟವಷ್ಟೇ ಅಲ್ಲದೇ ಈ ಪರಿಸರದ ಪ್ರತಿಯೊಂದು ಗ್ರಾಮದಲ್ಲೂ ನೀರು ಪೂರೈಕೆಗಾಗಿ ಬಾವಿಗಳು ನಿರ್ಮಾಣವಾದವು. ಅವುಗಳಲ್ಲಿ ಕೆಲವು ಉಳಿದಿವೆ. ಇನ್ನು ಕೆಲವು ಹಾಳು ಬಾವಿಗಳಾಗಿವೆ.

**ಐತಿಹಾಸಿಕ ಕೊಡ್ಲಾದ ಬಾವಿಗಳು**

ಇದು ರಾಷ್ಟ್ರಕೂಟರ ಕಾಲದ ಒಂದು ಐತಿಹಾಸಿಕ ಗ್ರಾಮವಾಗಿದೆ. ಇಲ್ಲಿ ಒಂದು ಕೆರೆ ಮತ್ತು ಅನೇಕ ಪ್ರಾಚೀನ ಬಾವಿಗಳಿವೆ. ಇಲ್ಲಿ ರಾಷ್ಟ್ರಕೂಟರು ಮತ್ತು ಕಲ್ಯಾಣದ ಚಾಲುಕ್ಯರು

ಆಳ್ವಿಕೆ ಮಾಡಿದ ಗ್ರಾಮವಾಗಿದೆ. ಆದ್ದರಿಂದ ತಮ್ಮ ದಿನ ನಿತ್ಯದ ನೀರಿನ ಬಳಕೆ ಪ್ರಾಣಿ ಪಕ್ಷಿಗಳ ಬಳಕೆಗೆ ಬಾವಿಗಳನ್ನು ತೋಡಿಸಿದರು ಅವು ಶಂಭುಲಿಂಗೇಶ್ವರ ದೇವಾಲಯದ ಹತ್ತಿರ ಮತ್ತು ಅದೆ ಗ್ರಾಮದ ಊರಿನ ಕೆಲವು ಕಡೆ ಬಾವಿಗಳನ್ನು ನಿರ್ಮಾಣ ಮಾಡಿರುವುದು ಕಂಡುಬರುತ್ತದೆ. ಇಲ್ಲಿನ ಬಾವಿಗಳು ಕೃಷಿಗೆ ಅಷ್ಟೇನು ಅನುಕೂಲವಾಗದಿದ್ದರೂ ಜನರ ಕುಡಿಯುವ ನೀರಿಗೆ ಹಾಗೂ ದಿನನ್ನಿತ್ಯದ ಬಳಕೆಗೆ ಅತ್ಯಂತ ಸಹಕಾರಿಯಾಗಿದೆ. ಈ ಬಾವಿಗಳು ಸಾಮಾನ್ಯವಾಗಿ ಮಳೆಗಾಲದಲ್ಲಿ ತುಂಬಿರುತ್ತವೆ. ಬೇಸಿಗೆ ಕಾಲದಲ್ಲಿ ಕೆಲವು ಬಾವಿಗಳಲ್ಲಿ ಕಡಿಮೆ ನೀರು ಕಂಡುಬಂದರೆ ಇನ್ನು ಕೆಲವು ಬಾವಿಗಳಲ್ಲಿ ನೀರು ಬತ್ತಿ ಹೋಗುತ್ತದೆ. ಪ್ರಸ್ತುತವಾಗಿ ಈ ಬಾವಿಗಳ ನೀರು ಅತಿ ಬೇಗನೆ ಬಾವಿಗಳ ನೀರು ಬತ್ತಿಹೋಗುವುದಕ್ಕೆ ಅಲ್ಲಿನ ವೈಜ್ಞಾನಿಕವಾಗಿ ಹಾಕಲಾದ ಕೊಳವೆ ಬಾವಿಗಳಿಂದ ಪ್ರಾಚೀನ ಬಾವಿಗಳು ಹಾಳಾಗುವುದಕ್ಕೆ ಪ್ರಮುಖ ಕಾರಣವಾಗಿರಬಹುದು ಎಂಬುವುದು ತಿಳಿದುಬರುತ್ತದೆ.

### ನಾಗಾವಿಯ ಬಾವಿಗಳು

ಮಾನ್ಯಖೇಟದಿಂದ ೧೫ ಕಿ.ಮೀ. ದೂರದಲ್ಲಿರುವ ನಾಗಾವಿಯು ಒಂದು ಪ್ರಾಚೀನ ಕಾಲದ ಐತಿಹಾಸಿಕ ನೆಲೆಯಾಗಿದೆ. ಇಲ್ಲಿ ಕೋಟೆ–ಕೊತ್ತಲಗಳ ದೇವಾಲಯಗಳು ಇವೆ. ಅದರ ಜೊತೆಗೆ ವಿಶೇಷವಾಗಿ ಈಶ್ವರ ದೇವಾಲಯದ ಹಿಂಭಾಗದಲ್ಲಿ ರಾಮತೀರ್ಥ ಅಥವಾ ನಂದಿಬಾವಿ ಎಂಬ ಹೆಸರಿನ ಪ್ರಸಿದ್ಧ ಪ್ರಾಚೀನ ನಂದಿ ಬಾವಿ ಇದೆ. ಇದು ರಾಷ್ಟ್ರಕೂಟರು ಹಾಗೂ ಕಲ್ಯಾಣದ ಚಾಲುಕ್ಯರ ಕಾಲದಿಂದಲೂ ಅಲ್ಲಿನ ನೀರಿನ ಬುಗ್ಗೆಯಿಂದ ನೂರಾರು ಎಕರೆ ಕೃಷಿ ನೀರಾವರಿಗೆ ಅನುಕೂಲಕರವಾಗಿದೆ. ವರ್ಷಪೂರ್ತಿ ಇಲ್ಲಿನ ನೀರು ಬತ್ತುವುದಿಲ್ಲ. ಅಲ್ಲಿರುವ ದೇವಾಲಯಗಳ ದಾನದತ್ತಿಯಿಂದ ಅನೇಕ ಬಾರಿ ಬಾವಿಯು ದುರಸ್ತಿಯಾಗಿರುವುದು ಕಂಡುಬರುತ್ತದೆ. ಈ ನದಿ ಬಾವಿಯು ನೀರು ಕೃಷಿಗೆ ಮಾತ್ರವಲ್ಲದೆ ಕುಡಿಯಲು ಸಿಹಿ ನೀರಾಗಿದೆ. ನಾಗಾವಿಯು ಹೈಹಯರ ರಾಜಧಾನಿಯಾಗಿದ್ದಾಗ ಹಾಗೂ ಅಗ್ರಹಾರವಾಗಿದ್ದಾಗ ಬಹು ಜನಸಂಖ್ಯೆ ಜನರ ದಿನನಿತ್ಯದ ಬಳಕೆಗೆ ಹಾಗೂ ಕುಡಿಯುವ ನೀರಿಗೆ ಅನುಕೂಲಕರವಾಗಿತ್ತು. ನಾಗಾವಿಯಲ್ಲಿ ನಂದಿ ಬಾವಿ ಮಾತ್ರವಲ್ಲದೆ ಇನ್ನು ಅನೇಕ ಬಾವಿಗಳು ಇವೆ. ಉದಾ. ನಾಗಾವಿ ಯಲ್ಲಮ್ಮ ದೇವಸ್ಥಾನದ ಹತ್ತಿರ ನಾಗಾವಿಯ ಸುತ್ತಮುತ್ತಲು ಕಂಡುಬರುತ್ತವೆ.

### ದಿಗ್ಗಾವಿಯಲ್ಲಿನ ಬಾವಿಗಳು

ಈ ದಿಗ್ಗಾವಿ ಗ್ರಾಮವು ಮಾನ್ಯಖೇಟ ಪರಿಸರದ ಅತ್ಯಂತ ಪ್ರಾಚೀನ ಹಾಗೂ ಐತಿಹಾಸಿಕ ಬಾವಿಗಳಿಂದ ಕೂಡಿದ ಗ್ರಾಮವಾಗಿದೆ. ಇಲ್ಲಿಯು ಸಹ ರಾಷ್ಟ್ರಕೂಟರು ಹಾಗೂ ಕಲ್ಯಾಣದ ಚಾಲುಕ್ಯರ ಆಳ್ವಿಕೆಯ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳಿವೆ. ಅದೇ ಕಾಲದಲ್ಲಿ ನಿರ್ಮಾಣವಾದ ಅನೇಕ ಬಾವಿಗಳಿವೆ. ಈ ಗ್ರಾಮಕ್ಕೆ ಯಾವುದೇ ನದಿ–ಕೆರೆಗಳು ಇಲ್ಲದಿರುವುದರಿಂದ ಜನರು ಕುಡಿಯುವ ನೀರು ಮತ್ತು ದಿನ ಬಳಕೆಗಾಗಿ, ಪ್ರಾಣಿಗಳಿಗಾಗಿ ಅತಿ ಅವಶ್ಯಕವಿರುವ

ನೀರು ಸರಬರಾಜುಗಾಗಿ ಬಾವಿಗಳನ್ನು ತೋಡಿಸಿ ನೀರನ್ನು ಪಡೆಯುವ ವ್ಯವಸ್ಥೆಯನ್ನು ಅಂದಿನ ಕಾಲದಲ್ಲಿಯೆ ಪ್ರಾರಂಭವಾಯಿತು. ಇಂತಹ ಕಾರಣದಿಂದ ದಿಗ್ಗಾವಿ ಗ್ರಾಮದ ಸುತ್ತಮುತ್ತ ಇನ್ನೂರಕ್ಕೂ ಹೆಚ್ಚು ಬಾವಿಗಳು ಈ ಗ್ರಾಮದಲ್ಲಿ ನಿರ್ಮಾಣವಾಗಿವೆ. ಆದರೆ ಇಂದು ಕೆಲವು ಬಾವಿಗಳು ಮಾತ್ರವೇ ಉತ್ತಮ ಸ್ಥಿತಿಯಲ್ಲಿದ್ದು ಉಳಿದ ಸುಮಾರು ೧೮೦ಕ್ಕೂ ಹೆಚ್ಚು ಬಾವಿಗ್ಗಳು ನೀರಿಲ್ಲದೆ ಬತ್ತಿಹೋಗಿವೆ. ಇನ್ನೂ ಕೆಲವು ಬಾವಿಗಳು ಮಳೆಗಾಲದಲ್ಲಿ ತುಂಬಿ ಬೇಸಿಗೆ ಕಾಲದಲ್ಲಿ ಕಡಿಮೆ ನೀರು ಇರುವುದು ಕಂಡುಬರುತ್ತದೆ. ಒಟ್ಟಿನಲ್ಲಿ ಪ್ರಸ್ತುತ ಪರಿಸರದ ಗ್ರಾಮಗಳಲ್ಲಿಯೇ ಅತಿ ಹೆಚ್ಚಿನ ಬಾವಿಯನ್ನು ಹೊಂದಿರುವ ಗ್ರಾಮ ದಿಗ್ಗಾವಿಯಾಗಿದೆ. ಇಲ್ಲಿರುವ ಅಲ್ಪಸ್ವಲ್ಪ ಬಾವಿಗಳಿಂದಲೂ ನೀರಾವರಿ ವ್ಯವಸ್ಥೆ ಇರುವುದು ವಿಶೇಷವಾಗಿದೆ. ಇಲ್ಲಿನ ಜನರಿಗೆ ಕೊಳವೆ ಬಾವಿಗಳಿಗಿಂತಲೂ ಪ್ರಾಚೀನ ಬಾವಿಗಳೆ ಅತ್ಯಂತ ಅವಶ್ಯಕವೆನಿಸಿವೆ.

**ರಾಮತೀರ್ಥದಲ್ಲಿನ ಪ್ರಾಚೀನ ಬಾವಿಗಳು**

ಪ್ರಸ್ತುತ ಅಧ್ಯಯನ ಪರಿಸರದ ಮಾನ್ಯಖೇಟದಿಂದ ೩೫ ಕಿ.ಮೀ. ದೂರದಲ್ಲಿರುವ ಈ ಗ್ರಾಮವು ಅತ್ಯಂತ ಪ್ರಾಚೀನ ಗ್ರಾಮವಾಗಿದ್ದು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಚಿಕ್ಕ ಗ್ರಾಮವಾಗಿದ್ದು ನಂತರ ಅಲ್ಲಿನ ಹೈಹಯರ ರಾಜಧಾನಿಯಾದ ಅರಲೂರು ೩೦೦ಕ್ಕೆ ಒಳಪಟ್ಟ ಗ್ರಾಮವಾಯಿತು. ಈ ಸಂದರ್ಭದಲ್ಲಿ ಒಂದೆರಡು ಪ್ರಾಚೀನ ಬಾವಿಗಳು ನಿರ್ಮಾಣವಾದವು. ಅದರಲ್ಲಿ ವಿಶೇಷವಾಗಿ ಮುಗಿಲ ಬಾವಿ (ಆಕಾಶದ) ಅತ್ಯಂತ ಪ್ರಾಮುಖ್ಯತೆ ಪಡೆದ ಪ್ರಾಚೀನ ಬಾವಿಯಾಗಿದ್ದು ಅಕ್ಕಪಕ್ಕದ ಗ್ರಾಮಗಳಾದ ರಾಜೋಳ, ಸಾತನೂರು, ಹೊಸೂರು ಗ್ರಾಮಗಳಿಗೆ ಪ್ರಾಚೀನ ಕಾಲದಿಂದ ಮತ್ತು ಇಂದಿಗೂ ಸಹ ಬೇಸಿಗೆ ಸಮಯದಲ್ಲಿ ನೀರು ಒದಗಿಸುವ ಕಾರ್ಯ ಮಾಡುತ್ತದೆ. ಈ ಬಾವಿಯಲ್ಲಿ ನೀರಿನ ಬಗ್ಗೆ ಇದ್ದು ಇದು ವರ್ಷಪೂರ್ತಿ ಪಶ್ಚಿಮದ ದಿಕ್ಕಿಗೆ ಹರಿಯುತ್ತದೆ. ಈ ದಿಕ್ಕಿನಲ್ಲಿರುವ ರಾಮತೀರ್ಥದ ಕೆಲವು ಎಕರೆ ಭೂಮಿ ಮತ್ತು ಅಲ್ಲೂರಿನ ಕೆಲವು ಎಕರೆ ಭೂಮಿಯ ನೀರಾವರಿಗಾಗಿ ಬಳಸಿಕೊಳ್ಳುತ್ತಾರೆ. ಅದಲ್ಲದೆ ಗ್ರಾಮದ ಜನರ ದಿನನಿತ್ಯದ ಬಳಕೆ ಹಾಗೂ ಕುಡಿಯುವ ನೀರು ಇಲ್ಲಿಂದಲೇ ಬಳಕೆಯಾಗುವುದರಿಂದ ಈ ಪರಿಸರದ ಪ್ರಮುಖ ಬಾವಿಯಾಗಿದೆ ಎಂಬುವುದು ಕಂಡುಬರುತ್ತದೆ. ಇದೇ ಗ್ರಾಮದ ಊರಿನ ನಡುವೆ ಒಂದು ಬಾವಿ ಇದೆ. ಮತ್ತು ಭೀಮನಹಳ್ಳಿಗೆ ಹೋಗುವ ರಸ್ತೆ ಮಾರ್ಗದಲ್ಲಿ ಹತ್ತಿ ಬಸವಣ್ಣ ಎಂಬ ಹೆಸರಿನ ಬಾವಿ ಇದೆ. ಇದು ಕೂಡ ಕುಡಿಯುವ ನೀರು ಮತ್ತು ಕೃಷಿಗೆ ಅನುಕೂಲಕರವಾಗಿದೆ ಪ್ರಾಚೀನ ಕಾಲದಿಂದ.

**೪.೪. ಕೋಟೆಗಳು**

ಪ್ರಾಚೀನ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ರಾಜ್ಯಗಳು ತಮ್ಮ ಭದ್ರತೆ ಮತ್ತು ರಕ್ಷಣೆಗಾಗಿ ಕೋಟೆ ಕೊತ್ತಲುಗಳನ್ನು ನಿರ್ಮಿಸಿಕೊಂಡವು. ರಾಜ್ಯಗಳ ಅಥವಾ ಸಾಮ್ರಾಜ್ಯಗಳ ಉದಯಕ್ಕಿಂತ ಮುಂಚೆ ಜನರು ಸಣ್ಣ ಸಣ್ಣ ಗ್ರಾಮಗಳಲ್ಲಿ ವಾಸಿಸುತ್ತಿದ್ದರು. ಅವರು ತಮ್ಮ ಜೀವನ ಮತ್ತು

ಸಂಪತ್ತನ್ನು ಕಳ್ಳಕಾಕರಿಂದ ಹಾಗೂ ಕಾಡು ಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ತಾವು ವಾಸಿಸುತ್ತಿರುವ ಗ್ರಾಮದ ಸುತ್ತಲು ರಕ್ಷಣೆಗಾಗಿ ಎತ್ತರವಾದ ಗೋಡೆಯನ್ನು ನಿರ್ಮಿಸಿಕೊಳ್ಳಲು ಪ್ರಾರಂಭಿಸಿದನು. ಈ ರೀತಿಯಾಗಿ ಜಗತ್ತಿನ ನಾನಾ ಕಡೆ ಪ್ರಾರಂಭವಾದವು. ಪ್ರಾಚೀನ ಕಾಲದಲ್ಲಿ ಅದೇ ರೀತಿ ಭಾರತದ ನಾನಾ ಕಡೆ ಪ್ರಾರಂಭವಾಗಿ ಕರ್ನಾಟಕ ಹಾಗೂ ಪ್ರಸ್ತುತ ಅಧ್ಯಯನದಲ್ಲಿಯೂ ಸನ್ನತಿ, ನಾಗಾವಿ, ಮಾನ್ಯಖೇಟ, ಅಲ್ಲೂರು, ಸೇಡಂನಲ್ಲಿ ನಿರ್ಮಾಣವಾಗಿರುವುದು ಕಂಡುಬರುತ್ತದೆ. ಅವುಗಳನ್ನು ಒಂದು ಕಡೆ ವಿವರಿಸುವ ಪ್ರಯತ್ನವು ಇದಾಗಿದೆ.

**ಕೋಟೆಯ ಅರ್ಥ**

ಪ್ರಾಚೀನ ಕಾಲದಲ್ಲಿ ಪ್ರಾಣಿ ಮತ್ತು ಸಂಪತ್ತು ರಕ್ಷಣೆಗಾಗಿ ತಮ್ಮ ಗ್ರಾಮದ ಸುತ್ತಲು ರಕ್ಷಣೆಗಾಗಿ ಎತ್ತರವಾದ ಗೋಡೆಯನ್ನು ನಿರ್ಮಿಸಿಕೊಳ್ಳುತ್ತಿದ್ದುದನ್ನು "ರಕ್ಷಣ ಗೋಡೆ" ಅಥವಾ ಕೋಟೆ ಎಂದು ಕರೆಯುತ್ತಾರೆ. ಕೋಟೆಗೆ ಹಳೆಗನ್ನಡದಲ್ಲಿ 'ಕೊಂಟೆ' ಎಂದು ಕರೆಯಲಾಗಿದೆ.[೨೨] ಶಬ್ದಕೋಶಗಳಲ್ಲಿ ಕೋಟೆಗೆ 'ಕಿಲ್ಲೆ', 'ದುರ್ಗ' 'ರಕ್ಷಣಾ ಗೋಡೆ' ಎಂಬ ಪದಗಳನ್ನು ಬಳಸಿದ್ದಾರೆ.[೨೩] ಪ್ರಾಚೀನ ಸಾಹಿತ್ಯದಲ್ಲಿ ಕೋಟೆಗಳಿಗೆ 'ಪುರ' ಎಂಬ ಅರ್ಥವಿದೆ. 'ಮಹಾಪುರ' ಎಂದರೆ ಭದ್ರವಾದ ಗೋಡೆಯನ್ನು ಹೊಂದಿರುವ ಪಟ್ಟಣ ಎಂದು ಅರ್ಥವಿದೆ.[೨೪]

**ಕೋಟೆಯ ಮಹತ್ವ**

ಕೋಟೆಯ ಮಹತ್ವವನ್ನು ಕುರಿತು ಪ್ರಾಚೀನ ಸಾಹಿತ್ಯಗಳಾದ ಮಾನಸಾರ, ವಿಶ್ವಕರ್ಮನ ವಾಸ್ತು, ಮನುಸ್ಮೃತಿ, ಕೌಟಿಲ್ಯನ ಅರ್ಥಶಾಸ್ತ್ರ, ಬೃಹತ್‌ಸಂಹಿತೆ ಮುಂತಾದ ಕೃತಿಗಳಲ್ಲಿ ಕೋಟೆಯ ಮಹತ್ವದ ಕುರಿತು ವಿವರಿಸಲಾಗಿದೆ. ಮನುವಿನ ಅಭಿಪ್ರಾಯದಲ್ಲಿ ಒಬ್ಬ ಬಿಲ್ಲುಗಾರ ಕೋಟೆಯ ಗೋಡೆಯ ರಕ್ಷಣೆಯಲ್ಲಿ ನಿಂತು ನೂರಾರು ಶತ್ರುಗಳೊಂದಿಗೆ ಹೋರಾಟ ಮಾಡಬಲ್ಲನು, ಅಂತಹ ಮಹತ್ವದ ಸ್ಥಳಗಳು ಕೋಟೆಯಲ್ಲಿರುತ್ತವೆ ಎಂದು ಹೇಳಿದ್ದಾನೆ.[೨೫] ಪಂಚತಂತ್ರದಲ್ಲಿ ಕೋಟೆಯ ಮಹತ್ವವನ್ನು ಕುರಿತು ಹೀಗೆ ಹೇಳಲಾಗಿದೆ. "ಸಾವಿರಾರು ಆನೆಗಳಿಂದ ಮತ್ತು ಲಕ್ಷಾಂತರ ಕುದುರೆಗಳಿಂದ ಯುದ್ಧದಲ್ಲಿ ನಿರ್ವಹಿಸಲಾಗದ ಕಾರ್ಯವನ್ನು ರಾಜನು ಒಂದು ಕೋಟೆಯಿಂದ ನಿರ್ವಹಿಸುತ್ತಾನೆ".[೨೬] ಕೌಟಿಲ್ಯನು ತನ್ನ 'ಅರ್ಥಶಾಸ್ತ್ರ'ದಲ್ಲಿ ರಾಜನು ರಾಜ್ಯದ ಗುಡಿಯ ನಾಲ್ಕು ದಿಕ್ಕಿನಲ್ಲಿ ಶತ್ರುಗಳನ್ನು ತಡೆಯಲು ಸೂಕ್ತವಾದ ರಕ್ಷಣಾ ಗೋಡೆಯನ್ನು ನಿರ್ಮಿಸಿಕೊಳ್ಳಬೇಕು (ಕೋಟೆ) ಎಂದು ಹೇಳಿದ್ದಾನೆ.[೨೭] ಇಂತಹ ವಿಶೇಷವಾದ ಪ್ರಾಮುಖ್ಯತೆಯನ್ನು ಕೋಟೆಗಳು ಪಡೆದಿರುವುದರಿಂದ ಪ್ರಾಚೀನ ಕಾಲದಿಂದ ಅನೇಕ ಬದಲಾವಣೆಯನ್ನು ಕಾಣುತ್ತ ಕೋಟೆಗಳು ರಾಜ್ಯ ಸಾಮ್ರಾಜ್ಯಗಳು ಬೆಳೆದಂತೆಲ್ಲ ಯುದ್ಧ ಪದ್ಧತಿಯಲ್ಲಿ ಬದಲಾವಣೆಯಾದಂತೆ ಕೋಟೆಯ ನಿರ್ಮಾಣದಲ್ಲಿಯೂ ಬದಲಾವಣೆಗಳು ಆದವು. ಇವುಗಳ ನಿರ್ಮಾಣಕ್ಕೆ ಅಲ್ಲಿ ದೊರೆತಂತಹ ನೈಸರ್ಗಿಕವಾಗಿ ಲಭ್ಯವಾಗುವ ವಸ್ತುಗಳನ್ನು ಬಳಸಿಕೊಂಡು ರಕ್ಷಣೆ ಕೋಟೆಯನ್ನು ನಿರ್ಮಿಸಿದರು. ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಅನೇಕ ಸಣ್ಣ ಪುಟ್ಟ ಕೋಟೆಗಳು ಇದ್ದು,

ಅವುಗಳಲ್ಲಿ ಪ್ರಮುಖವಾದ ಕೆಲವು ಕೋಟೆಗಳ ರಾಜಮನೆತನಗಳು ಮತ್ತು ಅರಸರ, ಹೆಚ್ಚಿನ ಗಮನದಿಂದ ಕೋಟೆಗಳ ಹೆಚ್ಚು ಬೆಳವಣಿಗೆ ಕಂಡವು.[೨೮] ಅವನ್ನು ಒಂದುಕಡೆ ವಿವರಿಸುವ ಪ್ರಯತ್ನ ಇದಾಗಿದೆ.

### ಭಾರತದ ಕೋಟೆಯ ಪ್ರಾಚೀನತೆ

ಭಾರತದ ಇತಿಹಾಸ ಹರಪ್ಪ ಸಂಸ್ಕೃತಿಯಿಂದ ಆರಂಭವಾಗುವಂತೆ ಭಾರತದ ಕೋಟೆಗಳ ಇತಿಹಾಸವು ಹರಪ್ಪ ರಕ್ಷಣಾ ಗೋಡೆಯಿಂದ ಆರಂಭವಾಗುತ್ತದೆ. ನಂತರ ಭಾರತದಲ್ಲಿ ಕೋಟೆಗಳ ಎರಡನೆಯ ಹಂತವು ವೇದಗಳ ಕಾಲದಿಂದ ಆರಂಭವಾಗುತ್ತದೆ. ರಾಮಾಯಣ ಮತ್ತು ಮಹಾಭಾರತದಲ್ಲಿ ಕೋಟೆಗಳ ಉಲ್ಲೇಖ ಕಂಡುಬರುತ್ತದೆ. ಚಂದ್ರಗುಪ್ತ ಮೌರ್ಯನ ಆಸ್ಥಾನಕ್ಕೆ ಭೇಟಿ ನೀಡಿದ ಮೆಗಾಸ್ಥಾನಿಸನು, ಪಾಟಲಿಪುತ್ರ ನಗರದ ಸುತ್ತಲು ಇರುವ ಕೋಟೆಗಳನ್ನು ವಿವರಿಸಿದ್ದಾನೆ.[೨೯] ಈ ರೀತಿಯಾದ ಸ್ಥಳಗಳಿಂದ ಕೋಟೆಗಳ ಪ್ರಾಚೀನತೆಯು ಭಾರತದಲ್ಲಿ ಆರಂಭವಾಯಿತು.

### ಕರ್ನಾಟಕದಲ್ಲಿ ಕೋಟೆಗಳ ಪ್ರಾಚೀನತೆ

ಕರ್ನಾಟಕದಲ್ಲಿ ಕೋಟೆಗಳ ನಿರ್ಮಾಣದ ಆರಂಭವು ಸ್ಪಷ್ಟವಾಗಿ ಶಾತವಾಹನ ಕಾಲಕ್ಕೆ ಆರಂಭವಾಯಿತು. ಕ್ರಿ.ಪೂ. ೨ನೆಯ ಶತಮಾನದಲ್ಲಿ ನಿರ್ದಿಷ್ಟ ಆಕಾರದಲ್ಲಿ ತಯಾರಿಸಿದ ಇಟ್ಟಿಗೆಗಳಿಂದ ಕೋಟೆಗಳ ನಿರ್ಮಾಣ ಆರಂಭವಾಯಿತು. ತದನಂತರ ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಎಲ್ಲಾ ಅರಸು ಮನೆತನಗಳಲ್ಲಿಯೂ ಸಹ ಕೋಟೆಗಳು ನಿರ್ಮಾಣವಾಗಿರುವುದು ಕಂಡುಬರುತ್ತದೆ. ವಿಶೇಷವಾಗಿ ಪ್ರಸ್ತುತ ಪರಿಸರದಲ್ಲಿ ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರು ಕೋಟೆಗಳನ್ನು ನಿರ್ಮಿಸಿರುವುದು ತಿಳಿದುಬರುತ್ತದೆ. ಅಲ್ಲದೆ ಇದೆ ಪರಿಸರದಲ್ಲಿನ ಕೋಟೆಗಳನ್ನು ರಾಷ್ಟ್ರಕೂಟರು ಮತ್ತು ಕಲ್ಯಾಣದ ಚಾಲುಕ್ಯರ ಆಳ್ವಿಕೆ ನತಂರ ಹೈಹಯರು, ಬಹುಮನಿಯರು, ಗೋಲ್ಕೊಂಡದ ಕುತುಬ್‌ಷಾಹಿಗಳು ಕೋಟೆಗಳನ್ನು ರಕ್ಷಣೆ ಮಾಡುವುದರ ಜೊತೆಗೆ ತಮ್ಮದೇ ಆದ ರೀತಿಯಲ್ಲಿ ಮರು ನಿರ್ಮಾಣ ಮಾಡಿದ ಕೋಟೆಗಳನ್ನು ಒಂದು ಕಡೆ ವಿವರಿಸುವ ಪ್ರಯತ್ನ ಇದಾಗಿದೆ.

### ಮಾನ್ಯಖೇಟ ಪರಿಸರದಲ್ಲಿನ ಕೋಟೆಗಳು

#### ಸನ್ನತಿ ಕೋಟೆ

ಸನ್ನತಿ ಗ್ರಾಮವನ್ನು ಸ್ಥಳೀಯರು 'ಸೊಂತಿ' ಎಂದು ಕರೆಯುತ್ತಾರೆ. ಇದು ಮಾನ್ಯಖೇಟದಿಂದ ೪೦ ಕಿ.ಮೀ. ದೂರದ ಭೀಮಾ ನದಿಯ ಎಡದಂಡೆಯ ಮೇಲೆ ಸನ್ನತಿ ಗ್ರಾಮವಿದೆ. ಇದು ಕ್ರಿ.ಪೂ. ೧ನೇ ಶತಮಾನದಿಂದ ಇಂದಿನವರೆಗೆ ಜನವಸತಿಯನ್ನು ಹೊಂದಿದೆ. ನಿರಂತರವಾಗಿ ಹರಿಯುವ ಭೀಮಾ ನದಿ ಜನವಸತಿಗೆ ಪ್ರಮುಖ ಕಾರಣವಾಗಿದೆ. ಶಿಲಾಯುಗದಿಂದ ಇಂದಿನವರೆಗೆ ಈ ಗ್ರಾಮವು ಮಹತ್ವವನ್ನು ಪಡೆದಿದೆ. ಏಕೆಂದರೆ ಮೂರು ಕಡೆ ನದಿಯಿಂದ ಆವೃತ್ತಿಯಾಗಿರುವ

ಈ ಪ್ರದೇಶವು ಹಲವು ಪ್ರಾಣಿಗಳ ನೆಲೆಯಾಗಿತ್ತು. ನಿರಂತರ ಪ್ರಾಣಿಗಳ ಸ್ಥಳವಾಗಿರುವ ಇಲ್ಲಿ ಶಿಲಾಯುಗದ ಜನಾಂಗವು ಅವುಗಳನ್ನು ಬೇಟೆಯಾಡಲು ಆಗಮಿಸಿ, ಕಾಲಕ್ರಮೇಣ ಇದೆ ಸ್ಥಳದಲ್ಲಿ ನೆಲೆನಿಂತರು. ಶಿಲಾಯುಗದ ಹಲವು ಬಗೆಯ ಬೇಟೆಯ ಉಪಕರಣಗಳು ಇಲ್ಲಿ ಲಭ್ಯವಾಗಿವೆ.[೩೦]

ಕ್ರಿ.ಪೂ. ೩ನೇ ಶತಮಾನದಲ್ಲಿ ಆಳಿರುವ ಮೌರ್ಯ ಚಕ್ರವರ್ತಿ ಅಶೋಕನ ಕೆಲವು ಶಾಸನಗಳು ಇಲ್ಲಿ ದೊರೆತಿವೆ. ಶಾತವಾಹನರಷ್ಟೇ ಅಲ್ಲದೆ ಇಲ್ಲಿ ಶಿಲಾಯುಗದಿಂದ ಶಾತವಾಹನರ ಕಾಲದವರೆಗೆ ಅತ್ಯಂತ ಪ್ರಮುಖ ಸ್ಥಳವಾಗಿತ್ತು. ಆ ಕಾಲಮಾನದಲ್ಲಿ ಪ್ರಾಮುಖ್ಯತೆ ಪಡೆದ ಸನ್ನತಿ ಕೇಂದ್ರ ಸ್ಥಳದ ಸುತ್ತಲು ರಕ್ಷಣೆಗಾಗಿ ಕೋಟೆಯನ್ನು ನಿರ್ಮಿಸಿಕೊಂಡಿದ್ದರು. ಇಂತಹ ಪ್ರಮುಖವಾದ ಸನ್ನತಿಯ ಗ್ರಾಮವನ್ನು ನದಿಯಿಂದ ರಕ್ಷಿಸಲು ಅದರ ಮೂರು ದಿಕ್ಕಿನಲ್ಲಿ ಕೋಟೆಯನ್ನು ನಿರ್ಮಿಸಲಾಗಿದೆ. ಗ್ರಾಮವು ಮೂರು ಕಡೆಯಿಂದ ಭೀಮಾ ನದಿಯ ರಕ್ಷಣೆ ಪಡೆದರೆ, ಒಂದು ಭಾಗದಲ್ಲಿ ಮಾತ್ರ ಕೋಟೆಯಿಂದ ರಕ್ಷಣೆಯನ್ನು ಪಡೆದುಕೊಂಡಿದೆ. ಈ ಸನ್ನತಿ ಗ್ರಾಮದಿಂದ ೨ ಕಿ.ಮೀ. ದೂರದಲ್ಲಿ ಎತ್ತರವಾದ ವಿಶಾಲವಾದ ಪ್ರದೇಶವಿದೆ. ಇದನ್ನು ಗ್ರಾಮಸ್ಥರು ರಣಮಂಡಲ ಎಂದು ಕರೆಯತ್ತಾರೆ. ೧೯೮೫ರಲ್ಲಿ ಶರ್ಮ ಅವರು ಕೈಗೊಂಡ ಸಂಶೋಧನೆಯಲ್ಲಿ ಇದರ ಮಹತ್ವ ಕುರಿತು ಅಧ್ಯಯನ ಮಾಡಲಾಯಿತು. ರಣಮಂಡಲದಿಂದ ಸುಮಾರು ೨೦೦ ಮೀಟರ್ ಅಂತರದಲ್ಲಿ ಈಶಾನ್ಯ, ಉತ್ತರ ವಾಯವ್ಯ ಮತ್ತು ಪಶ್ಚಿಮ ಭಾಗದ ಕಡೆಗೆ ಅರ್ಧ ವೃತ್ತಾಕಾರದಲ್ಲಿ ಕೋಟೆಯನ್ನು ನಿರ್ಮಿಸಲಾಗಿದೆ. ಸನ್ನತಿಯ ಕೋಟೆಯು ಇಟ್ಟಿಗೆಗಳಿಂದ ನಿರ್ಮಿಸಲಾಗಿದೆ. ಇದು ಕರ್ನಾಟಕದಲ್ಲಿಯೇ ಅತ್ಯಂತ ಪ್ರಾಚೀನ ಕೋಟೆಯಾಗಿದೆ. ಕ್ರಿ.ಶ. ೧ ರಿಂದ ೩ನೇ ಶತಮಾನದಲ್ಲಿ ರಚಿಸಿರುವಂತೆ ಕಂಡುಬರುತ್ತದೆ. ಈ ಕೋಟೆಯು ಸುಮಾರು ೬೦೦ ಮೀ. ಉದ್ದವಾಗಿದ್ದು ಅದರ ತಳಭಾಗದಲ್ಲಿ ೨೦ ರಿಂದ ೨೫ ಅಡಿ ದಪ್ಪ, ಮೇಲ್ಭಾಗದಲ್ಲಿ ೪ ರಿಂದ ೮ ಅಡಿ ದಪ್ಪವಾಗಿದೆ. ಇದಕ್ಕೆ ಬಳಸಿರುವ ಇಟ್ಟಿಗೆಗಳು ೬೦ ಸೆ.ಮೀ. ಉದ್ದ ೩೦ ಸೆ.ಮೀ. ಅಗಲ ಮತ್ತು ೧೦ ಸೆ.ಮೀ. ಅಗಲ ೬ ಸೆ.ಮಿ. ಎತ್ತರವಾಗಿದೆ. ಕೆಲವು ಸಂಶೋಧನೆಗಳಲ್ಲಿ ಉದ್ದನೆಯ ಗೋಡೆಯಲ್ಲಿ ೭ ದ್ವಾರಗಳಿರುವುದಾಗಿ ಉಲ್ಲೇಖಿಸಲಾಗಿದೆ.[೩೬] ಆದರೆ ಪ್ರಸ್ತುತ ಸಂಶೋಧನೆಯಲ್ಲಿ ನಾಲ್ಕು ಕಡೆಗಳಲ್ಲಿ ದ್ವಾರಗಳಿರುವುದರಿಂದ ಉಲ್ಲೇಖಿಸಲಾಗಿದೆ. ಗ್ರಾಮದ ಪ್ರವೇಶವು ಕೋಟೆಯ ಮಧ್ಯ ಭಾಗದಲ್ಲಿದೆ. ಪ್ರವೇಶದ ಬಲ ಬದಿಯ ಗೋಡೆಯು ಸಂಪೂರ್ಣವಾಗಿ ನಾಶ ಹೊಂದಿದ್ದು, ಎಡಭಾಗದ ಗೋಡೆಯು ಕುಸಿದು ಬಿದ್ದಿದೆ. ಅದರ ಒಳಗೋಡೆ ಹಲವು ಬಗೆಯ ರಕ್ಷಣಾತ್ಮಕ ಕಟ್ಟಡಗಳಿರುವಂತೆ ಕಂಡುಬರುತ್ತದೆ. ಇದರ ಬಗ್ಗೆ ಪರಿಪೂರ್ಣ ಮಾಹಿತಿಯು ಉತ್ಖನನದಿಂದ ಮಾತ್ರ ತಿಳಿದುಕೊಳ್ಳಲು ಸಾಧ್ಯವಾಗುತ್ತದೆ.

ಸನ್ನತಿಯ ಕೋಟೆಯು ಅತ್ಯಂತ ಪ್ರಾಚೀನ ಕೋಟೆಗಳಲ್ಲಿ ಒಂದಾಗಿರುವುದರಿಂದ ರಕ್ಷಣಾತ್ಮಕ ದೃಷ್ಟಿಯಿಂದ ಕೆಲವೊಂದು ಲೋಪದೋಷಗಳು ಕಂಡುಬರುತ್ತವೆ. ಆದರೆ ಇಂತಹ ಪ್ರಾಚೀನ

ಕೋಟೆಯು ಪ್ರಸ್ತುತ ಮಾನ್ಯಖೇಟ ಪರಿಸರದಲ್ಲಿರುವುದು ಹೆಮ್ಮೆಯ ಸಂಗತಿ. ಇಲ್ಲಿ ಒಳಕೋಟೆ ಮತ್ತು ರಣಮಂಡಲವನ್ನು ಹೊರಕೋಟೆ ಎಂದು ಕರೆಯಲಾಗಿದೆ. ರಣಮಂಡಲದ ದಕ್ಷಿಣ ಭಾಗದಲ್ಲಿ ಕೆಲವು ಉತ್ಖನನದಲ್ಲಿ ಹಲವು ಬಗೆಯ ಇಟ್ಟಿಗೆಯಿಂದ ನಿರ್ಮಿಸಿದ ವೃತ್ತಾಕಾರದ ರಚನೆಗಳು ಲಭ್ಯವಾಗಿವೆ.[೩೧] ಅವುಗಳು ರಣಮಂಡಲ ಅಥವಾ ಕಾವಲುಗೋಪುರಗಳಂತೆ ಕಂಡುಬರುವುದರಿಂದ ಇದನ್ನು ರಣಮಂಡಲ ಎಂದು ಕರೆಯಲಾಗಿದೆ.

**ಮಾನ್ಯಖೇಟದ ಕೋಟೆ**

ಪ್ರಸ್ತುತ ಅಧ್ಯಯನದ ಕೇಂದ್ರ ಸ್ಥಳವಾದ ಮಾನ್ಯಖೇಟವು ಭೀಮಾ ನದಿಯ ಉಪನದಿಯಾದ ಕಾಗಿಣ ನದಿಯ ಎಡದಂಡೆಯ ಮೇಲೆ ಇರುವ ಮಾನ್ಯಖೇಟವು ಚಾರಿತ್ರಿಕ ಮಹತ್ವದ ಸ್ಥಳವಾಗಿದೆ. ಇದು ರಾಷ್ಟ್ರಕೂಟರ ರಾಜಧಾನಿಯ ಜೊತೆಗೆ ಟೀಕಾಚಾರ್ಯರ ಕೇಂದ್ರ ಸ್ಥಳವಾಗಿದೆ. ಈಗಿನ ಮಳಖೇಡ ಗ್ರಾಮವು ಹಿಂದೆ ಮಾನ್ಯಖೇಟವೆಂಬ ಹೆಸರಿನಲ್ಲಿ ರಾಷ್ಟ್ರಕೂಟರ ರಾಜಧಾನಿಯಾಗಿತ್ತು. ಇವರು ೮ನೆಯ ಶತಮಾನದ ಮಧ್ಯಭಾಗದಿಂದ ೧೦ನೆಯ ಶತಮಾನದವರೆಗೆ ಪ್ರಸ್ತುತ ಪರಿಸರದಲ್ಲಿ ಆಳ್ವಿಕೆ ನಡೆಸಿದರು. ಪ್ರಾರಂಭದಲ್ಲಿ ಬಾದಾಮಿ ಚಾಲುಕ್ಯರ ಸಾಮಂತರಾದ ಇವರು ಸ್ವಸಾಮರ್ಥ್ಯದಿಂದ ರಾಜ್ಯ ಕಟ್ಟಿ ಆಳ್ವಿಕೆ ಮಾಡಿದರು. ಈ ಅವಧಿಯಲ್ಲಿ ರಾಜ್ಯದ ರಕ್ಷಣೆಗಾಗಿ ಕೋಟೆಗಳನ್ನು ನಿರ್ಮಿಸಿಕೊಂಡು ಪ್ರಬಲಶಕ್ತಿಯಾಗಿ ಮೆರೆದ ಕನ್ನಡದ ಮನೆತನ ರಾಷ್ಟ್ರಕೂಟರದು. ರಾಷ್ಟ್ರಕೂಟರ ರಾಜಧಾನಿಯಾದ ಮಾನ್ಯಖೇಟ ಪ್ರದೇಶ ಶಿಥಿಲಗೊಂಡ ಹಾಗೂ ಭಗ್ನಾವಶೇಷ ಹೊಂದಿರುವ ಹಲವು ಸ್ಮಾರಕಗಳು ಲಭ್ಯವಾಗುತ್ತವೆ. ಇಲ್ಲಿಯ ಕೋಟೆಯು ಚೋಳರ ದಾಳಿಗಳಿಂದ ಹಾಗೂ ಮುಸ್ಲಿಂರ ದಾಳಿಗಳಿಂದ ಅವನತಿ ಹೊಂದಿದೆ. ಅನೇಕ ಸಲದ ದಾಳಿಯಲ್ಲಿ ಅವನತಿ ಹೊಂದಿದ್ದರೂ ಸಹ ಮತ್ತೆ ಪುನರ್ ನಿರ್ಮಿಸಿ, ರಾಜಧಾನಿಯನ್ನಾಗಿ ಮುಂದುವರಿಸಿಕೊಂಡು ಹೋಲಾಯಿತು. ಕ್ರಿ.ಶ. ೧೭ನೆಯ ಶತಮಾನದಲ್ಲಿ ಕೋಟೆಯನ್ನು ಕೊನೆಯ ಸಲ ಪುನರ್‌ನಿರ್ಮಾಣ ಮಾಡಲಾಗಿದೆ. ಇಲ್ಲಿಯ ಕೋಟೆ, ದೇವಾಲಯ, ಮಸೀದಿ ಹಾಗೂ ಇತರ ಕಟ್ಟಡಗಳನ್ನು ನೋಡಿದಾಗ ಎಲ್ಲಾ ಕಟ್ಟಡಗಳು ಪುನರ್‌ನಿರ್ಮಾಣಗೊಂಡಂತೆ ಕಂಡುಬರುತ್ತವೆ. ಗ್ರಾಮದ ಕೊನೆಯ ಭಾಗದಲ್ಲಿರುವ ಕೋಟೆಯ ಸುತ್ತಲು ನದಿ ಮತ್ತು ಹಳ್ಳದಿಂದ ಆವರಿಸಿಕೊಂಡಿದೆ.

ಮಾನ್ಯಖೇಟದ ಕೋಟೆಯು ಪೂರ್ವ ದಿಕ್ಕಿನಲ್ಲಿ ಹಳ್ಳದಿಂದ ಹಾಗೂ ಪಶ್ಚಿಮ ದಿಕ್ಕಿನಲ್ಲಿ ಕಾಗಿಣಾ ನದಿಯಿಂದ ಆವೃತ್ತವಾಗಿದೆ. ಈಶಾನ್ಯ ಭಾಗದಲ್ಲಿಯು ಸಹ ಒಂದು ಸಣ್ಣ ಹಳ್ಳ ಹರಿಯುತ್ತದೆ. ಕೋಟೆಯ ಮೂರು ದಿಕ್ಕಿನಲ್ಲಿ ನೀರು ಹರಿಯುತ್ತಿರುವುದರಿಂದ ಅದಕ್ಕೆ ನೈಸರ್ಗಿಕ ರಕ್ಷಣೆಯು ದೊರೆಯುತ್ತದೆ. ಹೆಚ್ಚಿನ ನೀರು ಕೋಟೆ ಗೋಡೆಯ ಸುತ್ತ ಹರಿಯುವುದರಿಂದ, ಹೆಚ್ಚಿನ ಭಾಗಕ್ಕೆ ರಕ್ಷಣೆಯನ್ನು ದೊರೆಯುತ್ತದೆ. ಆದ್ದರಿಂದ ಇದು ಒಂದು ಜಲದುರ್ಗದಂತೆ ಕಂಡುಬರುತ್ತದೆ. ನದಿ ಮತ್ತು ಹಳ್ಳದ ಭಾಗವನ್ನು ಹೊರತುಪಡಿಸಿ, ಕಂದಕವು ೨೦ ಮೀಟರ್

ಅಗಲ ೭.೫ ಮೀ ಆಳವಾಗಿದೆ. ನದಿಯ ತೀರದಲ್ಲಿ ಹೆಚ್ಚಿನ ಪ್ರದೇಶದವರೆಗೆ ನೀರು ನಿಲ್ಲುತ್ತದೆ. ಮಾನ್ಯಖೇಟ ಕೋಟೆಯು ಎರಡು ಸುತ್ತಿನ ಗೋಡೆಯನ್ನು ಹೊಂದಿದ್ದು, ಹೊರಗೋಡೆಯು ವಿಶಾಲವಾದ ಪ್ರದೇಶವನ್ನು ಆವರಿಸಿಕೊಂಡಿದೆ. ಇದಕ್ಕೆ ನಿರ್ದಿಷ್ಟ ಆಕಾರವಿಲ್ಲ. ಇದು ಒಳಗೋಡೆಗಿಂತಲು ಮೊದಲು ನಿರ್ಮಿಸಲಾಗಿದೆ. ಅವಶ್ಯವಿರುವ ಕಡೆಯಲ್ಲಿ ಭದ್ರವಾದ ಗೋಡೆಯನ್ನು ನಿರ್ಮಿಸಿ ಉಳಿದ ಭಾಗಗಳಲ್ಲಿ ಒಂದೆ ಗೋಡೆಯು ಕಂಡುಬರುತ್ತದೆ.

ಹೊರಗೋಡೆಗೆ ನಿರ್ದಿಷ್ಟ ಆಕಾರವಿಲ್ಲ. ಈ ರೀತಿಯಾದ ಮಾನ್ಯಖೇಟ ಕೋಟೆಯ ವಿವರಣೆ ಇದೆ. ಆದರೂ ಕೆಲವು ಹಂತದಲ್ಲಿ ವೃತ್ತಾಕಾರ ಹಾಗೂ ಆಯತಾಕಾರದಲ್ಲಿ ಕಂಡುಬರುತ್ತದೆ. ವಾಯವ್ಯ ಮತ್ತು ನೈರುತ್ಯ ಭಾಗ ಹಳ್ಳದಿಂದ ಆವೃತ್ತಿಯಾಗಿರುವ ಭಾಗವು ಆಯತಾಕಾರದಲ್ಲಿ ಕಂಡುಬರುತ್ತದೆ. ಕೋಟೆಯು ಪೂರ್ವದಿಂದ ಪಶ್ಚಿಮಕ್ಕೆ ೫೫೦ ಮೀಟರ್, ಉತ್ತರದಿಂದ ದಕ್ಷಿಣಕ್ಕೆ ೬೪೦ ಮೀಟರ್ ವಿಸ್ತಾರಗೊಂಡಿದೆ. ಹೊರ ಗೋಡೆಯ ಸುತ್ತಲು ೩೯ ಕೊತ್ತಳಗಳಿವೆ. ಇವುಗಳಲ್ಲಿ ಕೆಲವು ಕೊತ್ತಳಗಳು ಅವನತಿಯ ಹಂತದಲ್ಲಿವೆ. ಕಂದಕದ ಕಡೆಯಲ್ಲಿ ನೀರು ಹೊರ ಗೋಡೆಗೆ ಆವರಿಸಿಕೊಂಡಿದೆ. ಅದರಲ್ಲಿ ಪ್ರಾರಂಭದ ಹಂತದಲ್ಲಿ ಅಂದರೆ ೫x೩ ಮೀಟರ್ ಆಯತಕಾರದಲ್ಲಿ ಇದ್ದು ಮೇಲೆ ಹೋದಂತೆ ವೃತ್ತಾಕಾರದಲ್ಲಿ ಮುಂದುವರೆಯುತ್ತವೆ. ಇವುಗಳು ೩೦ ರಿಂದ ೪೦ ಅಡಿ ಎತ್ತರವಾಗಿದೆ. ಮೂರು ಮೀಟರ್ ದಪ್ಪವಾಗಿರುವ ಈ ಬುರುಜುಗಳು ಆರು ಮೀಟರ್ ಎತ್ತರವಾಗಿವೆ. ಇದರ ರಚನೆಗೆ ಸ್ಥಳೀಯವಾಗಿ ಲಭ್ಯವಾಗುವ ಸಾಮಗ್ರಿಗಳನ್ನು ಬಳಸಲಾಗಿದೆ. ಕೇಂದ್ರ ಭಾಗದಲ್ಲಿ ಮಣ್ಣು ಮತ್ತು ಕಲ್ಲುಗಳನ್ನು ಹಾಕಿ ತುಂಬಲಾಗಿದೆ. ಆದರೆ ಎತ್ತರದ ಎಲ್ಲಾ ಬುರುಜುಗಳು ಶಿಥಿಲಗೊಂಡಿವೆ. ಕೋಟೆಯ ಮೇಲ್ಭಾಗವು ಸಹ ಶಿಥಿಲಗೊಂಡಿರುವುದರಿಂದ ಇವುಗಳ ವಾಸ್ತುಶೈಲಿಯನ್ನು ತಿಳಿದುಕೊಳ್ಳಲು ಸಾಧ್ಯವಿಲ್ಲ.

ಪಶ್ಚಿಮ ಭಾಗದ ಕೋಟೆ ಗೋಡೆಯು ಕಾಗಿಣಾ ನದಿಯ ತಳಭಾಗದಿಂದ ನಿರ್ಮಿಸಲಾಗಿದೆ. ಈ ಭಾಗದ ಕೊತ್ತಳಗಳು ಭದ್ರವಾಗಿದ್ದು ಎತ್ತರವಾದ ಗೋಡೆಯನ್ನು ಹೊಂದಿದೆ. ಏಕೆಂದರೆ ನದಿಯ ನೀರು ನೇರವಾಗಿ ಬಂದು ಕೋಟೆಗೆ ಅಪ್ಪಳಿಸುವುದರಿಂದ ಈ ಭಾಗದಲ್ಲಿ ಗೋಡೆಯ ಹೊರಭಾಗದಲ್ಲಿ ಭದ್ರವಾದ ಹಾಗೂ ನೇರವಾದ ಕೊತ್ತಳಗಳನ್ನು ನಿರ್ಮಿಸಲಾಗಿದೆ. ನದಿಯ ನೀರು ಎಷ್ಟೇ ಒತ್ತಡದಿಂದ ಅಪ್ಪಳಿಸಿ ಬಂದರು ಹೊರಗೋಡೆಗೆ ಯಾವುದೇ ತೊಂದರೆಯಾಗಬಾರದೆಂದು ಭದ್ರವಾದ ಕೋಟೆಯ ತಳಪಾಯ ಹಾಗೂ ಎತ್ತರವಾದ ಕಾವಲು ಗೋಪುರಗಳನ್ನು ರಚಿಸಲಾಗಿದೆ. ಇವುಗಳು ವಿವಿಧ ಕಾಲದಲ್ಲಿ ರಚನೆಗೊಂಡಿರುವಂತೆ ಕಂಡುಬರುತ್ತದೆ. ಹೊರ ಕೋಟೆಯ ನಿರ್ಮಾಣಕ್ಕೆ ದೊಡ್ಡ ದೊಡ್ಡ ಕಲ್ಲುಗಳನ್ನು ಬಳಸಲಾಗಿದೆ. ಉತ್ತರ ಮತ್ತು ಪೂರ್ವ ದಿಕ್ಕಿನಲ್ಲಿರುವ ಕೋಟೆಯ ಬಹುಭಾಗ ಶಿಥಿಲಗೊಂಡಿದ್ದು ಅದರ ಕಲ್ಲುಗಳಿಂದ ಸುತ್ತಲಿನ ಜನರು ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ.

ಹೊರಕೋಟೆಯ ಈಶಾನ್ಯ ಭಾಗದಲ್ಲಿ ಪಶ್ಚಿಮಕ್ಕೆ ಮುಖ ಮಾಡಿರುವ ಪ್ರವೇಶದ್ವಾರವಿದೆ. ಇದರ ಎರಡು ಬದಿಯಲ್ಲಿ ಎರಡು ವೃತ್ತಾಕಾರದ ಕೊತ್ತಳಗಳಿವೆ. ಸುಮಾರು ೨೦ ಅಡಿ

ಎತ್ತರವಾಗಿದ್ದು ಅದರ ಮೇಲೆ ಸುತ್ತಲು ೬ ಅಡಿಯ ಗೋಡೆಯನ್ನು ನಿರ್ಮಿಸಲಾಗಿದೆ. ಕೊತ್ತಳದ ಒಂದು ಬದಿಯಲ್ಲಿ ಸುಮಾರು ೧೫೦ ಮೀಟರ್ ಉದ್ದನೆಯ ಗೋಡೆಯಿದೆ. ಇದು ಕೋಟೆಯ ಹೊರಗೋಡೆಗೆ ಅಂಟಿಕೊಂಡಿದೆ. ಇಲ್ಲಿ ದ್ವಾರಪಾಲಕರಿಗೆ ರಕ್ಷಣಾ ಸ್ಥಳಗಳಿವೆ. ಇಲ್ಲಿಂದ ಕಾವಲುಗಾರರು ನೇರವಾಗಿ ಕೊತ್ತಳದ ಮೇಲ್ಭಾಗದಲ್ಲಿ ಬರಲು ಮಾರ್ಗವಿದೆ. ಮತ್ತೊಂದು ಬದಿಯಲ್ಲಿರುವ ಕೊತ್ತಳಕ್ಕೆ ಕೋಟೆಯಿಂದ ಮಾರ್ಗವಿದೆ. ಇಲ್ಲಿಂದ ಸುಮಾರು ೫೦ ಮೀಟರ್ ಅಂತರದಲ್ಲಿ ಪೂರ್ವಕ್ಕೆ ಮುಖ ಮಾಡಿರುವ ಮೊದಲನೆಯ ಪ್ರವೇಶದ್ವಾರವಿದೆ. ಇದರ ಎರಡು ಬದಿಯಲ್ಲಿ ಹೊರಭಾಗಕ್ಕೆ ಚಾಚಿಕೊಂಡಿರುವ ವೃತ್ತಾಕಾರದ ಕೊತ್ತಳಗಳಿವೆ. ಪ್ರಸ್ತುತ ಇವುಗಳು ಕೇವಲ ೧೫ ಅಡಿಯವರೆಗೆ ಮಾತ್ರ ಉಳಿದಿದ್ದು ಅದರ ಮೇಲ್ಭಾಗವು ಶಿಥಿಲಗೊಂಡಿವೆ. ಈ ದ್ವಾರವು ೧೦ ಅಡಿ ಅಗಲ ೧೫ ಅಡಿ ಎತ್ತರದ ಕಮಾನಿನ ಆಕಾರದಲ್ಲಿದೆ. ಮೇಲ್ಭಾಗದಲ್ಲಿ ವೀಕ್ಷಣಾಲಯವಿದೆ. ೧೦ ಅಡಿ ಅಗಲ ೫ ಅಡಿ ಎತ್ತರವಾಗಿರುವ ಈ ಸ್ಥಳದಲ್ಲಿ ಕಾವಲುಗಾರರು ಕುಳಿತು ದ್ವಾರದ ಮುಂಭಾಗವನ್ನು ವೀಕ್ಷಿಸುತ್ತಿದ್ದರು. ಇದರ ಒಳಭಾಗದಿಂದ ಸೈನಿಕರಿಗೆ ಮೇಲೆ ಹತ್ತಲು ಮೆಟ್ಟಿಲುಗಳಿವೆ. ಇಲ್ಲಿಂದ ಕಾವಲುಗಾರರು ಕೋಟೆಯ ಯಾವುದೇ ಸ್ಥಳಕ್ಕೆ ಹೋಗಬಹುದು. ದ್ವಾರದ ಮುಂಭಾಗದಲ್ಲಿ ಎರಡು ಬದಿಯಲ್ಲಿ ಶಿಥಿಲಗೊಂಡ ಕಟ್ಟಡಗಳಿವೆ. ಇವುಗಳು ದ್ವಾರಪಾಲಕರಿಗಾಗಿ ನಿರ್ಮಿಸಿದ ಸೈನಿಕರ ವಸತಿ ನಿಲಯಗಳಾಗಿರಬಹುದಾಗಿದೆ.[೩೮] ಏಕೆಂದರೆ ಪ್ರತಿಯೊಂದು ದ್ವಾರದ ಮುಂಭಾಗದಲ್ಲಿ ಸೈನಿಕರಿಗಾಗಿ ಇಂತಹ ಸ್ಥಳಗಳಾಗಿರುತ್ತವೆ.

ಪ್ರಸ್ತುತ ಮಾನ್ಯಖೇಟದ ಕೋಟೆಯನ್ನು ಗಮನಿಸಿದಾಗ ರಾಷ್ಟ್ರಕೂಟರಿಂದ ನಿರ್ಮಾಣವಾಗಿ ಕಲ್ಯಾಣ ಚಾಲುಕ್ಯರ ಕಾಲಾವಧಿಯಲ್ಲಿ ರಕ್ಷಣೆ ಪಡೆದು ಚೋಳರಿಂದ ಕೋಟೆಯ ಶಿಥಿಲಗೊಂಡು ಬಹಮನಿ ಸುಲ್ತಾನ ಮಹಮ್ಮದ್‌ಶಾಹ೧ನ ಆಳ್ವಿಕೆ ಅವಧಿಯಲ್ಲಿ ಬಹುಮನಿಯರ ವಶದಲ್ಲಿದ್ದು ಅವರ ಅನುಕೂಲಕ್ಕೆ ತಕ್ಕಂತೆ ಕೋಟೆಯನ್ನು ಪುನರ್ ರಚನೆ ಮಾಡಿ ನಿರ್ಮಾಣ ಮಾಡಿದರು. ಮತ್ತು ಕೋಟೆಯ ಮೇಲ್ಭಾಗದ ಮೂಲ ರಚನೆಯ ನಾಶವಾಗಿದ್ದು ಅದನ್ನು ಸಹ ಬಹುಮನಿಯರು ತಮ್ಮ ಕಾಲಕ್ಕೆ ತಮ್ಮದೇ ಆದ ಶೈಲಿಯಲ್ಲಿ ಈ ಕೋಟೆಯನ್ನು ಪುನರ್ ನಿರ್ಮಿಸಿದರು. ಇಷ್ಟು ಈ ಕೋಟೆಯ ವಿಶೇಷತೆಯಾಗಿದೆ.

**ಅಲ್ಲೂರು (ಬಿ)ಕೋಟೆ**

ಮಾನ್ಯಖೇಟದಿಂದ ಆಗ್ನೇಯ ಭಾಗಕ್ಕೆ ३೫ ಕಿ.ಮೀ. ದೂರದಲ್ಲಿರುವ ಅಲ್ಲೂರು ಪ್ರಾಚೀನ ಕಾಲದ ಪ್ರಮುಖ ಗ್ರಾಮವಾಗಿದೆ. ೩೦೦ ಹಳ್ಳಿಗಳ ಆಡಳಿತ ಘಟಕವಾಗಿರುವುದರಿಂದ ಇದನ್ನು ಶಾಸನಗಳಲ್ಲಿ ಅರಲು ೩೬೦ ಅರಲು ಅರಲೂರು ೩೦೦ ಎಂದು ಕರೆಯಲಾಗಿದೆ.[೩೩] ಕಲ್ಯಾಣಿ ಚಾಲುಕ್ಯರು ಹಲವರನ್ನು ತಮ್ಮ ಸಾಮಂತರನ್ನು ಮಾಂಡಲಿಕರನ್ನು ಮಾಡಿಕೊಂಡು ಅಧಿಕಾರ ನಡೆಸಿದರು. ಹೈಹಯರು ೩೦೦ ಗ್ರಾಮಗಳ ಅಧಿಪತಿಗಳಾಗಿ ಅದರ ಕೇಂದ್ರ ಸ್ಥಳ ಅಲ್ಲೂರು(ಬಿ)ಯಾಗಿತ್ತು.[೩೪] ಆದ್ದರಿಂದ ಇಲ್ಲಿ ಅವರು ರಾಜ್ಯವನ್ನು ಕಟ್ಟಿಕೊಂಡು ಸುಮಾರು

೧೫೦ ವರ್ಷಗಳ ಕಾಲ (ಕ್ರಿ.ಶ. ೧೨೧೨ರವರೆಗೆ) ಆಳ್ವಿಕೆ ಮಾಡಿದರು.[೩೯] ಇವರ ಕಾಲದಲ್ಲಿ ಅಲ್ಲೂರು ಆಡಕಿ ಹಂದರಕಿ ಹಲಕಟ್ಟಾ ಇಂಗಳಗಿ ಮುಂತಾದ ಕಡೆಗಳಲ್ಲಿ ರಕ್ಷಣಾ ಕಟ್ಟಡಗಳನ್ನು ನಿರ್ಮಿಸಿದರು. ಅದರಲ್ಲಿ ವಿಶೇಷವಾಗಿ ಅಲ್ಲೂರು(ಬಿ) ರಾಜಧಾನಿಯಲ್ಲಿ ಮೂರು ಹಂತದ ಕೋಟೆಯನ್ನು ನಿರ್ಮಿಸಿದರು.

ಪ್ರಸ್ತುತ ಕೋಟೆಯನ್ನು ಅಲ್ಲೂರು ಬೆಟ್ಟದ ಮೇಲೆ ಕಲ್ಲುಬಂಡೆಗಳ ಮಧ್ಯದಲ್ಲಿ ಕೋಟೆಯನ್ನು ನಿರ್ಮಿಸಲಾಗಿದೆ. ಗ್ರಾಮದ ಪ್ರವೇಶದ ಪೂರ್ವದಲ್ಲಿ ಒಂದು ಕೆರೆ ಇದೆ. ಇದು ಬೆಟ್ಟವನ್ನು ಎರಡು ದಿಕ್ಕಿನಲ್ಲಿ ಸುತ್ತುವರಿದಿದೆ. ಬೆಟ್ಟದ ಕೋಟೆಗೆ ಕಂದಕವಾಗಿ ರಕ್ಷಣೆಯನ್ನು ನೀಡುತ್ತದೆ. ಕೋಟೆಯ ಪೂರ್ವ ಭಾಗದಲ್ಲಿ ಮೂರು ಪ್ರವೇಶ ದ್ವಾರಗಳಿವೆ. ಕೇಂದ್ರದ ದ್ವಾರವು ಪ್ರಮುಖ ದ್ವಾರವಾಗಿದ್ದು ೧೫ ಅಡಿ ಅಗಲ ೨೫ ಅಡಿ ಎತ್ತರವಾಗಿದೆ. ಚೌಕಾಕಾರದ ಈ ದ್ವಾರವನ್ನು ಅಗಸಿ ಎಂದು ಕರೆಯುತ್ತಾರೆ. ಇದರ ಮುಂಭಾಗದಲ್ಲಿ ಇರುವ ತಗ್ಗಾದ ಪ್ರದೇಶಕ್ಕೆ ಮೊದಲು ಮೆಟ್ಟಿಲುಗಳಿರಬಹುದು. ಆದರೆ ಪ್ರಸ್ತುತ ಈ ಮೂರು ಪ್ರವೇಶ ದ್ವಾರದ ಮುಂಭಾಗದಲ್ಲಿ ಸಿಮೆಂಟ್ ರಸ್ತೆ ನಿರ್ಮಿಸಲಾಗಿದೆ. ಇದರಿಂದ ದ್ವಾರದ ಮುಂಭಾಗದಲ್ಲಿ ಇರುವ ರಕ್ಷಣಾ ವ್ಯವಸ್ಥೆಯ ಬಗ್ಗೆ ಮಾಹಿತಿ ಕಂಡುಬರುವುದಿಲ್ಲ. ಕೋಟೆ ಗೋಡೆಯು ಬೆಟ್ಟದ ಆಕಾರದಂತೆ ವೃತ್ತಾಕಾರದಲ್ಲಿ ರಚಿಸಲಾಗಿದೆ. ಕೋಟೆಗೋಡೆಯು ಮಧ್ಯದಲ್ಲಿ ಕೊತ್ತಳಗಳನ್ನು ನಿರ್ಮಿಸಲಾಗಿದೆ. ಕೊತ್ತಳಗಳ ರಚನೆಗೆ ಕೆಂಪುವರ್ಣದ ಬಂಡೆಗಲ್ಲುಗಳನ್ನು ಉಪಯೋಗಿಸಲಾಗಿದೆ. ಪ್ರಸ್ತುತ ದ್ವಾರವು ೧೦ ರಿಂದ ೧೫ ಅಡಿ ಎತ್ತರದವರೆಗೆ ಮಾತ್ರ ಉಳಿದುಕೊಂಡಿದ್ದು ಮೇಲಿನ ಭಾಗ ನಾಶ ಹೊಂದಿದೆ. ಇದರ ಸಾದಾ ಪ್ರಮಾಣದಲ್ಲಿ ಕೋಟೆ ಗೋಡೆ ಉಳಿದುಕೊಂಡಿದೆ. ಗ್ರಾಮದ ಉತ್ತರ ಭಾಗವು ರಕ್ಷಣಾ ಗೋಡೆಯಿಂದ ಆವೃತ್ತಿಯಾಗಿರುವ ಮತ್ತೊಂದು ಸ್ಥಳವಿದೆ. ಇದರ ಪ್ರವೇಶ ದ್ವಾರವು ವಾಯವ್ಯ ದಿಕ್ಕಿಗೆ ಮುಖ ಮಾಡಿದ್ದು ಎರಡೂ ವೃತ್ತಾಕಾರದ ಕೊತ್ತಳದ ಮಧ್ಯದಲ್ಲಿ ಇದನ್ನು ನಿರ್ಮಿಸಲಾಗಿದೆ. ಈ ದ್ವಾರದ ಮುಂಭಾಗದ ಗೋಡೆಯಲ್ಲಿ ನವಿಲು, ಸಾರಂಗ, ದ್ವಾರಪಾಲಕರ ಶಿಲ್ಪಗಳಿರುವ ಕಲ್ಲುಗಳನ್ನು ಬಳಸಲಾಗಿದೆ. ಇಡೀ ಕೋಟೆಯ ದ್ವಾರಗಳಲ್ಲಿಯೇ ಇದು ಅತ್ಯಂತ ದೊಡ್ಡ ಮತ್ತು ವಿಶಾಲವಾದ ಪ್ರವೇಶ ದ್ವಾರವಾಗಿದೆ. ಅಲ್ಲದೆ ಪಶ್ಚಿಮ ದಿಕ್ಕಿನಲ್ಲಿ ಬೆಟ್ಟಕ್ಕೆ ಆವರಿಸಿಕೊಂಡು ಕೋಟೆಯ ಮೂರನೆಯ ಭಾಗವನ್ನು ದೊಡ್ಡ ಕೋಟೆ ಎಂದು ಕರೆಯುತ್ತಾರೆ. ಏಕೆಂದರೆ ಇದು ಹೆಚ್ಚಿನ ಪ್ರದೇಶವನ್ನು ವಶಪಡಿಸಿಕೊಂಡಿದೆ. ಈ ಭಾಗದಲ್ಲಿ ಎರಡು ದಿಡ್ಡಿಬಾಗಿಲುಗಳಿವ. ೧೦ ಅಡಿ ಎತ್ತರ ೪ ಅಡಿ ಉದ್ದಗಲದ ದಿಡ್ಡಿ ಬಾಗಿಲುಗಳಿವೆ. ೧೦ ಅಡಿ ಎತ್ತರ ೪ ಅಡಿ ದಪ್ಪವಾಗಿರುವ ಕೋಟೆಯ ಗೋಡೆಯ ಮಧ್ಯದಲ್ಲಿ ೪x೬ ಅಡಿ ಉದ್ದಗಲದ ದಿಡ್ಡಿ ಬಾಗಿಲುಗಳಿವೆ. ಈ ಭಾಗದ ಕೋಟೆಗೋಡೆಯಲ್ಲಿ ಪ್ರತಿ ೫೦ ರಿಂದ ೭೫ ಅಡಿ ಅಂತರದಲ್ಲಿ ಒಂದೊಂದು ಬುರುಜುಗಳಿವೆ. ಇದರಲ್ಲಿ ಎರಡು ಬುರುಜುಗಳು ಚೌಕಾಕಾರವಾಗಿದ್ದು ಉಳಿದವುಗಳು ಕುದುರೆ ಲಾಳಾಕಾರ ಹಾಗೂ ವೃತ್ತಾಕಾರದಲ್ಲಿವೆ.

ಪಶ್ಚಿಮ ಭಾಗದ ಕೋಟೆಯ ಹೊರಭಾಗದಲ್ಲಿ ಎರಡು ಎತ್ತರವಾದ ಬೆಟ್ಟಗಳ ಮಧ್ಯದಲ್ಲಿ ಕಡಿದಾದ ಕಣಿವೆಗಳಿವೆ. ಇದನ್ನು ಶಿದ್ದಿಕೆರೆ ಎಂದು ಕರೆಯುತ್ತಾರೆ. ಇದು ಕೋಟೆಗೆ ನೈಸರ್ಗಿಕ ಕಂದಕದಂತೆ ರಚನೆಗೊಂಡಿದೆ. ಅಲ್ಲದೆ ಕೋಟೆಯ ಒಳಭಾಗದಲ್ಲಿ ವಾಸಿಸುವ ಜನ–ಜಾನುವಾರುಗಳಿಗೆ ಕುಡಿಯುವ ನೀರಿನ ತಾಣವಾಗಿದೆ. ದೊಡ್ಡ ಕೋಟೆಯ ಒಳಭಾಗದಲ್ಲಿ ರಕ್ಷಣಾ ಸಂಬಂಧಿ ವಾಸ್ತುಶಿಲ್ಪಗಳಲ್ಲಿ ದೇವಾಲಯಗಳು ಮಾತ್ರ ಉಳಿದುಕೊಂಡಿವೆ. ಅವುಗಳಲ್ಲಿ ಪ್ರಮುಖವಾದುದು ಜಿನಾಲಯ, ಆಂಜನೇಯ ದುರ್ಗಾ ಹಾಗೂ ವೆಂಕಟರಾಮಾ ದೇವಸ್ಥಾನಗಳು ಕಂಡುಬರುತ್ತವೆ. ಪ್ರಸ್ತುತ ಈ ಗಿರಿದುರ್ಗದಲ್ಲಿ ಜನರು ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ. ಇಲ್ಲಿಯ ಜನರು ಕೋಟೆಯ ಸುತ್ತಲಿನ ದ್ವಾರಗಳನ್ನು ಅಗಸೆ ಎಂದು ಕರೆಯುತ್ತಾರೆ. ಅವುಗಳು ದೊಡ್ಡ ಅಗಸಿ, ಕಂಚಿನ ಅಗಸಿ, ಕಳ್ಳ ಅಗಸಿ, ದುರ್ಗಮ್ಮ ಅಗಸಿ ಎಂದು ಮುಂತಾದವುಗಳ ಹೆಸರಿನಿಂದ ಕರೆಯುವುದು ರೂಢಿಯಲ್ಲಿದ್ದು ಕ್ರಿ.ಶ. ೧೧ನೇಯ ಶತಮಾನದಲ್ಲಿ ನಿರ್ಮಾಣಗೊಂಡ ಅಲ್ಲೂರು ಕೋಟೆಯು ಪ್ರಸ್ತುತ ಅಧ್ಯಯನ ಪರಿಸರದಲ್ಲಿನ ಪ್ರಾಚೀನ ಕೋಟೆಗಳಲ್ಲಿ ಇದು ಸಹ ಒಂದಾಗಿದೆ. ಆದರೆ ಹೈಹಯರ ಮನೆತನದ ಮೇಲೆ ಇನ್ನು ಹೆಚ್ಚಿನ ಸಂಶೋಧನೆ ನಡೆಯಬೇಕಾಗಿದೆ. ಇದರಿಂದ ಹೆಚ್ಚಿನ ಮಾಹಿತಿ ಲಭ್ಯವಾಗುತ್ತದೆ.

**ಸೇಡಂ ಕೋಟೆ**

ಮಾನ್ಯಖೇಟದಿಂದ ೧೨ ಕಿ.ಮೀ. ದೂರದಲ್ಲಿರುವ ಸೇಡಂನ ಈ ಪ್ರದೇಶ ಕಾಗಿಣಾ ನದಿಯ ಮೇಲ್ದಂಡೆಯಲ್ಲಿರುವ ಈ ಗ್ರಾಮವು ಫಲವತ್ತಾದ ಭೂಮಿಯನ್ನು ಹೊಂದಿದೆ.[೩೬] ಪ್ರಾಚೀನ ಶಾಸನಗಳಲ್ಲಿ ಇದನ್ನು ಸೇಡಿಂಬ ಅಗ್ರಹಾರ ಸೇಡಿಂಪುರ ಎಂದು ಕರೆಯಲಾಗಿದೆ.[೩೬] ಹಿಂದೆ ಇದು ಅರಲು–೩೦೦ರ ಆಡಳಿತ ವಿಭಾಗಕ್ಕೆ ಒಳಪಟ್ಟಿತ್ತು. ಶಾತವಾಹನರ ಕಾಲದಿಂದ ಕುತುಬ್‌ಶಾಹಿಗಳ ಕಾಲದವರೆಗೆ ಹಲವು ರಾಜಕೀಯ ಮನೆತನಗಳು ಈ ಪ್ರದೇಶವನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿದ್ದರು. ಅವರಲ್ಲಿ ವಿಶೇಷವಾಗಿ ರಾಷ್ಟ್ರಕೂಟರು ಹಾಗೂ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಅನೇಕ ಬದಲಾವಣೆಗಳು ಆಗಿ ಅವರ ಆಳ್ವಿಕೆ ಪ್ರಮುಖ ಕಲೆ ಮತ್ತು ವಾಸ್ತುಶಿಲ್ಪದ ಸ್ಥಳವು ಸೇಡಂ ಆಗಿತ್ತು. ಆದ್ದರಿಂದ ಇಲ್ಲಿ ಹಲವು ಬಗೆಯ ರಕ್ಷಣಾ ಸಂಬಂಧಿ ಸ್ಮಾರಕಗಳು ಬೆಳೆದು ಬಂದಿದೆ. ಸಾಲೋಟಗಿಯ ಶಿಲಾಶಾಸನದಲ್ಲಿ ಸೇಡಂ ಭವ್ಯ ನಗರದ ಸುಂದರವಾದ ಉದ್ಯಾನವನ ಹಾಗೂ ಭದ್ರವಾದ ಕೋಟೆಯನ್ನು ವರ್ಗೀಕರಿಸಲಾಗಿದೆ. ಅದೇ ರೀತಿ ಅಡಕಿ ಮತ್ತು ಸೇಡಂ ಶಾಸನಗಳಲ್ಲಿ ಇಲ್ಲಿ ಹರಿಯುವ ಕಾಗಿಣಾ ನದಿಯ ಉಲ್ಲೇಖಗಳಿವೆ. ಈ ನಾಡು ದನಿಕರಿಂದ ಕೂಡಿದ್ದು, ಅಲ್ಲಿ ಭದ್ರವಾದ ಕೋಟೆಗಳನ್ನು ನಿರ್ಮಿಸಲಾಗಿತ್ತು ಎಂದು ಹೇಳಲಾಗಿದೆ.

ಸೇಡಂ ಪಟ್ಟಣದ ರಕ್ಷಣೆಗಾಗಿ ಅಭೇದ್ಯವಾದ ಕೋಟೆಯನ್ನು ನಿರ್ಮಿಸಲಾಗಿದೆ. ಅತ್ಯಂತ ದುರ್ಗಮಯವಾದ ಕೋಟೆಯ ನಿರ್ಮಾಣದ ಕುರಿತು ಸ್ಪಷ್ಟವಾದ ಮೂಲಾಧಾರಗಳಿಲ್ಲ. ಆದರೆ ಅಲ್ಲೂರದ ಹೈಹಯ ವಂಶಸ್ತರು ಈ ಭಾಗದಲ್ಲಿ ಆಳ್ವಿಕೆ ಮಾಡಿರುವುದರಿಂದ ಅವರ

ಸಾಮ್ರಾಜ್ಯ ವಿಸ್ತಾರಕ್ಕೆ ೩೦೦ ಗ್ರಾಮಗಳಿಗೆ ಒಳಗಾಗಿದ್ದವು. ಆದ್ದರಿಂದ ಅದನ್ನು ಅರಲೂ ಮುನ್ನೂರು ಎಂದು ಕರೆಯುತ್ತಾರೆ. ಕ್ರಿ.ಶ. ೧೧೧೬ ಒಂದು ಶಾಸನದಲ್ಲಿ ಸೇಡಂ ಕೋಟೆಯ ವರ್ಣನೆ ಈ ರೀತಿಯಾಗಿದೆ.

"ನರನಿಂದಗ್ಗದ ಕಾಂಡವಂನೆಗೆಲ್ದ ಲಂಕಾದ್ವೀಪ ಮುಂದೊಂದುವಾನರನಿಂದ ತ್ರೈಪ್ತರೋರ್ವನ ತಾಪಸನ ಕಿಂಚಿನ್ಮಾತ ಕೋಪಾಗ್ನಿಯಂ ಪರಿಚಿಂಬೆತ್ತುವುದೇವ ನಿರ್ಮಿತಗಡಂ ತಾಮೆಂದು ನಿಚ್ಚಂ ನಿಕಾರಿಸುತಿರ್ಪುದು ಪೆಟೇತಾದೊದವಿಂ ಸೇತಿಂಬದಾಡಂಬರಂ" ಸೇಡಂ ಕೋಟೆ ಗೋಡೆಯು ಆಕಾಶದೆತ್ತರಕ್ಕೆ ಅದರ ಕಂದಕವು ಪಾತಾಳದಾಳಕ್ಕೆ ಸಕಲ ದಿಕ್ಕುಗಳಲಲಿ ಕಾಣುವ ಈ ಕೋಟೆ ವಿಶಾಲವಾದ ಪ್ರದೇಶಕ್ಕೆ ಸುತ್ತುವರಿದುಕೊಂಡಿದೆ. ಇದನ್ನು ವಶಪಡಿಸಿಕೊಳ್ಳುವ ಶೂರರಿಗೆ ಮಸ್ತಕ ಶೂಲದಂತೆ ಇದೆ. ಸೇಡಿಂಬದ ವರ್ಣನೆ ಖಾಂಡವನಕ್ಕೂ, ತ್ರಿಪೂರಕ್ಕೂ ಮಿಗಿಲಾಗಿದೆ. ಈ ದುರ್ಗದಲ್ಲಿ ೨೦೦ ಜನ ಸಕಲ ಸಂಪನ್ನರಾದ ಮಹಾಜನರಿದ್ದರು.

ಇವರು ಕಾಂಚಿಪುರದ ಅಭೇದ್ಯವಾದ ಕೋಟೆಯ ದ್ವಾರವನ್ನು ಯಂತ್ರ-ತಂತ್ರ-ಮಂತ್ರಗಳಿಂದ ಭೇದಿಸುವ ಸಾಮರ್ಥ್ಯವನ್ನು ಹೊಂದಿದ್ದರು. ಸಕಲ ಯುದ್ಧಕಲೆ ಪರಂಪಗತರಾದ ಇವರು ಹೇಮಕುಂಡಲದ ಜ್ವಾಲಾಮಾಲಿನಿ ಆರಾಧಕರಾಗಿದ್ದರು. ವಜ್ರ ಪಂಜರ ಮತ್ತು ವೈರಿಗಳಿಗೆ ಭಯಂಕರರು ಇವರಾಗಿದ್ದಾರೆ ಎಂದು ಈ ಶಾಸನದಲ್ಲಿ ಹೇಳಲಾಗಿದೆ.

ಪ್ರಸ್ತುತ ಪಟ್ಟಣದಲ್ಲಿರುವ ಕೋಟೆಯು ಸಂಪೂರ್ಣವಾಗಿ ನಾಶ ಹೊಂದಿದ್ದು, ಅದರ ಎರಡು ದ್ವಾರಗಳು ಮತ್ತು ಅಲ್ಲಲ್ಲಿ ಕೋಟೆ ಗೋಡೆಯ ಅವಶೇಷಗಳು ಕಂಡುಬರುತ್ತವೆ. ಕೋಟೆಯ ಪ್ರವೇಶ ದ್ವಾರಗಳನ್ನು ಗ್ರಾಮಸ್ಥರು ಅಗಸಿ ಎಂದು ಕರೆಯುತ್ತಾರೆ. ಉತ್ತರದ ದ್ವಾರವನ್ನು ದೊಡ್ಡ ಅಗಸಿ, ದಕ್ಷಿಣ ಭಾಗದಲ್ಲಿರುವ ದ್ವಾರವನ್ನು ಸಣ್ಣ ಅಗಸಿ ಎಂದು ಕರೆಯುತ್ತಾರೆ. ಕೋಟೆಯ ಮಹಾದ್ವಾರವು ೨೦ ಅಡಿ ಅಗಲ ೨೦ ಅಡಿ ಎತ್ತರದ ಕಮಾನಿನ ಆಕಾರದಲ್ಲಿರುವಂತೆ ಕಂಡುಬರುತ್ತದೆ. ಏಕೆಂದರೆ ದ್ವಾರದ ಎರಡು ಬದಿಗೆ ೧೫ ಅಡಿ ಎತ್ತರದ ಗೋಡೆ ಮಾತ್ರ ಉಳಿದಿದ್ದು, ಮೇಲ್ಭಾಗ ನಾಶ ಹೊಂದಿದೆ. ಇದರಿಂದ ದ್ವಾರದ ಬಗ್ಗೆ ಸ್ಪಷ್ಟವಾದ ಮಾಹಿತಿ ಕಂಡುಬರುವುದಿಲ್ಲ. ದ್ವಾರದ ಮುಂಭಾಗದ ಗೋಡೆಯ ಹೊರ ಬಾಚಿಕೊಂಡಿರುವುದರಿಂದ ಅದು ಕೊತ್ತಳದಂತೆ ಕಂಡುಬರುತ್ತದೆ. ಕಾವಲುಗಾರರು ಮೇಲಿನಿಂದ ದ್ವಾರಕ್ಕೆ ರಕ್ಷಣೆಯನ್ನು ಒದಗಿಸುತ್ತಿದ್ದರು. ದ್ವಾರದ ಮುಂಭಾಗಕ್ಕೆ ೪೦ ಅಡಿ ಅಂತರದಲ್ಲಿ ತಡೆಗೋಡೆಯನ್ನು ನಿರ್ಮಿಸಲಾಗಿದೆ. ಇದರಿಂದ ದ್ವಾರಕ್ಕೆ ಸಂಪೂರ್ಣವಾದ ರಕ್ಷಣೆ ದೊರಕುತ್ತದೆ. ಸ್ಥಳೀಯವಾಗಿ ಲಭ್ಯವಾಗುವ ಬಿಳಿ ವರ್ಣದ ಸುಣ್ಣದ ಕಲ್ಲುಗಳನ್ನು ಬಳಸಿ ದ್ವಾರವನ್ನು ನಿರ್ಮಿಸಲಾಗಿದೆ.

ದ್ವಾರದಿಂದ ಪ್ರಾರಂಭವಾಗುವ ಕೋಟೆ ಗೋಡೆಯು ಹಳೆಯ ಸೇಡಂ ನಗರವನ್ನು ಆವರಿಸಿಕೊಂಡಿದೆ. ಪ್ರಸ್ತುತ ನಮಗೆ ಜಂಗಂ ಓಣಿಯಲ್ಲಿ ಗೋಡೆಯ ಅವಶೇಷಗಳು ಕಂಡುಬರುತ್ತವೆ.

ಕೋಟೆಯ ಕೊತ್ತಲಕ್ಕೆ ಹೊಂದಿಕೊಂಡಂತೆ ಇರುವ ದೇವಸ್ಥಾನಕ್ಕೆ ಕೊತ್ತಲ ಬಸವೇಶ್ವರ ದೇವಸ್ಥಾನವೆಂದು ಕರೆಯುತ್ತಾರೆ.[೩೮] ಪ್ರಸ್ತುತ ದೇವಾಲಯದ ಹಿಂಭಾಗದಲ್ಲಿ ಕಾಲೇಜಿಗೆ ಹೊಂದಿಕೊಂಡಿರುವ ಕೋಟೆಯ ಸ್ತರಗಳ ಅವಶೇಷಗಳನ್ನು ಕಾಣಬಹುದು. ಉಳಿದ ಭಾಗದಲ್ಲಿ ಗ್ರಾಮಸ್ಥರು ಕೋಟೆಯ ಕಲ್ಲು ಮಣ್ಣನ್ನು ಬಳಸಿಕೊಂಡು ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ.

ಸೇಡಂ ಕೋಟೆಯ ಎರಡು ದ್ವಾರಗಳ ಮುಂಭಾಗದಲ್ಲಿ ವಿಶೇಷ ರಕ್ಷಣಾ ವ್ಯವಸ್ಥೆ ಮಾಡಿರುವುದರಿಂದ ಶಾಸನಗಳಲ್ಲಿ ಈ ಕೋಟೆಯನ್ನು ಅಭ್ಯೇಧ್ಯವಾದ ಸೇಡಂ ದುರ್ಗ ಎಂದು ಉಲ್ಲೇಖಿಸಲಾಗಿದೆ. ಸೇಡಂನಲ್ಲಿ ಆಳ್ವಿಕೆ ಮಾಡಿರುವ ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಲಚೂರಿಯರು, ಹೈಹಯರು, ಬಹುಮನಿ ಸುಲ್ತಾನರು, ಕುತುಬ್‌ಷಾಹಿಗಳು, ಮುಂತಾದವರು ತಮ್ಮ ಅನುಕರಣಕ್ಕೆ ತಕ್ಕಂತೆ ಹಲವು ರಕ್ಷಣಾ ಸಂಬಂಧ ಸ್ಮಾರಕಗಳನ್ನು ನಿರ್ಮಿಸಿಕೊಂಡರು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಜೈನಬಸದಿ, ಈಶ್ವರ ದೇವಾಲಯ, ಪಂಚಲಿಂಗೇಶ್ವರ ದೇವಾಲಯ, ಶಿಲಾಸ್ತಂಭ ಈ ರೀತಿ ಪ್ರಾಚೀನ ಕಾಲದಿಂದ ಮಧ್ಯಯುಗದ ಅವಧಿಯವರೆಗೆ ನಿರ್ಮಾಣಗೊಂಡ ರಕ್ಷಣಾ ಸ್ಮಾರಕಗಳು ಸೇಡಂ ಪಟ್ಟಣದ ಮೇಲೆ ಬೆಳಕು ಚೆಲ್ಲುತ್ತವೆ.

**ನಾಗಾವಿ ಕೋಟೆ**

ನಾಗಾವಿ ಕೋಟೆಯು ಮಾನ್ಯಖೇಟದಿಂದ ೧೫ ಕಿ.ಮೀ. ದೂರದಲ್ಲಿದೆ. ಇದೊಂದು ಚಾರಿತ್ರಿಕ ಮಹತ್ವದ ಸ್ಥಳವಾಗಿದೆ. ಶಾಸನಗಳಲ್ಲಿ ಇದನ್ನು ಅಗ್ರಹಾರ ನಾಗಾವಿ 'ಮಹಾ ಅಗ್ರಹಾರ' ನಾಗಾವಿ ಸರ್ವಸಮಸ್ಯದ ಅಗ್ರಹಾರ ನಾಗಾವಿ ಎಂದು ಉಲ್ಲೇಖಿಸಲಾಗಿದೆ. ಅಲ್ಲದೆ ಪ್ರಾಚೀನ ಕಾಲದಲ್ಲಿ ಅರಳು ೩೦೦ರ ರಾಜಧಾನಿಯಾಗಿತ್ತು. ಕ್ರಿ.ಶ. ೧೨ನೆಯ ಶತಮಾನಕ್ಕೆ ಸಂಬಂಧಿಸಿದ ಕಲ್ಯಾಣ ಚಾಲುಕ್ಯರ ಕಾಲದ ಸ್ತಂಭ ಶಾಸನವು ಇಲ್ಲಿ ಲಭ್ಯವಾಗಿದೆ. ಅದರಲ್ಲಿ ಇದೊಂದು ಮಹಾ ಅಗ್ರಹಾರವೆಂದು ಉಲ್ಲೇಖಿಸಲಾಗಿದೆ.

ಹಾಳು ಬಿದ್ದಿರುವ ನಾಗಾವಿಯಲ್ಲಿ ೧೧ನೆಯ ಶತಮಾನದಿಂದ ೧೬ನೆಯ ಶತಮಾನದವರೆಗೆ ನಿರ್ಮಾಣಗೊಂಡಿರುವ ಹಲವು ಸ್ಮಾರಕಗಳಿವೆ. ಅವುಗಳಲ್ಲಿ ೬೦ ಕಂಬಗಳ ದೇವಾಲಯ, ರಾಮೇಶ್ವರ, ನಾಗಾವಿ ಯಲ್ಲಮ್ಮ, ಹನುಮಂತ, ಈಶ್ವರ ದೇವಾಲಯ ಹಾಗೂ ರಕ್ಷಣೆಗೆ ಸಂಬಂಧಿಸಿದಂತೆ ಕೋಟೆ, ನೀರಿನ ಆಶ್ರಯ ತಾಣ, ಬುರುಜುಗಳು, ಸೈನಿಕರ ನಿವಾಸಗಳು, ಕಾವಲುಗೋಪುರಗಳು ದ್ವಾರಬಾಗಿಲುಗಳು ಮುಂತಾದ ಕಟ್ಟಡಗಳಿವೆ. ಪ್ರಾಚೀನ ಕಾಲದಲ್ಲಿ ರಾಜಧಾನಿಯಾಗಿ, ಘಟಿಕಾ ಸ್ಥಾನವಾಗಿ, ಅಗ್ರಹಾರವಾಗಿರುವ ಈ ನಗರವು ಇಂದು ಸಂಪೂರ್ಣವಾಗಿ ಹಾಳುಬಿದ್ದಿದೆ.[೩೯] ಇಲ್ಲಿಯ ದೇವಾಲಯಗಳು ಹಾಗೂ ನೀರಿನ ತಾಣಗಳು (ತೀರ್ಥ) ಸ್ವಲ್ಪ ಮಟ್ಟಿಗೆ ಸುಸ್ಥಿತಿಯಲ್ಲಿವೆ. ಆದರೆ ರಕ್ಷಣೆಗೆ ಸಂಬಂಧಿಸಿದ ಇಲ್ಲಿಯ ಎಲ್ಲಾ ಅವಶೇಷಗಳು ಅವನತಿ ಹೊಂದುತ್ತಲಿವೆ. ಆದ್ದರಿಂದ ಅವುಗಳ ಬಗ್ಗೆ ಮಾಹಿತಿ ಸಂಗ್ರಹಿಸುವುದು ಅತಿ ಮಹತ್ವದ ಪ್ರಯತ್ನ ಇದಾಗಿದೆ.

ಪ್ರಾಚೀನ ಕಾಲದ ಪ್ರಮುಖ ಸ್ಥಳವಾಗಿ ಈ ಪ್ರದೇಶದ ರಕ್ಷಣೆಗಾಗಿ ವಿಶಾಲವಾದ ಪ್ರದೇಶವನ್ನು ಆವರಿಸಿಕೊಂಡಂತೆ ಕೋಟೆಯನ್ನು ನಿರ್ಮಿಸಲಾಗಿದೆ. ಪ್ರಸ್ತುತ ಕೋಟೆ ಗೋಡೆಯ ಕೆಲವು ಭಾಗಗಳು ಮಾತ್ರ ಉಳಿದುಕೊಂಡಿವೆ. ಆದ್ದರಿಂದ ನಿಖರವಾಗಿ ಕೋಟೆಯ ವಿಸ್ತಾರವನ್ನು ಗುರುತಿಸುವುದು ಕಷ್ಟಕರವಾಗಿದೆ. ವಿಶಾಲವಾದ ಈ ಪ್ರದೇಶಗಳಲ್ಲಿ ಹಲವು ರಕ್ಷಣಾ ಸಂಬಂಧಿ ಕಟ್ಟಡಗಳಿವೆ. ಅವುಗಳ ಸುತ್ತಲು ರಕ್ಷಣಾ ಗೋಡೆಯನ್ನು ನಿರ್ಮಿಸಲಾಗಿದೆ. ಈ ಗೋಡೆಯು ಕೋಟೆಯ ಎಲ್ಲಾ ಲಕ್ಷಣಗಳನ್ನು ಹೊಂದಿದೆ. ಆದ್ದರಿಂದ ಇದನ್ನು ರಕ್ಷಣ ಗೋಡೆಯೆಂದು ಗುರುತಿಸಲಾಗಿದೆ. ಇಲ್ಲಿರುವ ದೇವಾಲಯಕ್ಕೆ ಸುತ್ತುವರಿದ ಕೋಟೆ ಇದೆ. ಸಂಜೀವ ಆಂಜನೇಯ ದೇವಾಲಯಕ್ಕೆ ಸುತ್ತುವರಿದ ವಿಶಾಲವಾದ ಕೋಟೆಯಿದೆ. ಈ ರೀತಿಯಲ್ಲಿ ನಾಗಾವಿ ಕೋಟೆಯು ಹಂತ ಹಂತವಾಗಿ ರಚನೆಗೊಂಡಿದೆ.

ಇದೇ ಸ್ಥಳದ ಈಶ್ವರ ದೇವಸ್ಥಾನದ ಮುಂಭಾಗದಲ್ಲಿ ವಿಶಾಲವಾದ ಪ್ರದೇಶವನ್ನು ಆವರಿಸಿಕೊಂಡಿರುವ ಕೋಟೆ ಗೋಡೆಯ ಅವಶೇಷಗಳು ಕಂಡುಬರುತ್ತವೆ. ಅಲ್ಲದೆ ಅಲ್ಲಿಂದ ಪೂರ್ವ ಭಾಗದಲ್ಲಿ ಸುಮಾರು ಒಂದು ಕಿ.ಮೀ. ವರೆಗೆ ಇರುವ ಸ್ಥಳದಲ್ಲಿ ಹಲವು ಬಗೆಯ ಕಟ್ಟಡಗಳ ಅವಶೇಷಗಳು ಕಂಡುಬರುತ್ತವೆ. ಎಲ್ಲಾ ಕಟ್ಟಡಗಳು ಸಂಪೂರ್ಣವಾಗಿ ನೆಲಸಮವಾಗಿವೆ. ಅವುಗಳ ತಳಪಾಯ ಮತ್ತು ಸುತ್ತಮುತ್ತಲಿನ ಕಲ್ಲಿನ ಸಂಗ್ರಹಗಳು ಮಾತ್ರ ಉಳಿದುಕೊಂಡಿವೆ. ಇದರ ಹೊರ ಭಾಗದಲ್ಲಿ ಕೋಟೆ ಗೋಡೆಯು ಕಂಡುಬರುತ್ತದೆ. ಇಲ್ಲಿಂದ ಮುಂದೆ ಹೋದರೆ ಕೋಟೆಯ ಪ್ರಮುಖ ದ್ವಾರವಿದೆ. ಒಳದ್ವಾರವು ಸುಸ್ಥಿತಿಯಲ್ಲಿದ್ದು ಹೊರದ್ವಾರವು ಅವನತಿ ಹೊಂದಿದೆ.

ನಾಗಾವಿ ಕೋಟೆಯಲ್ಲಿ ಪ್ರಸ್ತುತವಾಗಿ ಒಂದು ಪ್ರವೇಶ ದ್ವಾರ ಉಳಿದುಕೊಂಡಿದೆ. ಈ ದ್ವಾರವು ದಕ್ಷಿಣಕ್ಕೆ ಮುಖ ಮಾಡಿಕೊಂಡಿದ್ದು, ಕೋಟೆಯ ಒಳಗಡೆ ಎರಡು ಪ್ರಮುಖ ಭಾಗಗಳಿಗೆ ಸಂಪರ್ಕ ಕಲ್ಪಿಸುತ್ತದೆ. ಆದ್ದರಿಂದ ಇದರಲ್ಲಿ ಯಾವುದು ಒಳಭಾಗ, ಯಾವುದು ಹೊರಭಾಗ ಎಂದು ಗುರುತಿಸುವುದು ಕಷ್ಟಕರವಾಗಿದೆ. ಏಕೆಂದರೆ ಇದರ ಒಂದು ಭಾಗದಲ್ಲಿ ಕಾವಲುಗಾರರಿಗೆ ರಕ್ಷಣೆಯ ಸ್ಥಳವಿದೆ. ಇನ್ನೊಂದು ಭಾಗದಲ್ಲಿ ಈ ರೀತಿಯ ವ್ಯವಸ್ಥೆಯು ಕಂಡುಬರುವುದಿಲ್ಲ. ದ್ವಾರದ ಮುಂಭಾಗದಲ್ಲಿ ಅಥವಾ ಗೋಡೆ, ರಕ್ಷಣಾ ಸಂಬಂಧಿ ಕಟ್ಟಡಗಳಾದ ಸೈನಿಕರ ವಸತಿ ನಿಲಯಗಳು, ನೀರಿನ ಆಶ್ರಯ ತಾಣಗಳು, ದೇವಾಲಯಗಳು ಇವೆ. ಈ ದ್ವಾರವು ೧೦ ಅಡಿ ಅಗಲ ೨೦ ಅಡಿ ಎತ್ತರದ ಕಮಾನಿನ ಆಕಾರದಲ್ಲಿದೆ. ಇದರ ಒಂದು ಬದಿಯಲ್ಲಿ ಕಾವಲುಗಾರರಿಗೆ ರಕ್ಷಣಾ ಸ್ಥಳಗಳಿವೆ. ಇದರ ಮೇಲ್ಭಾಗದಲ್ಲಿ ಹತ್ತಲು ಮೆಟ್ಟಿಲುಗಳಿವೆ. ದ್ವಾರದ ಮತ್ತೊಂದು ಬದಿಯಲ್ಲಿ ನೇರವಾದ ಗೋಡೆಯಿದೆ. ಅಲ್ಲಿಂದ ಮುಂದೆ ಅರ್ಧವೃತ್ತಾಕಾರದಲ್ಲಿ ಕೋಟೆ ಗೋಡೆಯು ಮುಂದುವರಿಯುತ್ತದೆ.

ಈ ದ್ವಾರದ ಒಳಗಡೆ ಬಲಬದಿಯಲ್ಲಿ ನೇರವಾದ ಕೋಟೆಯ ಗೋಡೆಯಿದೆ. ಈ ಗೋಡೆಯು ಸುಮಾರು ೫೦೦ ಮೀಟರುಗಳವರೆಗೆ ಮುಂದುವರೆದು ಕೊನೆಯ ದ್ವಾರದವರೆಗೆ

ಇದೆ. ೧೫ ಅಡಿ ಎತ್ತರ ೪ ಅಡಿ ದಪ್ಪನೆಯ ಈ ಗೋಡೆಯನ್ನು ಸ್ಥಳೀಯವಾಗಿ ಲಭ್ಯವಾಗುವ ಚಿಕ್ಕ ಚಿಕ್ಕ ಕಲ್ಲುಗಳಿಂದ ನಿರ್ಮಿಸಲಾಗಿದೆ. ಇದರ ನಿರ್ಮಾಣಕ್ಕೆ ಗಾರೆಯನ್ನು ಬಳಸಿರುವುದಿಲ್ಲ, ಅಲ್ಲದೆ ಮಧ್ಯದಲ್ಲಿ ಬುರುಜುಗಳು ಕಾವಲುಗೋಪುರಗಳು ಇರುವುದಿಲ್ಲ. ಕೊನೆಯ ಭಾಗದಲ್ಲಿ ಮಾತ್ರ ವೃತ್ತಾಕಾರದ ಕೊತ್ತಳವಿದೆ. ಈ ಕೋಟೆಯ ಒಳಭಾಗದಲ್ಲಿ ಕೆಲವು ರಕ್ಷಣಾ ಸಂಬಂಧಿ ಕಟ್ಟಡಗಳ ಅವಶೇಷಗಳು ಕಂಡುಬರುತ್ತವೆ.

ಪ್ರಮುಖವಾಗಿ ನಾಗಾವಿಯ ಕೋಟೆಯು ಕಲ್ಯಾಣದ ಚಾಲುಕ್ಯರಿಂದ ಬಹುಮನಿಯ ಸುಲ್ತಾನರು ಮತ್ತು ಸಾಮಂತ ಅರಸರಾದ ಹೈಹಯರ ಕಾಲಕ್ಕೆ ಒಳಪಟ್ಟಿರುವುದರಿಂದ ಇಲ್ಲಿಯ ಕಟ್ಟಡಗಳ ಶೈಲಿಯಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ. ಇಲ್ಲಿಂದ ಲಭ್ಯವಾಗಿರುವ ಶಾಸನಗಳು ದೇವಾಲಯ, ಅಗ್ರಹಾರ, ಘಟಿಕಾಸ್ಥಾನ ಬಗ್ಗೆ ವಿವರಗಳನ್ನು ಹೊಂದಿರುವುದರಿಂದ.[೪೦] ಕೋಟೆ, ಕಾವಲು ಗೋಪುರ ಸೈನಿಕರ ವಸತಿ ನಿಲಯಗಳು ಹಾಗೂ ಇನ್ನಿತರ ಕಟ್ಟಡಗಳ ಬಗ್ಗೆ ಲಿಖಿತ ದಾಖಲೆಗಳು ಲಭ್ಯವಾಗುವುದಿಲ್ಲ. ಇಷ್ಟು ಈ ನಾಗಾವಿ ಕೋಟೆಯ ವಿಶೇಷತೆಯಾಗಿದೆ. ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಇನ್ನೂ ಅನೇಕ ಸಣ್ಣ ಪುಟ್ಟ ಕೋಟೆಗಳು ಕಂಡುಬರುತ್ತವೆ. ಅದರಲ್ಲಿ ಪ್ರಮುಖವಾದ ಕೋಟೆಗಳನ್ನು ಒಂದು ಕಡೆ ವಿವರಿಸುವ ಪ್ರಯತ್ನ ಇದಾಗಿದೆ.

### ಅಡಿ ಟಿಪ್ಪಣಿಗಳು

೧. ಸಿ.ಪಿ.ಕೆ. ಶಾಸನ ಪ್ರವೇಶ, ಪು. ೨೫

೨. ಗುಡ್ಡದೇಶ್ವರಪ್ಪ ಹೆಚ್. ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧೯

೩. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧೩

೪. ಗುಡ್ಡದೇಶ್ವರಪ್ಪ ಹೆಚ್, ಪೂರ್ವೋಕ್ತ, ಪು. ೧೯

೫. ಸಿ.ಪಿ.ಕೆ. ಪೂರ್ವೋಕ್ತ, ಪು. ೪೩

೬. ಶಿವಾನಂದ ವಿ., ೧೯೯೨, ಹೈದ್ರಾಬಾದ ಕರ್ನಾಟಕ ಭಾಗದ ಶಿಲಾಶಾಸನಗಳು (ಶಾ.ಸಂ. ೭೫), ಪು. ೧೮೨

೭. Annual Report of Indian Epigraphy, 1976-77, No.B. 145

೮. Ibid, 960-61, No.B. 489

೯. Ibid, 1961-62, No.B. 517

೧೦. Ibid, 1971-72, No.B. 171

೧೧. ಶೇಷಶಾಸ್ತ್ರಿ ಆರ್., ೨೦೦೫, ಶಾಸನ ಪರಿಚಯ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಪು. ೨೦

೧೨. ಅದೇ, ಪು. ೨೯

೧೩. ಮಂಜುನಾಥ ಎಂ.ಜಿ., ಮಾಸ್ತಿಕಲ್ಲು, ವೀರಗಲ್ಲು ಮತ್ತು ನಿಸಿದಿ ಶಾಸನಗಳು, ಪು. ೨

೧೪. ಪರಮಶಿವಮೂರ್ತಿ ಡಿ.ವಿ., ಕನ್ನಡ ಶಾಸನ ಶಿಲ್ಪ, ಪು. ೧೩೮

೧೫. ನಾಗೇಗೌಡ ಹೆಚ್.ಸಿ. (ಸಂಪುಟ ೧-೨) ಗ್ರಂಥದಲ್ಲಿ ಗಮನಿಸಬಹುದು.

೧೬. ಕಲಬುರ್ಗಿ ಎಂ.ಎಂ., ಸಮಾಧಿ-ಬಲಿದಾನ-ವೀರಮರಣ, ಸ್ಮಾರಕಗಳು, ಪು. ೨೮

೧೭. ಶೇಷಶಾಸ್ತ್ರಿ ಆರ್. ಶಾಸನ ಪರಿಚಯ, ಪೂರ್ವೋಕ್ತ, ಪು. ೩೦

೧೮. ಪರಮಶಿವಮೂರ್ತಿ ಡಿ.ವಿ., ಪೂರ್ವೋಕ್ತ, ಪು. ೧೪೦

೧೯. ದಿಕ್ಷಿತ್ ಜಿ.ಎಸ್., ಕುಪ್ಪಸ್ವಾಮಿ ಜಿ.ಆರ್. ಹಾಗೂ ಮೋಹನ್ ಎಸ್. (ಕನ್ನಡ ಅನುವಾದ ನೀಲತ್ತಹಳ್ಳಿ ಕಸ್ತೂರಿ), ೨೦೦೦, ಕರ್ನಾಟಕದಲ್ಲಿ ನೀರಾವರಿ, ಪು. ೩೧

೨೦. ಅದೇ, ಪು. ೩೩

೨೧. ಅದೇ, ಪು. ೩೪

೨೨. ಗುಣವರ್ಮನ, ೧೯೩೦, ಪುಷ್ಪದಂತ ಪುರಾಣ

೨೩. ಗುರುನಾಥ ಜೋಶಿ, ೧೯೯೦, ಕನ್ನಡ-ಕನ್ನಡ ಶಬ್ದಕೋಶ, ಪು. ೧೯೫

೨೪. ಅದೇ, ಪು. ೧೯೭

೨೫. ರಾಧಾಕೃಷ್ಣಮೂರ್ತಿ, ಸಂಸ್ಕೃತ, ೧೯೯೦, ಗ್ರಂಥಗಳಲ್ಲಿ ಕೋಟೆಗಳ ವರ್ಣನೆ, ಇತಿಹಾಸ ದರ್ಶನ-೪, ಪು. ೧೫೭

೨೬. ಅದೇ, ಪು. ೧೫೮

೨೭. Deshpande D.N., 1971m Maratha Forts, Pubulished Ph.d. Thesis, Poona University, Pune, P.10

೨೮. ಶೇಷಶಾಸ್ತ್ರಿ ಆರ್, ೧೯೯೪, ಕರ್ನಾಟಕ ವೀರಗಲ್ಲುಗಳು, ಪು. ೧೮೮

೨೯. ಕೊಟ್ರೇಶ್ ಎಂ., ೨೦೦೨, ಕೋಟೆ-ಕೊತ್ತಲಗಳ ಅಧ್ಯಯನ (ಬಳ್ಳಾರಿ ಜಿಲ್ಲೆ, ಪು. ೧೭)

೩೦. Talwar H.T., 1993-94, An Interin Report on the Excavation of Sannati, p.12

೩೧. ಚನ್ನಬಸಪ್ಪ ಎಸ್. ಪಾಟೀಲ್, ೧೯೯೯, ಕರ್ನಾಟಕ ಕೋಟೆಗಳು (ಸಂಪುಟ.೧) ಸನ್ನತಿ, ಪು. ೧೧-೧೨

೩೨. ಅದೇ, ಪು. ೩೨

೩೩. ಬಿರಾದಾರ ಶ್ರೀಶೈಲ್, ೨೦೦೯, ಮಾನ್ಯಖೇಟದೆಡೆಗೆ ಐತಿಹಾಸಿಕ ನಡಿಗೆ, ಪು. ೫೪

೩೪. ಮುಡಬಿ ಗುಂಡೇರಾವ್, ೧೯೯೯, ಸೇಡಂ ತಾಲೂಕಿನ ಐತಿಹಾಸಿಕ ಸ್ಮಾರಕಗಳು, ಪು. ೪೦

೩೫. ಗೋಪಾಲ ಆರ್, (ಸಂ), ೨೦೦೭, ಗುಲ್ಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಸೇಡಂ ಪರಿಸರದ ಶಾಸನಗಳಲ್ಲಿ ರಾಜಕೀಯ ಸ್ಥಿತಿಗತಿಗಳು, (ಸಂಗೀತಾ ಎಸ್. ಹೊನ್ನಳ್ಳಿ), ಪು. ೩೬-೩೭

೩೬. ಶ್ರೀಶೈಲ್, ಬಿರಾದಾರ, ೨೦೦೫, ಸೇಡಂ ಒಂದು ಸಾಂಸ್ಕೃತಿಕ ಅವಲೋಕನ, ಪು. ೧೪

೩೭. ಮುಡಬಿ, ಗುಂಡೇರಾವ್, ೧೯೯೯, ಪೂರ್ವೋಕ್ತ, ಪು. ೩

೩೮. ಬಿರಾದಾರ ಶ್ರೀಶೈಲ್, ೨೦೦೯, ಪೂರ್ವೋಕ್ತ, ಪು. ೫೨

೩೯. ಮಹದೇವ ಸಿ., ವಾಸುದೇವ ಬಡಿಗೇರ, ರಮೇಶನಾಯಕ, ಕರ್ನಾಟಕ ದೇವಾಲಯ ಕೋಶ, ಕಲಬುರ್ಗಿ ಜಿಲ್ಲೆ, ಪು. ೨೧೮

೪೦. ಅದೇ, ಪು. ೨೨೧



# ಅಧ್ಯಾಯ : ಐದು

## ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶಿಕ್ಷಣ ಮತ್ತು ಸಾಹಿತ್ಯ

೫.೧. ಸಾಮಾಜಿಕ ವ್ಯವಸ್ಥೆ
೫.೨. ಧಾರ್ಮಿಕ ವ್ಯವಸ್ಥೆ
೫.೩. ಆರ್ಥಿಕ ವ್ಯವಸ್ಥೆ
೫.೪. ಶಿಕ್ಷಣ ಮತ್ತು ಸಾಹಿತ್ಯ

## ಅಧ್ಯಾಯ: ಐದು

# ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶಿಕ್ಷಣ ಮತ್ತು ಸಾಹಿತ್ಯ

### ಸಾಮಾಜಿಕ ವ್ಯವಸ್ಥೆ

ಮಾನ್ಯಖೇಟ ಪರಿಸರದ ಸಾಮಾಜಿಕ ಜೀವನವನ್ನು ತಿಳಿಯಲು ನಮಗೆ ದೊರೆಯುವ ಆಧಾರಗಳು ಅಂದರೆ ರಾಷ್ಟ್ರಕೂಟರು ನಿರ್ಮಿಸಿರುವ ಶಾಸನಗಳು. ಸಾಹಿತ್ಯ ಆಧಾರಗಳು ಪ್ರಮುಖವಾಗಿ ಮತ್ತು ರಾಷ್ಟ್ರಕೂಟರ ಸಾಮ್ರಾಜ್ಯಕ್ಕೆ ಭೇಟಿ ನಿಡಿದ ವಿದೇಶಿ ಪ್ರವಾಸಿಗರಾದ ಸುಲೈಮಾನ್, ಅಲ್‌ಮಸೂದಿ, ಇಬನ್ ಬತೂತರ ಬರವಣಿಗೆಗಳು ಅತ್ಯಂತ ಸಹಾಯಕವಾಗುತ್ತವೆ. ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಕಾಲದಲ್ಲಿ ಪ್ರಸ್ತುತ ಅಧ್ಯಯನ ಪರಿಸರದ ಜನರು ಶಾಂತಿ ಮತ್ತು ಸಮೃದ್ಧಿಯಿಂದ ಕೂಡಿದ್ದು ಜನತೆ ಸುಸಂಸ್ಕೃತರು ವಿದ್ಯಾವಿನಯ ಸಂಪನ್ನರಾಗಿದ್ದರು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ತಮ್ಮ ತಮ್ಮ ವರ್ಗಗಳ ವೃತ್ತಿಯನ್ನು ಸ್ವೀಕರಿಸಲು ಧರ್ಮಶಾಸ್ತ್ರಗಳು ಅನುವು ಮಾಡಿಕೊಟ್ಟವು.[೧]

ಮುಖ್ಯವರ್ಣಗಳನ್ನು ಪಂಗಡವಾಗಿ ವಿಂಗಡಿಸುವ ಧೋರಣೆಯಿತ್ತು. ಇದರಿಂದ ವರ್ಣಗಳಲ್ಲಿ ಮೇಲು, ಕೀಳು ಎಂಬ ಭಾವನೆಯು ಬೆಳೆಯತೊಡಗಿತು. ಬ್ರಾಹ್ಮಣರು, ಯೋಧರು, ಕೃಷಿಕರು, ಆಗಿದದ್ದು ನಮಗೆ ಶಾಸನಗಳಿಂದ ತಿಳಿದುಬರುತ್ತದೆ. ಬ್ರಾಹ್ಮಣರು ತಮ್ಮ ವರ್ಣಕ್ಕೆ ವರ್ಗೀಕರಿಸಿದ ಉದ್ಯೋಗವನ್ನು ಬಿಟ್ಟು ಬೇರೆ ವೃತ್ತಿಯನ್ನು ಬೇರೆ ಉದ್ಯೋಗವನ್ನುವಂಲಬಿಸಿದರೆ ಆತ ತೆರಿಗೆ ಕೊಡಬೇಕಾಗಿತ್ತು. ಕ್ಷತ್ರಿಯರಲ್ಲಿ ಎರಡು ಪಂಗಡವಿದ್ದಿತ್ತು. ಒಂದು ಸತ್‌ಕ್ಷತ್ರಿಯರು ಮತ್ತೊಂದು ಸಾಮಾನ್ಯ ಕ್ಷತ್ರಿಯರು. ಆಡಳಿತ ವರ್ಗದವರು ಮತ್ತು ಶ್ರೀಮಂತರು ಸತ್‌ಕ್ಷತ್ರಿಯರ ಗುಂಪಿಗೆ ಸೇರಿದ್ದರು. ಸಾಮಾನ್ಯ ಕ್ಷತ್ರಿಯರು ವೇದಾಧ್ಯಯನಕ್ಕೆ ಅರ್ಹರಾಗಿರಲಿಲ್ಲ.[೨]

ಸಮಾಜವು ಪಿತೃಪ್ರಧಾನ ಕುಟುಂಬ ಪದ್ಧತಿಯ ಆಚರಣೆಯಲ್ಲಿತ್ತು. ಸ್ತ್ರೀಯರಿಗೂ ಸಹ ಸಮಾಜದಲ್ಲಿ ಗೌರವ ಸ್ಥಾನವಿತ್ತು. ಸ್ತ್ರೀಗೆ ಶಿಕ್ಷಣದ ಸೌಲಭ್ಯವಿತ್ತು. ನೃತ್ಯ, ಲಲಿತಕಲೆ, ಸಂಗೀತದಲ್ಲೂ ಸ್ತ್ರೀಯರು ಭಾಗವಹಿಸುತ್ತಿದ್ದರು. ಸ್ತ್ರೀಯರು ಅಲಂಕಾರ ಪ್ರಿಯರು ಸಹ ಆಗಿದ್ದರು. ಅವರು ಓಲೆ, ತೋಳಬಂದಿ, ಕೊರಳಿನ ಹಾರ, ಬಳೆಗಳು, ಕಾಲುಂದಿಗೆ ಮುಂತಾದ ಆಭರಣಗಳನ್ನು ಧರಿಸುತ್ತಿದ್ದರು ಮತ್ತು ವಿಶೇಷವಾಗಿ ರಾಜಮನೆತನದ ಸ್ತ್ರೀಯರು ಮುತ್ತು ರತ್ನಗಳಿಂದ ಕೂಡಿದ ಆಭರಣಗಳನ್ನು ಧರಿಸುತ್ತಿದ್ದರು. ಈ ಕಾಲದ ಮುಖ್ಯ ಬದಲಾವಣೆ ಎಂದರೆ ಸ್ತ್ರೀಯರು ತಮ್ಮ

ಪತಿಯ ಆಸ್ತಿಯಲ್ಲಿ ಪಾಲುಪಡೆಯುವ ಹಕ್ಕನ್ನು ಸಂಪಾದಿಸಿಕೊಂಡಿರುವುದು ವಿಶೇಷವಾಗಿದೆ. ಪ್ರಸ್ತುತ ಪರಿಸರದಲ್ಲಿ ಜನರ ಉಡುಗೆ, ತೊಡುಗೆ, ಗಂಡಸರು ಎರಡು ತುಂಡಿನ ಬಟ್ಟೆಯನ್ನು ಧರಿಸುತ್ತಿದ್ದು ಮೊಣಕಾಲಿನವರೆಗೆ ಪಂಚೆ ಮೇಲೊಂದು ಅಂಗವಸ್ತ್ರವನ್ನು ಹಾಕಿಕೊಳ್ಳುತ್ತಿದ್ದರು. ಕಿವಿಗೆ ಕರ್ಣಕುಂಡಲವನ್ನು ಕೈಗೆ ಕಡಗವನ್ನು ಧರಿಸುತ್ತಿದ್ದರು. ಅಲ್ಲಿನ ಈಗಿನ ಸಾಮಾಜಿಕ ವ್ಯವಸ್ಥೆಯು ಸಹ ಇದೆ ಮಟ್ಟದಲ್ಲಿರುವುದು ವಿಶೇಷವಾಗಿದೆ.

ಈ ಪರಿಸರದ ಸಾಮಾಜಿಕ ವ್ಯವಸ್ಥೆಯಲ್ಲಿ ದೇವಾಲಯಗಳು ಕೆಲವೊಮ್ಮೆ ಸಾಮಾಜಿಕ ಜೀವನದ ಕೇಂದ್ರಗಳು ಆಗುತ್ತಿದ್ದವು. ಹೇಗೆಂದರೆ ಗ್ರಾಮದ ಆಡಳಿತದ ವ್ಯವಸ್ಥೆಗಳು ಹಿರಿಯರು ದೇವಾಲಯದ ಸಭಾಂಗಣದಲ್ಲಿ ಸಭೆ ಸೇರುತ್ತಿದ್ದರು. ನೃತ್ಯ, ಸಂಗೀತ, ಮನರಂಜನಾ ಕಾರ್ಯಕ್ರಮಗಳು ಸಹ ಕೆಲವೊಮ್ಮೆ ನಡೆಯುತ್ತಿದ್ದವು. ಅಷ್ಟೇ ಅಲ್ಲದೆ ದೇವತಾ ಪೂಜೆಗೆ ಸಂಬಂಧಿಸಿದ ಅನೇಕ ವೃತ್ತಿಕರಿಗೆ ಜೀವನೋಪಾಯಗಳನ್ನು ಸಹ ದೇವಾಲಯ ಕಲ್ಪಿಸಿತ್ತು.[೩] ಹೂವಾಡಿಗ, ತೋಟಗಾರ, ಗಂದಕಾರ, ಕುಂಬಾರ, ಭಜಂತ್ರಿ, ಪಶಿಕಾರ, ವಂಶಿಗ (ಕೊಳಲೂದುವವನು) ಮುಂತಾದವರ ಸಾಮಾಜಿಕ ಜೀವನಕ್ಕೆ ಆಧಾರವಾಗಿದ್ದ ದೇವಾಲಯಗಳು. ಅಲ್ಲದೆ ಈ ದೇವಾಲಯಗಳು ಧಾರ್ಮಿಕ ಜೀವನ ನಡೆಸುವವರಿಗೂ ಕೇಂದ್ರಗಳಾಗಿದ್ದವು. ಸಾಧು ಸಂತರಿಗೂ, ಪ್ರಯಾಣಿಕರಿಗೂ ವಸತಿ ಅನುಕೂಲಗಳನ್ನು ಏರ್ಪಡಿಸಿ ಕೊಡಲಾಗಿತ್ತು. ಇಲ್ಲಿ ವಾಸಿಸುತ್ತಿದ್ದ ಸಾಧು-ಸನ್ಯಾಸಿಗಳು ನಿಯಮಬದ್ಧವಾದ ಜೀವನವನ್ನು ನಡೆಸಲೇಬೇಕಾಗಿತ್ತು.

### ಆರ್ಥಿಕ ವ್ಯವಸ್ಥೆ

ಮಾನ್ಯಖೇಟ ಮತ್ತು ಅದರ ಸುತ್ತಮುತ್ತಲಿನ ಪರಿಸರದಲ್ಲಿ ರಾಷ್ಟ್ರಕೂಟರು ಹಾಗೂ ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಕಾಲಾವಧಿಯಲ್ಲಿ ಇಲ್ಲಿನ ಜನ ವ್ಯವಸಾಯ, ಗೃಹ ಕೈಗಾರಿಕೆ, ಗಣಿಗಾರಿಕೆ ಮತ್ತು ವ್ಯಾಪಾರವು ಜನರ ಮುಖ್ಯ ಕಸುಬುಗಳಾಗಿದ್ದವು.[೪] ನೇಗಿಲು ವ್ಯವಸಾಯದ ಪ್ರಮುಖ ಉಪಕರಣವಾಗಿತ್ತು. ಇದನ್ನು ಮೇಟಿ ಎಂದು ಕರೆಯುತ್ತಿದ್ದರು.

ಈ ರಾಷ್ಟ್ರಕೂಟರ ಮತ್ತು ಕಲ್ಯಾಣ ಚಾಲುಕ್ಯರ ಆರ್ಥಿಕ ಜೀವನವನ್ನು ತಿಳಿಯಲು ನಮಗೆ ದೊರೆಯುವ ಅಂದಿನ ಕಾಲದ ಆಧಾರಗಳು ಅಂದರೆ ಶಾಸನಗಳು, ಸಾಹಿತ್ಯಿಕ ಆಧಾರಗಳು, ನಾಣ್ಯಗಳು ಹಾಗೂ ವಿದೇಶಿ ಬರವಣಿಗೆಗಳು ಪ್ರಮುಖ ಆಧಾರಗಳಾಗಿವೆ. ವ್ಯವಸಾಯವೇ ಆರ್ಥಿಕ ಜೀವನದ ಮೂಲವಾಗಿತ್ತು. ರಾಜ್ಯ ಆದಾಯ ಬಹುಪಾಲು ಭೂಕಂದಾಯದಿಂದಲೇ ಬರುತ್ತಿತ್ತು. ಭೂಮಿಯನ್ನು ಕೇವಲ ತರಿ ಖುಷ್ಕಿ ಜಮೀನುಗಳಿಂದಲ್ಲದೆ, ಅವುಗಳ ಫಲವತ್ತತೆಗನುಗುಣವಾಗಿ ವರ್ಗೀಕರಿಸಿ ಕಂದಾಯವನ್ನು ನಿಗದಿಗೊಳಿಸಲಾಗಿತ್ತು. ಹುಟ್ಟುವಳಿಯ ೧/೬ ಭಾಗವನ್ನು ಕಂದಾಯವಾಗಿ ಕೊಡಬೇಕಾಗಿತ್ತು. ಮತ್ತು ಕೆಲವೊಮ್ಮೆ ಕಂದಾಯದಲ್ಲಿ ವಿನಾಯಿತಿಯನ್ನು ನೀಡಲಾಗುತ್ತಿತ್ತು. ಕಂದಾಯದಲ್ಲಿ ಇನ್ನಿತರ ವಿಶೇಷ ತೆರಿಗೆಗಳು ಸಹ ಜಾರಿಯಲ್ಲಿದ್ದವು. ಅವುಗಳೆಂದರೆ, ಸುಂಕ, ಹೊರಸುಂಕ, ನಿಯತ ಹಾಗೂ ಅನಿಯತ

ಸೈನಿಕ ಹಾಗೂ ಕಾವಲು ದಳಗಳ ಆಗಮನ ಕಾಲಕ್ಕೆ ವಸೂಲಿ ಮಾಡುವ ತೆರಿಗೆ, ರಾಜ ಸೇವಕರ ಅತಿಥ್ಯಕ್ಕಾಗಿ ಕೊಡುವ ತೆರಿಗೆ, ಉತ್ಪನ್ನಗಳಲ್ಲಿ ಕೊಡುವ ತೆರಿಗೆ ಮತ್ತು ಇನ್ನಿತರ ತೆರಿಗೆಗಳು ಇದ್ದವು[೫] ಎಂದು ತಿಳಿದುಬರುತ್ತದೆ. ಬೇಸಾಯದ ಬಗ್ಗೆ ಹೇಳುವುದಾದರೆ ರಾಷ್ಟ್ರಕೂಟರು ಮತ್ತು ಕಲ್ಯಾಣದ ಚಾಲುಕ್ಯರ ಆಳ್ವಿಕೆ ಕಾಲದಲ್ಲಿ ಹತ್ತಿಯನ್ನು ಅಧಿಕ ಪ್ರಮಾಣದಲ್ಲಿ ಬೆಳೆಯುತ್ತಿದ್ದರು. ಹಾಗೂ ತೊಗರಿಯನ್ನು ಮಾನ್ಯಖೇಟದ ಸುತ್ತಮುತ್ತಲಿನ ಪ್ರದೇಶದಲ್ಲಿ ಬೆಳೆಯುತ್ತಿದ್ದರು.

## ವಾಣಿಜ್ಯ ವ್ಯಾಪಾರ

ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಕ್ರಿ.ಶ. ೮ನೇ ಶತಮಾನದ ಕಾಲಾವಧಿಯಲ್ಲಿ ರಾಷ್ಟ್ರಕೂಟರು ಮತ್ತು ಕಲ್ಯಾಣದ ಚಾಲುಕ್ಯರ ಆಳ್ವಿಕೆಯನ್ನು ಮಾಡಿರುವುದು ಕಂಡುಬರುತ್ತದೆ. ಪ್ರಸ್ತುತ ಪರಿಸರದಲ್ಲಿ ಸಾಂಸ್ಕೃತಿಕ ರಾಜಕೀಯ ಹಾಗೂ ಸಾಮಾಜಿಕ ವ್ಯವಸ್ಥೆಗೆ ಪ್ರಮುಖ ಕಾರಣವೆ ಈ ಆರ್ಥಿಕ ಅಭಿವೃದ್ಧಿಯು ಪ್ರಮುಖ ಪಾತ್ರವಹಿಸುವುದು ವಾಣಿಜ್ಯ ವ್ಯಾಪಾರ. ಈ ವಾಣಿಜ್ಯ ವ್ಯಾಪಾರದಲ್ಲಿ ಇವರ ರಫ್ತು ಆಗುತ್ತಿದ್ದ ವಸ್ತುಗಳೆಂದರೆ, ಹತ್ತಿಯ ನೂಲು ಬಟ್ಟೆ, ಒರಟಾದ ಮತ್ತು ನಯವಾದ ಮಸ್ಲಿನ್ ಬಟ್ಟೆ, ಚಾಪೆಗಳು, ಚರ್ಮ, ನೀಲಿ, ಧೂಪ ವೀಳೆಯದೆಲೆ, ಅಡಕೆ, ಶ್ರೀಗಂಧ, ತೇಗ, ಎಳ್ಳೆಣ್ಣೆ, ದಂತ, ನವಿಲುಗರಿ ಮುಂತಾದವುಗಳಾಗಿವೆ. ಆಮದು ಆಗುತ್ತಿದ್ದ ವಸ್ತುಗಳೆಂದರೆ ಮುತ್ತು, ಖರ್ಜೂರಾ, ಚಿನ್ನ, ಗುಲಮರು, ಇಟಲಿಯ ದ್ರಾಕ್ಷಾರಸ, ತಾಮ್ರ, ತವರ, ಸತು, ಲವಂಗ, ಗಟ್ಟಿಗಾಜು, ಚಿನ್ನದ ಹಾಗೂ ಬೆಳ್ಳಿಯ ನಾಣ್ಯ ಮುಂತಾದವು.

ಮಾರ್ಕೋಪೋಲೋ ತಿಳಿಸಿರುವಂತೆ ಅಂದು ವ್ಯಾಪಾರದ ಸರಕುಗಳು ಅಂದರೆ "ಕುದುರೆಯ ವ್ಯಾಪಾರ ಅತ್ಯಂತ ಬಿರುಸಿನಿಂದ ನಡೆಯುತ್ತಿದ್ದು ದಖನ್ನಿನ ಬಂದರಿಗೆ ಹೋಗಿ ಮುಟ್ಟಿದ ಪ್ರತಿಯೊಂದು ಹಡಗಿನ ಸರಕುಗಳು ಕುದುರೆಗಳು ಆಗಿದ್ದವು."[೬] ಎತ್ತುಗಳು, ಎತ್ತಿನ ಗಾಡಿಗಳು, ಕುದುರೆಗಳು, ಆನೆಗಳನ್ನು ಸರಕು ಸಾಗಾಣಿಕೆಗೆ ಬಳಸಿಕೊಳ್ಳಲಾಗುತ್ತಿತ್ತು.[೭] ಅರಣ್ಯ ಪ್ರದೇಶಗಳಲ್ಲಿ ದೊರೆಯುತ್ತಿದ್ದ ತೇಗ, ಶ್ರೀಗಂಧ, ಬೇಡ ಮೊದಲಾದ ವೃಕ್ಷ ಸಂಪತ್ತನ್ನು ಸಾಗಿಸಲು ಈ ಸಹ ಮೇಲ್ಕಂಡ ಪ್ರಾಣಿಗಳನ್ನು ಬಳಸಲಾಗುತ್ತಿತ್ತು.

## ಆರ್ಥಿಕ ವ್ಯವಸ್ಥೆಗೆ ಸಂಬಂಧಿಸಿದ ಕೆಲವು ವಿವರ[೮]

ಕೃಷಿ : ಆರ್ಥಿಕ ಜೀವನದ ಬೆನ್ನೆಲುಬು ಆಗಿತ್ತು, ಭೂಮಿಯ ಭಾಗಗಳು : ತರಿ–ಖುಷ್ಕ, ಆದಾಯದ ಮೂಲ : ಭೂ ಕಂದಾಯವಾಗಿತ್ತು, ಕಂದಾಯ ವಸೂಲಿ : ೧/೬ ಭಾಗ, ಪ್ರಮುಖ ವಾಣಿಜ್ಯ ಬೆಳೆಗಳು : ಹತ್ತಿ ಮತ್ತು ಜೋಳ, ತೊಗರಿ, ಮಾನ್ಯಖೇಟ : ಆಭರಣದ ಮಾರುಕಟ್ಟೆಯಾಗಿತ್ತು, ವ್ಯಾಪಾರ ಸಂಪರ್ಕ : ಅರಬ್ ರಾಷ್ಟ್ರದೊಂದಿಗೆ, ಕೈಗಾರಿಕಾ ಕೇಂದ್ರ: ತೇಲಾಂಗಣದಲ್ಲಿತ್ತು, ವಿದೇಶಿ ವ್ಯಾಪಾರ ಕೇಂದ್ರ : ಕಲ್ಯಾಣ, ಸೋಹಾರ್, ಬ್ರೋಚ್, ನಾಣ್ಯ: ದ್ರಮ್ಮು, ಸುವರ್ಣ, ಗದ್ಯಾಣ, ಕಳಂಜ ಹಾಗೂ ಕಾಸು

## ಧಾರ್ಮಿಕ ವ್ಯವಸ್ಥೆ

ಪ್ರಸ್ತುತ ಅಧ್ಯಯನವಾದ ಮಾನ್ಯಖೇಟ ಪರಿಸರದಲ್ಲಿ ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಕಾಲಾವಧಿಯಲ್ಲಿ. ವೈದಿಕ ಧರ್ಮ, ಬೌದ್ಧ ಧರ್ಮ, ಜೈನ ಧರ್ಮ ಮತ್ತು ಇಸ್ಲಾಂ ಧರ್ಮಗಳು ಅಸ್ತಿತ್ವದಲ್ಲಿದ್ದವು. ಆದರೂ ಧರ್ಮಸಹಿಷ್ಣುತೆ ಮತ್ತು ಸರ್ವಧರ್ಮ ಸಮನ್ವಯತೆ ರಾಷ್ಟ್ರಕೂಟರು ಹಾಗೂ ಕಲ್ಯಾಣ ಚಾಲುಕ್ಯರ ಧಾರ್ಮಿಕ ಜೀವನದ ಲಕ್ಷಣವಾಗಿತ್ತು.[೯]

## ವೈದಿಕ ಧರ್ಮ

ರಾಷ್ಟ್ರಕೂಟರು ಹಾಗೂ ಕಲ್ಯಾಣದ ಚಾಲುಕ್ಯರು ವೈದಿಕ ಧರ್ಮೀಯರು ಆಗಿದ್ದರು. ವೈದಿಕ ಧರ್ಮದ ಶಾಖೆಗಳಾದ ಶೈವ ಹಾಗೂ ವೈಷ್ಣವ ಧರ್ಮದ ಅನುಯಾಯಿಗಳು ಆಗಿದ್ದರು. ಗುಪ್ತರ ಆಳ್ವಿಕೆ ಕಾಲದಲ್ಲಿ ಉಂಟಾದ ಹಿಂದೂಮತ ನವೋದಯ ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಮತ್ತಷ್ಟು ಪ್ರಜ್ವಲಿಸಿತ್ತು. ರಾಷ್ಟ್ರಕೂಟರ ಪ್ರಮುಖ ಅರಸನಾದ ದಂತಿದುರ್ಗ, ಅಮೋಘ ವರ್ಷ, ೪ನೇ ಗೋವಿಂದನು ಜೈನರಾಗಿದ್ದರೂ ವೈಧಿಕ ಧರ್ಮದ ವಿಧಿ ವಿಧಾನಗಳನ್ನು ನೆರವೇರಿಸಿರುವುದರಿಂದ ವೈಧಿಕ ಧರ್ಮಕ್ಕೆ ರಾಷ್ಟ್ರಕೂಟರ ಕಾಲದಲ್ಲಿ ಹೆಚ್ಚಿನ ಆಧ್ಯತೆ ಇರುವುದು ಕಂಡುಬರುತ್ತದೆ.[೧೦]

## ಬೌದ್ಧ ಧರ್ಮ

ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಕ್ರಿ.ಶ. ೮ನೇ ಶತಮಾನದಿಂದ ೧೨ನೇ ಶತಮಾನದ ಅವಧಿಯ ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರ ಆಳ್ವಿಕೆಯಲ್ಲಿ ಯಾವುದೇ ಒಂದು ಬೌದ್ಧ ದೇವಾಲಯವು ಈ ಪರಿಸರದಲ್ಲಿ ನಿರ್ಮಾಣವಾಗಲಿಲ್ಲ. ಪ್ರಾಚೀನ ಕಾಲದಲ್ಲಿ ಸನ್ನತಿಯನ್ನು ಹೊರತುಪಡಿಸಿ ದೇಶದ ಬೇರೆ ಬೇರೆ ಕಡೆ ಬೌದ್ಧರು ವಾಸಿಸುತ್ತಿದ್ದರು. ಕನ್ಹೇರಿ, ಕಪಿಲ, ಡಂಬಳಗಳಲ್ಲಿ ಬೌದ್ಧ ಸನ್ಯಾಸಿಗಳಿಗಾಗಿ ವಿಹಾರಗಳಿದ್ದವೆಂದು ತಿಳಿದುಬರುತ್ತದೆ. ಆದರೆ ಮಾನ್ಯಖೇಟ ಪರಿಸರದಲ್ಲಿ ಬೌದ್ಧ ಧರ್ಮ, ವೈದಿಕ ಧರ್ಮ ಮತ್ತು ಜೈನ ಧರ್ಮದಷ್ಟು ಜನಪ್ರಿಯವಾಗಿರಲಿಲ್ಲ.[೧೧]

## ಜೈನ ಧರ್ಮ

ಸಾಂಸ್ಕೃತಿಕವಾಗಿ ರಾಷ್ಟ್ರಕೂಟರ ಕಾಲ ಜೈನ ಧರ್ಮದ ಉನ್ನತಿಯ ಕಾಲವಾಗಿತ್ತು. ಅಮೋಘವರ್ಷ ನೃಪತುಂಗ ಜೈನ ಧರ್ಮದ ಅನುಯಾಯಿ ಆಗಿದ್ದನು. ಅವನ ದಂಡನಾಯಕ ಬಂಕೇಶನು ಕೂಡ ಜೈನನಾಗಿದ್ದನು. ಎರಡನೇ ಕೃಷ್ಣನು ಜೈನನಾಗಿದ್ದನು. ಎರಡನೇ ಕೃಷ್ಣ ಮತ್ತು ಮೂರನೇ ಇಂದ್ರ ಜೈನ ಬಸದಿಗಳಿಗೆ ಉದಾರ ದಾನದಲ್ಲಿ ನೀಡಿದ ಕಾರ್ಯ ಶಾಸನಗಳಿಂದ ತಿಳಿದುಬರುತ್ತದೆ. ಹಾಗೆಯೇ ರಾಷ್ಟ್ರಕೂಟರ ಕಾಲದಲ್ಲಿ ಅಧಿಕ ಸಂಖ್ಯೆಯಲ್ಲಿ ಜೈನ ವಿದ್ವಾಂಸರು ಮತ್ತು ಕವಿಗಳು ಇದ್ದರು. ಮಾನ್ಯಖೇಟವು ಜೈನಮತದ ಪ್ರಸಿದ್ಧ ಕೇಂದ್ರಗಳಲ್ಲಿ ಒಂದಾಗಿತ್ತು. ರಾಷ್ಟ್ರಕೂಟರ ನಾಲ್ಕನೆಯ ಇಂದ್ರನು ನಿಷ್ಠಾವಂತ ಜೈನನಾಗಿದ್ದನು. ಇಮ್ಮಡಿ ತೈಲಪನಿಂದ ತನ್ನ ರಾಜ್ಯವನ್ನು ಮತ್ತೆ ಗಳಿಸಲು ವಿಫಲನಾದಾಗ ಇಂದ್ರರಾಜನು ಸಲ್ಲೇಖನ

ವೃತದಿಂದ ಕ್ರಿ.ಶ. ೯೮೨ರಲ್ಲಿ ಶ್ರವಣಬೆಳಗೊಳದಲ್ಲಿ ಆತ್ಮತ್ಯಾಗ ಮಾಡಿಕೊಂಡನು. ಎಂ. ಚಿದಾನಂದಮೂರ್ತಿ ಯವರು ಬರೆದಿರುವಂತೆ, ರಾಷ್ಟ್ರಕೂಟರು ಶಿವಭಕ್ತರಾಗಿದ್ದರೂ ಅವರ ಒಲವು ವಿಶೇಷವಾಗಿ ಜೈನ ಧರ್ಮದ ಕಡೆಗೆ ಇದ್ದಿತು. ಕ್ರಿ.ಶ. ೯೮೦ರ ಸೌದತ್ತಿಯ ಶಾಸನವೊಂದರಲ್ಲಿ ಬಸದಿಯೊಂದನ್ನು "ರಟ್ಟರ ಪಟ್ಟ ಜಿನಾಲಯ"ವೆಂದು ಕರೆದು ರಾಷ್ಟ್ರಕೂಟರಿಂದ ಜೈನ ಧರ್ಮವು ಪಡೆದ ಪ್ರೋತ್ಸಾಹದ ವಿವರಗಳನ್ನು ಕೊಡಲಾಗಿದೆ.[೧೨]

ಪ್ರಸ್ತುತ ಅಧ್ಯಯನ ಪರಿಸರದಲ್ಲಿ ರಾಷ್ಟ್ರಕೂಟರ ಸಾಮಂತರು ದಳಪತಿಗಳೂ ಅಧಿಕಾರಿಗಳು ಜೈನರಾಗಿದ್ದರು. ರಾಜ ಪ್ರತಿನಿಧಿಯಾಗಿದ್ದವರು ಜೈನರಾಗಿದ್ದರು ಕರ್ನಾಟಕದ ಜನಸಂಖ್ಯೆಯಲ್ಲಿ ಮೂರನೆಯ ಒಂದು ಭಾಗದಷ್ಟು ಜೈನರಿದ್ದರಂತೆ ಹಾಗೂ ಮಾನ್ಯಖೇಟದಲ್ಲಿ ಹದಿನಾಲ್ಕು ಬಸದಿಗಳಿದ್ದವೆಂದೂ ಹದಿನಾಲ್ಕು ದೊಡ್ಡ ಪಟ್ಟಿಕೆಗಳ ತುಂಬ ಧರ್ಮಗ್ರಂಥಗಳಿದ್ದವೆಂದು ಹೇಳಲಾಗಿದೆ. ವೈದಿಕ ದೇವಾಲಯಗಳಲ್ಲಿದ್ದಂತೆ ಜೈನ ಬಸದಿಗಳಲ್ಲಿಯೂ ವೈಭವದಿಂದ ಪೂಜೆ-ಪುನಸ್ಕಾರಗಳು ನಡೆಯುತ್ತಿದ್ದವು. ಒಂದನೇ ಅಮೋಘವರ್ಷ ಕರ್ಕನೂ, ಜೈನಮಂದಿರಗಳಿಗಾಗಿ ಜಮೀನನ್ನು ದತ್ತಿ ಬಿಟ್ಟಿದ್ದರು. ಜೈನ ಬಸದಿಗಳಲ್ಲಿ ಆಹಾರ, ಔಷಧಿಗಳನ್ನು ಬಡಬಗ್ಗರಿಗೆ ಹಂಚುತ್ತಿದ್ದರು. ಇದೇ ರೀತಿ ಪರಿಸರದಲ್ಲಿ ರಾಷ್ಟ್ರಕೂಟರ ನಂತರ ಅಧಿಕಾರಕ್ಕೆ ಬಂದ ಕಲ್ಯಾಣದ ಚಾಲುಕ್ಯರು ಸಹ ಜೈನ ಬಸದಿಗಳನ್ನು ಮತ್ತು ಜೈನ ಬಸದಿಗಳಿಗೆ ದಾನ ಧರ್ಮವನ್ನು ಮಾಡುವುದರ ಮೂಲಕ ಹಾಗೂ ಜೈನ ಬಸದಿಗಳನ್ನು ನಿರ್ಮಾಣ ಮಾಡಿರುವುದರಿಂದ ರಾಷ್ಟ್ರಕೂಟರ ಆಳ್ವಿಕೆಯ ನಂತರದಲ್ಲಿಯು ಪ್ರಸ್ತುತ ಪರಿಸರದಲ್ಲಿ ಉನ್ನತ ಸ್ಥಾನದಲ್ಲಿರಲು ಕಲ್ಯಾಣದ ಚಾಲುಕ್ಯರು ಶ್ರಮಿಸಿದರು. ಈ ರೀತಿಯ ಕಾರಣಗಳಿಂದ ಗಂಗರ ಕಾಲದಂತೆ ರಾಷ್ಟ್ರಕೂಟರು ಮತ್ತು ಕಲ್ಯಾಣದ ಚಾಲುಕ್ಯರ ಆಳ್ವಿಕೆಯಲ್ಲಿ ಅತ್ಯಂತ ಪ್ರಖ್ಯಾತಿಯನ್ನು ಪಡೆದ ಧರ್ಮ ಜೈನ ಧರ್ಮವಾಗಿತ್ತು.[೧೩]

**ಇಸ್ಲಾಂ ಧರ್ಮ**

ಪ್ರಸ್ತುತ ಪರಿಸರದಲ್ಲಿ ಇಸ್ಲಾಂ ಧರ್ಮವು ಕೂಡ ಕೊಂಕಣ ತೀರದಲ್ಲಿ ತನ್ನ ಅಸ್ತಿತ್ವವನ್ನು ಕಂಡುಕೊಂಡಿತ್ತು. ರಾಷ್ಟ್ರಕೂಟ ಅರಸರು, ಅರಬ್ಬರಿಗೆ ಪಶ್ಚಿಮ ಕರಾವಳಿಯಲ್ಲಿ ಬಂದಿಳಿಯಲು ಅವಕಾಶ ಮಾಡಿಕೊಟ್ಟರು. ಅಲ್‌ಮಸೂದ್ ಮತ್ತು ಸುಲೇಮಾನ್‌ರವರು ರಾಷ್ಟ್ರಕೂಟರ ಸಾಮ್ರಾಜ್ಯಕ್ಕೆ ಮೊದಲನೇ ಅಮೋಘವರ್ಷನ ಆಳ್ವಿಕೆ ಕಾಲಕ್ಕೆ ಭೇಟಿ ನೀಡಿದರು ಇಂತಹ ಹಲವು ಕಾರಣಗಳಿಂದ ರಾಷ್ಟ್ರಕೂಟರು ಮುಸಲ್ಮಾನರನ್ನು ಗೌರವದಿಂದ ಕಂಡಿರುವುದು ತಿಳಿದುಬರುತ್ತದೆ. ಈ ಪರಿಸರದಲ್ಲಿ ಮಸೀದಿಗಳನ್ನು ಕಟ್ಟಲು ಅವಕಾಶ ಮಾಡಿಕೊಟ್ಟರು ಎಂಬುವುದಾಗಿ ರಾಷ್ಟ್ರಕೂಟರು ಉದಾರ ಧಾರ್ಮಿಕ ಸಹಿಷ್ಣುತೆಯನ್ನು ಕೊಂಡಾಡಿದ್ದಾರೆ.[೧೪] ಇವರಷ್ಟೆ ಅಲ್ಲದೆ ರಾಷ್ಟ್ರಕೂಟರ ನಂತರ ಅಧಿಕಾರಕ್ಕೆ ಕೆಲವು ಕಾಲದವರೆಗೆ ಆಳ್ವಿಕೆ ನಡೆಸಿದ ಕಲ್ಯಾಣ ಚಾಲುಕ್ಯರ ಕಾಲದಲ್ಲೂ ಇಸ್ಲಾಂ ಧರ್ಮಕ್ಕೆ ಪ್ರೋತ್ಸಾಹಿಸಿದ್ದರಿಂದ ಮಾನ್ಯಖೇಟ ಪರಿಸರದಲ್ಲಿ ಕ್ರಿ.ಶ. ೮ನೇ ಶತಮಾನದಿಂದ ೧೨ನೇ ಶತಮಾನದ ಕಾಲಾವಧಿಯಲ್ಲಿಯು ಇಸ್ಲಾಂ ಮತ ಜಾರಿಯಲ್ಲಿತ್ತು ಎಂಬುವುದು

ತಿಳಿದುಬರುತ್ತದೆ. ತದನಂತರ ಬಹುಮನಿಯರ ಹಾಗೂ ನಿಜಾಮರ ಆಳ್ವಿಕೆಯ ಸ್ಮಾರಕಗಳು ಸಹ ಈ ಪ್ರಸ್ತುತ ಪರಿಸರದಲ್ಲಿ ಕಾಣಬಹುದು.

**ಶಿಕ್ಷಣ**

ರಾಷ್ಟ್ರಕೂಟರು ಮತ್ತು ಕಲ್ಯಾಣದ ಚಾಲುಕ್ಯರು ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಿರುವುದು ಕಂಡುಬರುತ್ತದೆ. ರಾಷ್ಟ್ರಕೂಟರು ಸಾಮ್ರಾಜ್ಯದ ವಿಸ್ತರಣೆಯ ಜೊತೆಗೆ ಶಿಕ್ಷಣವು ಕೊಡುವುದು ಸಹ ಒಂದು ಅತ್ಯಂತ ಪ್ರಮುಖವಾದದ್ದು ತಿಳಿದ ಅರಸರು ಶಿಕ್ಷಣದ ಬೆಳವಣಿಗೆಗೆ ಪ್ರೋತ್ಸಾಹವನ್ನು ನೀಡಿದರು. ಇವರ ಆಳ್ವಿಕೆ ಕಾಲದಲ್ಲಿಯೇ ಅಗ್ರಹಾರಗಳು, ಮಠಗಳು, ಶೈಕ್ಷಣಿಕ ಕೇಂದ್ರಗಳು ಸ್ಥಾಪನೆಯಾದವು. ಪ್ರಸ್ತುತ ಅಧ್ಯಯನ ಪರಿಸರದಲ್ಲಿನ ಚಿತ್ತಾಪೂರ ತಾಲೂಕಿನ ನಾಗಾವಿಯು ಇವರ ಕಾಲದ ಪ್ರಮುಖ ವಿದ್ಯಾಕೇಂದ್ರವಾಗಿತ್ತು.[೧೫] ಇದೇ ಪರಿಸರದ ದಿಗ್ಗಾವಿ ಕೂಡ ಒಂದು ಅಗ್ರಹಾರವಾಗಿದ್ದು ಶಿಕ್ಷಣ ನೀಡುವ ಕೇಂದ್ರವಾಗಿತ್ತು. ಎಲ್ಲಾದಕ್ಕಿಂತ ವಿಶೇಷವಾಗಿ, ಮಾನ್ಯಖೇಟವು ಸಹ ವಿದ್ಯಾಕೇಂದ್ರವಾಗಿತ್ತು. ರಾಷ್ಟ್ರಕೂಟರ ಕಾಲದಲ್ಲಿ ಪ್ರಾರಂಭವಾದ ಈ ಸ್ಥಳಗಳನ್ನು ಮುಂದೆ ರಾಷ್ಟ್ರಕೂಟರ ನಂತರ ಮಾನ್ಯಖೇಟದಲ್ಲಿ ಅಧಿಕಾರಕ್ಕೆ ಬಂದಂತಹ ಕಲ್ಯಾಣದ ಚಾಲುಕ್ಯರು ಸಹ ಇವನ್ನು ಪ್ರೋತ್ಸಾಹಿಸುವುದರ ಮೂಲಕ ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಶಿಕ್ಷಣದ ಬೆಳವಣಿಗೆಗಳಿಗೆ ಅನುಕೂಲವಾಗಿ ಮುಂದೆ ಸಾಹಿತ್ಯದ ಬೆಳವಣಿಗೆಯಾಗಲು ಶಿಕ್ಷಣವೆ ಮೂಲ ಕಾರಣವೆನ್ನಲಾಗಿದೆ.

ಒಂದು ಪರಿಸರದಲ್ಲಿ ಸಾಹಿತ್ಯವು ಬೆಳೆಯಬೇಕಾದರೆ ಶಿಕ್ಷಣವೆ ಪ್ರಾಮುಖ್ಯತೆ ಪಡೆದಿರುತ್ತದೆ. ಈ ಕಾರಣದಿಂದ ರಾಷ್ಟ್ರಕೂಟರು ಮತ್ತು ಕಲ್ಯಾಣದ ಚಾಲುಕ್ಯರು ರಾಜಕೀಯ ಮತ್ತು ಸಾಂಸ್ಕೃತಿಕ ಅಂಶಗಳ ಜೊತೆಗೆ ಶಿಕ್ಷಣಕ್ಕೂ ಸಹ ಒಂದು ವಿಶೇಷ ಪ್ರೋತ್ಸಾಹವನ್ನು ನೀಡಿರುವುದರಿಂದ ಸಾಹಿತ್ಯವು ಮತ್ತು ಕನ್ನಡ ಸಂಸ್ಕೃತಿಯನ್ನು ಅರಿತುಕೊಂಡು, ಶಿಕ್ಷಣ, ಸಂಸ್ಕೃತಿ ಹಾಗೂ ಸಾಹಿತ್ಯವು ಈ ಪರಿಸರದಲ್ಲಿ ಉನ್ನತ ರೀತಿಯಲ್ಲಿ ಬೆಳೆಯಿತು ಎಂದು ಹೇಳಬಹುದಾಗಿದೆ. ವಿಶೇಷವಾಗಿ ಈ ಪರಿಸರದ ಹಂದರಕಿಯು ಐತಿಹಾಸಿಕ ತಾಣವಾಗಿದೆ. ಈ ಗ್ರಾಮವು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಶಿಕ್ಷಣ ನೀಡುವ ಕೇಂದ್ರವಾಗಿ ಪ್ರಸಿದ್ಧಿ ಹೊಂದಿತ್ತು. ಇಲ್ಲಿ ಕನ್ನಡ ಪಾಠ ಶಾಲೆ ವ್ಯವಸ್ಥಿತವಾಗಿ ನಡೆಯುತ್ತಿತ್ತು. ಕ್ರಿ.ಶ. ೧೧೧೮ರ ಇಲ್ಲಿಯ ಶಾಸನದ ಪ್ರಕಾರ ದೇವರಿಗೆ ಭೊಗಕ್ಕಂ, ಪೂಜಂಗಂ, ತಪೋಧನ ರಾಧಾನಕಂ ಕನ್ನಡ ವಾಕ್ಯಾರ್ ಓದುವ ವಿದ್ಯಾರ್ಥಿ ಮಣಿಗಳಿಗೆ ಓದಿಸುವ ಉಪಾಧ್ಯಾಯಗಂ ಎಂಬ ಶಾಸನದ ನುಡಿಗಳೆ ಸಾಕ್ಷಿಯಾಗಿವೆ. ಅಂದು ಕನ್ನಡ ಭಾಷೆಗೆ ಕೊಟ್ಟ ಪ್ರಾಧಾನ್ಯತೆಯನ್ನು ತಿಳಿಸಿಕೊಡುತ್ತದೆ. ಮತ್ತೊಂದು ಸೇಡಂ ಕೂಡ ರಾಜಕೀಯ ಆಡಳಿತ ಘಟಕವಾಗಿ ಅಗ್ರಹಾರದಂತಹ ಶಿಕ್ಷಣದ ಕೇಂದ್ರವಾಗಿತ್ತು.[೧೬]

**ಸಾಹಿತ್ಯ**

ಪ್ರಸ್ತುತ ಅಧ್ಯಯನ ಪರಿಸರದಲ್ಲಿ ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರು ರಾಜಕೀಯ ಹಾಗೂ ಸಾಂಸ್ಕೃತಿಕ ಕೊಡುಗೆಗಳಿಗೆ ನೀಡಿದಷ್ಟು ಪ್ರೋತ್ಸಾಹವನ್ನು ಕರ್ನಾಟಕದ ಬೇರೆ ಯಾವ

ಅರಸು ಮನೆತನ ನೀಡಿರಲಿಲ್ಲ. ಆದರೆ ಇವರು ಸಾಹಿತ್ಯದ ಬೆಳವಣಿಗೆಗೆ ವಿಶೇಷವಾದ ಪ್ರೋತ್ಸಾಹ ಮತ್ತು ಅರಸರೆ ಸಾಹಿತ್ಯ ವಿದ್ವಾಂಸರು ಆಗಿರುವುದು ಕಂಡುಬರುತ್ತದೆ. ಸಾಂಸ್ಕೃತಿಕ ಮತ್ತು ಸಾಹಿತ್ಯದ ದೃಷ್ಟಿಯಿಂದ ರಾಷ್ಟ್ರಕೂಟರ ಮತ್ತು ಕಲ್ಯಾಣದ ಚಾಲುಕ್ಯರ ಆಳ್ವಿಕೆಯ ಕಾಲದಲ್ಲಿ ಅನೇಕ ಹೊಸ ರೀತಿಯ ಒಲವುಗಳು ತಲೆದೋರಿದವು. ವೈದಿಕ ಬ್ರಾಹ್ಮಣ ಸಂಸ್ಕೃತಿಯ ಜೊತೆ ಜತೆಗೆ ಜೈನಧರ್ಮವು ಸರಿಸಮವಾಗಿ ಬೆಳೆಯಿತು. ಅದೇ ರೀತಿ ಸಾಹಿತ್ಯ ಕ್ಷೇತ್ರದಲ್ಲಿ ಸಂಸ್ಕೃತ ಭಾಷೆಗೆ ಸರಿಸಮವಾಗಿ ಕನ್ನಡ ಭಾಷೆ ಪೋಷಿಸಲ್ಪಟ್ಟಿತ್ತು. ಇವರ ಕಾಲದಲ್ಲಿ ಸಂಸ್ಕೃತ ಸಾಹಿತ್ಯವು ಪ್ರಬುದ್ಧಮಾನಕ್ಕೆ ಬಂದಿತು. ಈ ದೃಷ್ಟಿಯಿಂದ ಈ ಕಾಲವನ್ನು ಸಮ್ಮಿಶ್ರ ಕಾಲವೆಂದು ಕರೆಯಬಹುದು. ಭಾರತದ ಅನೇಕ ಕಡೆ ರಾಜಕೀಯ ಪ್ರಭಾವವು ಬೀರಿದ ರಾಷ್ಟ್ರಕೂಟರು ಸಂಸ್ಕೃತಿ ಸಾಹಿತ್ಯಕ್ಕೆ ಹಿಂದಿನ ನಾಲ್ಕು ಸಮಕಾಲೀನ ಅರಸು ಮನೆತನಗಳಂತೆಯೇ ಇವರು ಕೂಡ ಕವಿಗಳಿಗೆ ರಾಜಾಶ್ರಯ ಕೊಟ್ಟು ಪೋಷಿಸಿದರು. ರಾಷ್ಟ್ರಕೂಟರ ನಂತರ ಆಳ್ವಿಕೆ ನಡೆಸಿದ ಕಲ್ಯಾಣದ ಚಾಲುಕ್ಯರು ಸಹ ರಾಷ್ಟ್ರಕೂಟರಂತೆ ಸಂಸ್ಕೃತ ಸಾಹಿತ್ಯಕ್ಕೆ ಪ್ರೋತ್ಸಾಹ ನೀಡಿರುವುದರಿಂದ ಈ ಎರಡು ಅರಸು ಮನೆತನಗಳ ಕಾಲದಲ್ಲಿ ಮಾನ್ಯಖೇಟ ಪರಿಸರದ ಸುತ್ತಮುತ್ತ ಸಾಹಿತ್ಯವು ಸಮೃದ್ಧವಾಗಿ ಬೆಳೆಯಿತು. ರಾಷ್ಟ್ರಕೂಟರ ಕಾಲದಲ್ಲಿ ಕನ್ನಡ ಹಾಗೂ ಸಂಸ್ಕೃತದಲ್ಲಿ ಅತ್ಯುತ್ತಮ ಗ್ರಂಥಗಳು ರಚನೆಯಾದವು.[೧೭]

ಸಾಹಿತ್ಯ ಮತ್ತು ಸಂಸ್ಕೃತದ ಬೆಳವಣಿಗೆಯ ಹಿನ್ನೆಲೆಯನ್ನು ನೋಡಿದಾಗ ಮಾನ್ಯಖೇಟದ ರಾಷ್ಟ್ರಕೂಟರು ಸಾಹಿತ್ಯ ಮತ್ತು ಸಂಸ್ಕೃತದಲ್ಲಿ ಅಮೋಘವಾದ ಕಾಣಿಕೆಯನ್ನು ಸಲ್ಲಿಸಿದೆ. ರಾಷ್ಟ್ರಕೂಟರ ಚಕ್ರವರ್ತಿಗಳಲ್ಲಿ ಪ್ರಸಿದ್ಧರು ಆದ ಅಮೋಘವರ್ಷ ನೃಪತುಂಗನು ಅತಿಶಯದವಳ, ನರಲೋಕ, ಚಂದ್ರ, ಕೃತಕೃತ್ಯ ಮಲ್ಲವಲ್ಲಭ, ಪರಮ ಸರಸ್ವತಿ, ತೀರ್ಥಾವತಾರ ಇವೇ ಮೊದಲಾದ ಬಿರುದುಗಳನ್ನು ಪಡೆದವರು. ಕನ್ನಡದಲ್ಲಿ ಕವಿರಾಜ ಮಾರ್ಗವೆಂಬ ಗ್ರಂಥವನ್ನು ಮತ್ತು ಸಂಸ್ಕೃತದಲ್ಲಿ ಪ್ರಶ್ನೋತ್ತರ ಮಾಲೆಯೆಂಬ ಗ್ರಂಥವನ್ನು ರಚಿಸಿದವರು. ಮತ್ತು ಕನ್ನಡ ಭಾಷಾ ಪ್ರೇಮಿಗಳು ಕನ್ನಡ ಭಾಷಾಭಿಮಾನಿಗಳು ಆದ ನೃಪತುಂಗ ಚಕ್ರವರ್ತಿ ಈ ರಾಷ್ಟ್ರಕೂಟರ ಸಾಮ್ರಾಜ್ಯದ ನಿಜವಾದ ಸ್ಥಾಪಕರು ಹಾಗೆ ಇವರು ಮಾನ್ಯಖೇಟವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ೬೩ ವರ್ಷಗಳ ಕಾಲ ವೈಭವದಿಂದ ರಾಜ್ಯಭಾರ ಮಾಡಿದವರು ಆಗಿದ್ದಾರೆ. ಇವರ ಕವಿರಾಜಮಾರ್ಗ ಗ್ರಂಥವು ಕನ್ನಡ ನಾಡು ನುಡಿಗಳ ಮೇಲೆ ಹೆಚ್ಚಿನ ಬೆಳಕನ್ನು ಚೆಲ್ಲಿರುವುದಾಗಿದೆ.

ಮಾನ್ಯಖೇಟದ ಸಾಹಿತ್ಯವನ್ನು ಗಮನಿಸಿದಾಗ ಮಧ್ವಾಚಾರ್ಯರ ಗ್ರಂಥಗಳಿಗೆ ಭಾಷ್ಯವನ್ನು ಬರೆದು ಟೀಕಾಚಾರ್ಯರೆಂದು ಪ್ರಸಿದ್ಧಗೊಂಡವರು ಮತ್ತು ಪ್ರಮಾಣ ಪದ್ಧತಿ, ವಾದದಲ್ಲಿ ಎಂಬ ಎರಡು ಸ್ವಾತಂತ್ರ್ಯ ಗ್ರಂಥಗಳನ್ನು ಬರೆದವರು ಆದ ಜಯತೀರ್ಥರು ಇದೆ ಊರಿನವರಾಗಿದ್ದಾರೆ. ಅವರ ಬೃಂದಾವನವು ಇಂದು ಇದೆ ಊರಿನ ಕಾಗಿಣಾ ನದಿ ದಂಡೆಯ ಮೇಲಿದೆ. ಅವರ ಜನ್ಮದಿನೋತ್ಸವವನ್ನು ಪ್ರತಿವರ್ಷವೂ ಆಚರಿಸಲ್ಪಡುತ್ತದೆ.[೧೮] ಇಂದು ಕೂಡ

ಇದು ವಿಶೇಷತೆಯಿಂದ ಕೂಡಿದೆ. ಜಯತೀರ್ಥರ ಜನ್ಮದಿನೋತ್ಸವವು ಪ್ರತಿ ವರ್ಷ ಜಾತ್ರೆಯಂತೆ ವಿಜೃಂಭಣೆಯಿಂದ ನಡೆಯುತ್ತದೆ. ಆಂಧ್ರ, ಮಹಾರಾಷ್ಟ್ರದಿಂದ ಬ್ರಾಹ್ಮಣ ವರ್ಗದಿಂದ ನಡೆಯುತ್ತದೆ. ಜಯತೀರ್ಥರು ಅಲ್ಲದೆ ಅಪಭ್ರಂಶ ಕವಿಗಳು ಎಂದು ಪ್ರಸಿದ್ಧಗೊಂಡವರು. ರಾಷ್ಟ್ರಕೂಟರ ೩ನೆಯ ಕೃಷ್ಣನ ಮಂತ್ರಿಗಳ ಆಶ್ರಯದಲ್ಲಿ ಮಹಾಪುರಾಣ, ಜಸಹ ಚರಿತೆಯು ನಯಕುಮಾರ ಚರಿಯು ಎಂಬ ಗ್ರಂಥಗಳನ್ನು ರಚಿಸಿದವರು ಆದ ಪುಷ್ಪದಂತರೂ ಸಹ ಮಾನ್ಯಖೇಟದವರೆ ಆಗಿದ್ದಾರೆ. ಶಾಂತಿಪುರಾಣ ಮತ್ತು ಜಿನಾಕ್ಷರ ಮಾಲೆ ಎಂಬ ಗ್ರಂಥಗಳನ್ನು ಬರೆದವರು. ಕವಿಚಕ್ರವರ್ತಿ, ಸವಕದೇಶ ಕವೀಂದ್ರ, ಸೌಜನ್ಯ ಕಂದಾಂಕುರ ಎಂಬ ಬಿರುದುಗಳನ್ನು ಹೊಂದಿದವರು. ಹಾಗೂ ಕವಿರತ್ನತ್ರಯರಲ್ಲಿ ಒಬ್ಬರಾದ ರನ್ನನು ಇದೇ ಪರಿಸರದವರಾಗಿದ್ದಾರೆ. ೩ನೇ ಕೃಷ್ಣನ ಆಸ್ಥಾನದ ಕವಿಗಳು ಆದ ಪೊನ್ನ ಇದೇ ಮಾನ್ಯಖೇಟ ರಾಷ್ಟ್ರಕೂಟರ ಆಸ್ಥಾನಕ್ಕೆ ಸೇರಿದವರಾಗಿದ್ದಾರೆ. ಇಂತಹ ಕೊಡುಗೆಗಳ ಮೂಲಕ ಕನ್ನಡ ಮತ್ತು ಸಂಸ್ಕೃತ ರಚನೆಯಲ್ಲಿ ಪ್ರಮುಖ ಪಾತ್ರವಹಿಸಿದಂತಹ ಕೀರ್ತಿ ರಾಷ್ಟ್ರಕೂಟ ಸಾಮ್ರಾಜ್ಯದ ಅರಸರುಗಳಿಗೆ ಮತ್ತು ರಾಷ್ಟ್ರಕೂಟರ ನಂತರದಲ್ಲಿ ಮಾನ್ಯಖೇಟವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದ ಕಲ್ಯಾಣದ ಚಾಲುಕ್ಯರ ಆರಂಭದ ಅರಸರುಗಳಿಗೆ ಸಲ್ಲುತ್ತದೆ. ಕ್ರಿ.ಶ. ೮ನೇ ಶತಮಾನದಿಂದ ೧೨ನೇ ಶತಮಾನದ ಕಾಲಾವಧಿಯಲ್ಲಿ ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಅತ್ಯುನ್ನತ ಮಟ್ಟದಲ್ಲಿ ಸಾಹಿತ್ಯ ಬೆಳೆದಿರುವುದರಿಂದ ಮತ್ತು ಕವಿಗಳಿಗೆ ಆಶ್ರಯ ನೀಡಿ ಪ್ರೋತ್ಸಾಹಿಸಿರುವುದರಿಂದಲೇ ಕನ್ನಡ ಸಾಹಿತ್ಯವು ೧೨೦೦ ವರ್ಷಗಳಿಂದ ಬೆಳೆದು ಬಂದಿದ್ದು, ಅತ್ಯುನ್ನತ ಸ್ಥಿತಿಗೆ ತಲುಪಲು ಕಾರಣವಾಗಿ ಇಂದು ಕನ್ನಡ ಸಾಹಿತ್ಯದಲ್ಲಿ ೮ ಸಾಹಿತಿಗಳಿಗೆ ರಾಷ್ಟ್ರಪ್ರಶಸ್ತಿಯನ್ನು ಪಡೆದಿರುವುದಕ್ಕೆ ಸಾಹಿತ್ಯದ ಬೆಳವಣಿಗೆಗೆ ಅಂದು ರಾಷ್ಟ್ರಕೂಟರು ಹಾಗೂ ಕಲ್ಯಾಣದ ಚಾಲುಕ್ಯರು ನೀಡಿದಂತಹ ಕನ್ನಡ ಸಂಸ್ಕೃತಿ ಮತ್ತು ಕನ್ನಡ ಸಾಹಿತ್ಯಕ್ಕೆ ನೀಡಿದ ಪ್ರೋತ್ಸಾಹವೇ ಪ್ರಮುಖ ಕಾರಣ ಎಂಬುವುದು ತಿಳಿದುಬರುವ ಸಂಗತಿಯಾಗಿದೆ.[೧೯] ಹೀಗೆ ಕನ್ನಡ ನಾಡು ನುಡಿಗೆ ಸಾಹಿತ್ಯಕ್ಕೆ ಕೊಡುಗೆ ನೀಡಿದವರಲ್ಲಿ ರಾಷ್ಟ್ರಕೂಟರು ಹಾಗೂ ಕಲ್ಯಾಣದ ಚಾಲುಕ್ಯರ ಪಾತ್ರ ಪ್ರಮುಖವಾಗಿದೆ.

**ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರ ಕಾಲದ ಕವಿಗಳು**[೨೦]

| **ಕವಿಗಳು** | | **ಕೃತಿಗಳು** |
|---|---|---|
| ಅಮೋಘವರ್ಷ | : | ಪ್ರಶ್ನೋತ್ತರ ರತ್ನಮಾಲೆ |
| ಶ್ರೀ ವಿಜಯ (ನೃಪತುಂಗ) | : | ಕವಿರಾಜ ಮಾರ್ಗ |
| ಶಿವಕೋಟ್ಯಚಾರ್ಯ | : | ವಡ್ಡಾರಾಧನೆ |
| ತ್ರಿವಿಕ್ರಮ | : | ನಳಚಂಪು |
| ಆಲಾಯುಧ | : | ಗಣಿತಸಾರ ಸಂಗ್ರಹ |
| ಪಂಪ | : | ಆದಿಪುರಾಣ ಮತ್ತು ವಿಕ್ರಮಾರ್ಜುನ ವಿಜಯ |

ಪೊನ್ನ : ಶಾಂತಿ ಪುರಾಣ

ಜಿನಾಸೇನಾಚಾರ್ಯ : ದವಳ ಮತ್ತು ಜಯದವಳ

ಗುಣಭದ್ರ : ಉತ್ತರ ಪುರಾಣ

**ಅಡಿ ಟಿಪ್ಪಣಿಗಳು**

೧. ರಾಮಲಿಂಗಪ್ಪ ಹೆಚ್., ೨೦೧೩, ಪ್ರಾಚೀನ ಭಾರತ (ಸಿಂಧೂ ನಾಗರಿಕತೆಯಿಂದ ೧೨೦೬), ಪು. ೨೭೯.

೨. ಸ್ಟೀವನ್ ಕ್ವಾಡ್ರಸ್, ೨೦೧೨, ಪ್ರಾಚೀನ ಭಾರತದ ಇತಿಹಾಸ-೨, ಪು. ೬೯

೩. ಕರ್ನಾಟಕದ ಪರಂಪರೆ (ಸಂಪುಟ-೧), ೧೯೭೦, ಕನ್ನಡ ಮತ್ತು ಸಂಸ್ಕೃತ ಇಲಾಖೆ, ಬೆಂಗಳೂರು, ಪು. ೨೯೦.

೪. ಸ್ಟೀವನ್ ಕ್ವಾಡ್ರಸ್, ೨೦೧೨, ಪೂರ್ವೋಕ್ತ, ಪು. ೬೯.

೫. ರಂಗಸ್ವಾಮಯ್ಯ ಜಿ.ಆರ್., ೨೦೧೨, ಪ್ರಾಚೀನ ಭಾರತ, ಪು. ೩೧೩.

೬. ಸ್ಟೀವನ್ ಕ್ವಾಡ್ರಸ್, ೨೦೧೨, ಪೂರ್ವೋಕ್ತ, ಪು. ೭೦.

೭. ನಂಜುಂಡಸ್ವಾಮಿ ಎ.ಎಸ್., ಪೂರ್ವೋಕ್ತ, ಪು. ೧೦೦.

೮. ಸೂರ್ಯನಾಥ ಕಾಮತ್, ೧೯೭೩, ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಪು. ೭೬.

೯. ರಾಮಲಿಂಗಪ್ಪ ಹೆಚ್., ಪೂರ್ವೋಕ್ತ, ಪು. ೨೮೧.

೧೦. ಪಾಟೀಲ್ ಎಂ.ಬಿ. (ಸಂ), ೧೯೯೭, ಗುಲ್ಬರ್ಗಾ ಜಿಲ್ಲೆ ಗ್ಯಾಸೆಟಿಯರ್, ಪು. ೪೭.

೧೧. ಕರ್ನಾಟಕದ ಪರಂಪರೆ (ಸಂಪುಟ-೧), ಪೂರ್ವೋಕ್ತ, ಪು. ೨೯೦.

೧೨. ನಂಜುಂಡಸ್ವಾಮಿ ಎ.ಎಸ್., ಪೂರ್ವೋಕ್ತ, ಪು. ೮೯.

೧೩. ಅದೇ, ಪು. ೮೯-೯೦.

೧೪. ರಾಮಲಿಂಗಪ್ಪ ಹೆಚ್., ಪೂರ್ವೋಕ್ತ, ಪು. ೨೮೧.

೧೫. ಮಹದೇವ ಸಿ., ವಾಸುದೇವ ಬಡಿಗೇರ ಮತ್ತು ರಮೇಶನಾಯಕ, ೨೦೧೬, ಕರ್ನಾಟಕ ದೇವಾಲಯ ಕೋಶ. ಕಲಬುರಗಿ ಜಿಲ್ಲೆ, ಪು. ೨೧೭-೨೧೮.

೧೬. ಗೋಪಾಲ ಆರ್.(ಸಂ), ೨೦೦೭, ಗುಲ್ಬರ್ಗಾ ಜಿಲ್ಲೆಯ ಇತಿಹಾಸ & ಪುರಾತತ್ವ, ಪು.೫೪.

೧೭. ಅದೇ, ಪು. ೫೩.

೧೮. ಅದೇ, ಪು. ೫೩.

೧೯. ಸ್ಟೀವನ್ ಕ್ವಾಡ್ರಸ್, ೨೦೧೨, ಪೂರ್ವೋಕ್ತ, ಪು. ೬೭.

೨೦. ಅದೇ, ಪು. ೬೭-೬೮



# ಅಧ್ಯಾಯ: ಆರು

# ಸಮಾರೋಪ

ಮಾನ್ಯಖೇಟವು ಒಂದು ಇತಿಹಾಸ ಪ್ರಸಿದ್ಧ ಸ್ಥಳವಾಗಿದೆ. ಇದರ ಪ್ರಾಚೀನತೆಯನ್ನು ಶಿಲಾಯುಗ ಕಾಲದಿಂದಲೂ ಗುರುತಿಸಲಾಗಿದೆ. ಇಲ್ಲಿಯ ಭೌಗೋಳಿಕ ಲಕ್ಷಣಗಳು ಆದಿಮಾನವನಿಂದ ಮತ್ತು ಅನಂತರ ಕಾಲದ ಮಾನವನು ಸಂಘಟಿತವಾದ ಆಳ್ವಿಕೆ ನಡೆಸುವುದಕ್ಕೆ ಮೂಲ ಕಾರಣವಾಗಿದೆ. ಈ ಪರಿಸರದ ಸುತ್ತಲಿನ ಹಲವು ಗ್ರಾಮಗಳು ಈ ಸ್ಥಳದಷ್ಟೆ ಪ್ರಾಚೀನತೆಯನ್ನು ಪಡೆದುಕೊಂಡಿದ್ದನ್ನು ಕಾಣುತ್ತೇವೆ. ಈ ಪರಿಸರದಲ್ಲಿ ಕಂಡುಬರುವ ವಿವಿಧ ಕಾಲಘಟ್ಟದ ಪ್ರಾಚ್ಯ ಅವಶೇಷಗಳನ್ನು ಗುರುತಿಸಿ ವಿಶ್ಲೇಷಿಸುವ ಮೂಲಕ ಇಲ್ಲಿಯ ಇತಿಹಾಸವನ್ನು ತಿಳಿಸುವ ಪ್ರಯತ್ನ ಮಾಡಲಾಗಿದೆ. ಪ್ರತಿಯೊಂದು ಸ್ಮಾರಕದ ವಾಸ್ತು ಲಕ್ಷಣ ಮತ್ತು ಅವುಗಳೊಂದಿಗೆ ಜನಸಾಮಾನ್ಯರ ಭಾವನೆಗಳು ಅಂತರ್ಗತಗೊಂಡಿರುವ ವಿಷಯವನ್ನು ವಿವಿಧ ಮಗಲುಗಳಲ್ಲಿ ಪ್ರತಿಯೊಂದು ಅಧ್ಯಯಗಳಲ್ಲಿ ವಿವರಿಸುವ ಪ್ರಯತ್ನ ಮಾಡಲಾಗಿದೆ. ಆ ಮೂಲಕ ಈ ಪರಿಸರದ ಪೂರ್ಣ ಚರಿತ್ರೆಯನ್ನು ಕಂಡುಕೊಳ್ಳುವ ಪ್ರಯತ್ನ ಪ್ರಸ್ತುತ ಈ ಅಧ್ಯಯನದ್ದಾಗಿದೆ.

ಪ್ರಮುಖವಾಗಿ ಪ್ರಸ್ತುತ ಸಂಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಆರು ಅಧ್ಯಾಯಗಳನ್ನಾಗಿ ವಿಭಾಗಿಸಿಕೊಳ್ಳಲಾಗಿದೆ. ಮಾನ್ಯಖೇಟ ಪರಿಸರವು ಭೌಗೋಳಿಕ ಪರಿಸರ ಸ್ಥಳನಾಮ ಮತ್ತು ಸ್ಥಳ ಪುರಾಣಗಳು ಐತಿಹಾಸಿಕವಾಗಿ ಮಹತ್ವವನ್ನು ಪಡೆದಿವೆ. ಮಾನ್ಯಖೇಟವು ಪ್ರಾಚೀನ ಕಾಲದಲ್ಲಿ ಯಾವ ಹೆಸರನ್ನು ಪಡೆದಿತ್ತು, ಏಕೆ ಪಡೆದಿತ್ತು, ಇಂದಿನ ಹೆಸರೇನು? ಮುಂತಾದ ವಿಷಯಗಳನ್ನು ಶಾಸನಗಳ ಹಿನ್ನೆಲೆಯಲ್ಲಿ ಚರ್ಚಿಸಿದ್ದು, ಜೊತೆಗೆ ಸ್ಥಳಪುರಾಣದಲ್ಲಿ ಈ ಹಿಂದೆ ನಡೆದ ಘಟನೆಗಳು, ದೇವರ ಅವತಾರಗಳು ನಂತರ ಜೀವನ ವೃತ್ತಾಂತ, ಅರಸರ ಜೀವನ ವಂಶಾವಳಿಗಳನ್ನು ಐತಿಹ್ಯಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಇವೆಲ್ಲವೂ ಇತಿಹಾಸದ ರಚನೆಯಲ್ಲಿ ಸಹಾಯಕವಾಗಿವೆ.

ಇತಿಹಾಸ ಪೂರ್ವಕಾಲ ಮತ್ತು ಮಧ್ಯಕಾಲೀನ ಚರಿತ್ರೆಯ ರಚನೆ ಆರಂಭಗೊಂಡಿದ್ದು ೧೯-೨೦ನೇ ಶತಮಾನಗಳಲ್ಲಿ. ದೇವಾಲಯ, ಶಾಸನ ಶಿಲ್ಪಗಳು ಮತ್ತು ಇತ್ಯಾದಿ ವೈವಿಧ್ಯಗಳ ಸಾಂಸ್ಕೃತಿಕ ಚರಿತ್ರೆಯನ್ನು ರಚನೆ ಮಾಡಲಾಯಿತು. ಆ ಚರಿತ್ರೆ ರಚನೆಗೆ ತಮ್ಮದೇ ಆದ

ಕೊಡುಗೆಯನ್ನು ರಾಷ್ಟ್ರಕೂಟರು ಹಾಗೂ ಕಲ್ಯಾಣದ ಚಲುಕ್ಯರು ನೀಡಿದ್ದಾರೆ. ಈ ಪ್ರದೇಶದಲ್ಲಿ ಅವರ ಚರಿತ್ರೆಯನ್ನು ಆಧಾರಗಳಿಂದ ಪುನರ್ ರಚನೆಯ ಕಾರ್ಯ ಮಾಡಲಾಗಿದೆ.

ಪ್ರಸ್ತುತ ಅಧ್ಯಯನದ ಈ ಮಾನ್ಯಖೇಟ ಪರಿಸರವು ಮೌರ್ಯರು, ಶಾತವಾಹನರು, ಬಾದಾಮಿ ಚಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಲುಕ್ಯರು, ಕಲಚೂರಿಗಳು, ಹೈಹಯರು, ಬಹುಮನಿಯರು, ವಿಜಯನಗರದ ಅರಸರು, ಗೋಲ್ಕೊಂಡದ ಕುತುಬ್‌ಷಾಹಿಗಳು, ಹೈದ್ರಾಬಾದ್ ನಿಜಾಮರು ಹಾಗೂ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟ ಪರಿಸರವು ಮಾನ್ಯಖೇಟದ್ದಾಗಿದೆ. ಇವರ ಕಾಲದಲ್ಲಿ ಈ ಪ್ರದೇಶವು ವಿಸ್ತೀರ್ಣಗೊಂಡು ರಾಜಕೀಯ ಮಾನ್ಯತೆಯನ್ನು ಪಡೆದಿತ್ತು. ಇಂತಹ ಕಾರಣದಿಂದ ಕರ್ನಾಟಕ ಇತಿಹಾಸಕ್ಕೆ ಮಾತ್ರವಲ್ಲದೆ ಭಾರತದ ಇತಿಹಾಸದಲ್ಲಿ ತಮ್ಮದೇ ಆದ ಕೊಡುಗೆ ನೀಡಿರುತ್ತಾರೆ.

ದೇವಾಲಯಗಳಿಗೆ ಸಂಬಂಧಿಸಿದಂತೆ ಅವುಗಳ ಉಗಮ ಮತ್ತು ವಿಕಾಸವನ್ನು ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ಪ್ರಸ್ತುತ ವ್ಯಾಪ್ತಿಯಲ್ಲಿ ನಿರ್ಮಿಸಿರುವ ರಾಷ್ಟ್ರಕೂಟ ಮತ್ತು ಕಲ್ಯಾಣ ಚಲುಕ್ಯರ ಕಾಲದ ದೇವಾಲಯಗಳು ಪ್ರಮುಖವೆನಿಸಿವೆ. ಅಲಂಕಾರಿಕವಾಗಿ ವಾಸ್ತುಶೈಲಿಯ ದೃಷ್ಟಿಯಿಂದ ಒರಟಾಗಿ ಕಂಡರೂ ವೈಶಾಲ್ಯತೆಯ ದೃಷ್ಟಿಯಿಂದ ಪ್ರಾಮುಖ್ಯತೆ ಪಡೆದಿವೆ. ಗ್ರಾನೆಟ್ ಹಾಗೂ ಕೆಲವು ಬಳಪದ ಶಿಲೆಯನ್ನು ಬಳಸಿ ಇವರ ವಾಸ್ತು ಕೃತಿಗಳ ನಿರ್ಮಾಣಗೊಂಡಿರುವುದರಿಂದ ಹೆಚ್ಚಿನ ಅಲಂಕರಣೆಗಳನ್ನು ಮಾಡಲಾಗಿದೆ. ದೇವಾಲಯಗಳ ಕಂಬಗಳಲ್ಲಿ ಉಬ್ಬುಶಿಲ್ಪಗಳ ಕೆತ್ತನೆಯು ಪ್ರಮುಖವಾಗಿ ಕಾಣುತ್ತೇವೆ.

ದೇವಾಲಯಗಳಿಗೆ ಹೊಂದಿಕೊಂಡಂತೆ ಶೈವ, ವೈಷ್ಣವ, ಶಾಕ್ತ, ಇತರೆ ಪಂಥಕ್ಕೆ ಸಂಬಂಧಿಸಿದ ಹಾಗೂ ಜೈನ ಧರ್ಮಕ್ಕೆ ಸಂಬಂಧಿಸಿದ ಮೂರ್ತಿಶಿಲ್ಪಗಳಿವೆ. ಶೈವ ಸಂಪ್ರದಾಯಕ್ಕೆ ಶಿವನ ಸಂಕೇತವಾಗಿ ವಿವಿಧ ಬಗೆಯ ಬ್ರಹ್ಮಸೂತ್ರಗಳನ್ನೊಳಗೊಂಡ ಶಿವಲಿಂಗಗಳು ಮತ್ತು ನಂದಿ, ಗಣೇಶ, ವೀರಭದ್ರ ಹಾಗೂ ವೀರಭದ್ರೇಶ್ವರ ಶಿಲ್ಪಗಳು ಹಾಗೂ ವೈಷ್ಣವ ಧರ್ಮದ ಸಂಸ್ಥಾನಕ ವಿಷ್ಣುವಿನ ಶಿಲ್ಪಗಳಲ್ಲಿ ಕಾಳಗಿಯ ಸೂರ್ಯನಾರಾಯಣ ದೇವಾಲಯದ ಹೊರಭಿತ್ತಿಯಲ್ಲಿದೆ. ದಿಗ್ಗಾವಿ ಗ್ರಾಮದಲ್ಲಿ ಅನಂತಶಯನ ಶಿಲ್ಪವಿದೆ. ಶಾಕ್ತ ಸಂಪ್ರದಾಯಿಕ ಶಿಲ್ಪಗಳಲ್ಲಿ ಚಾಮುಂಡಿ, ಕಾಳಿ, ಚೌಡಮಾಯೆ ಅಲ್ಲೂರಿನ ದುರ್ಗೆ, ಮಹಿಷಮರ್ಧಿನಿ, ಸರಸ್ವತಿ ಮುಂತಾದ ಮೂರ್ತಿಶಿಲ್ಪಗಳು ಕಂಡುಬಂದಿವೆ. ಇತರೆ ಪಂಥಕ್ಕೆ ಸಂಬಂಧಿಸಿದಂತೆ ಮೂರ್ತಿಶಿಲ್ಪಗಳು ಸನ್ನತಿಯ ಬುದ್ಧನ ಶಿಲ್ಪ ಹಾಗೂ ಅಶೋಕನ ವ್ಯಕ್ತಿ ಚಿತ್ರಣದ ಫಲಕ ಪ್ರಾಚೀನವಾದವು.

ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯರ ಕಾಲದ ಶಾಸನಗಳು ಲಭ್ಯವಾಗಿವೆ. ಇವೆಲ್ಲವೂ ದಾನ ಶಾಸನಗಳಾಗಿವೆ. ಸ್ಮಾರಕ ಶಿಲ್ಪಗಳಲ್ಲಿ ವೀರಗಲ್ಲುಗಳೇ ಮೊದಲ ಸ್ಥಾನದಲ್ಲಿ ನಿಲ್ಲುತ್ತವೆ. ಮಾನ್ಯಖೇಟ ಪರಿಸರದಲ್ಲಿ ಒಂಭತ್ತಕ್ಕೂ ಹೆಚ್ಚು ವೀರಗಲ್ಲು ಮತ್ತು ಒಂದು ಒಕ್ಕೈ ಮಾಸ್ತಿಕಲ್ಲು ಒಂದು ವೀರ

ಮಾಸ್ತಿ ದೊರೆತಿದ್ದು, ಅವು ವಿವಿಧ ಹಂತಗಳನ್ನು ಹೊಂದಿವೆ. ಕಾಳಗಿಯ ನೀಲಕಂಠ ಕಾಳೇಶ್ವರ ದೇವಾಲಯದ ಹತ್ತಿರದ ವೀರಗಲ್ಲಿನಲ್ಲಿ ವೀರನು ನಿಂತಿರುವ ಭಂಗಿಯಲ್ಲಿದ್ದು ಎಡಗೈಯಲ್ಲಿ ಗುರಾಣಿ, ಬಲಗೈಯಲ್ಲಿ ಉದ್ದನೆಯ ಭರ್ಚಿಯನ್ನು ಹಿಡಿದು ಶತ್ರುವಿನೊಂದಿಗೆ ಹೋರಾಡುತ್ತಿರುವಂತೆ ಚಿತ್ರಿಸದೆ ಅದೊಂದು ವಿಶಿಷ್ಟ ವೀರಗಲ್ಲು ಎನಿಸಿದೆ. ಸನ್ನತಿ, ಮಾನ್ಯಖೇಟ, ಅಲ್ಲೂರು, ಸೇಡಂ, ನಾಗಾವಿ ಮತ್ತು ಕೋಟೆಗಳ ಕುರಿತು ಚರ್ಚಿಸಲಾಗಿದೆ.

ಪ್ರಸ್ತುತ ಅಧ್ಯಯನ ಪರಿಸರದ ಜನರು ಶಾಂತಿ ಮತ್ತು ಸಮೃದ್ಧಿಯಿಂದ ಕೂಡಿದ್ದು ಜನತೆ ಸುಸಂಸ್ಕೃತರು, ವಿದ್ಯಾವಿನಯ ಸಂಪನ್ನರಾಗಿದ್ದರು. ಅದು ಅಲ್ಲಿನ ಸಾಮಾಜಿಕ, ಆರ್ಥಿಕ, ಧಾರ್ಮಿಕ ವ್ಯವಸ್ಥೆ ಹಾಗೂ ಶಿಕ್ಷಣ ಸಾಹಿತ್ಯದ ಕೊಡುಗೆಯನ್ನು ಕುರಿತು ವಿವರಿಸಲಾಗಿದೆ.

ಮಾನ್ಯಖೇಟ ಪರಿಸರದ ಇತಿಹಾಸ ಮತ್ತು ಪುರಾತತ್ವ ಅಧ್ಯಯನವನ್ನು ಪುನರ್ರಚಿಸುವಲ್ಲಿ ಪ್ರಾಗಿತಿಹಾಸ ಕಾಲದ ಅವಶೇಷ, ಸ್ಮಾರಕ ಶಾಸನ ಸಾಹಿತ್ಯ ಆಕರಗಳು ಪ್ರಾದೇಶಿಕವಾಗಿ ಕನ್ನಡ ನಾಡಿನ ಸಾಂಸ್ಕೃತಿಕ ಇತಿಹಾಸ ವಿವಿಧ ಮುಖಗಳ ಅಧ್ಯಯನಕ್ಕೆ ಅಪಾರವಾದ ಕೊಡುಗೆಗಳನ್ನು ಸಲ್ಲಿಸಿರುವುದು ದೃಢವಾಗುತ್ತದೆ. ಇಷ್ಟೆಲ್ಲ ಮಹತ್ವದ ವಿಷಯಗಳನ್ನು ಹೊರಗೆಡುವ ಈ ಅವಶೇಷಗಳು ಇಂದು ವಿನಾಶದ ಅಂಚಿನಲ್ಲಿವೆ. ಕೆಲವು ನೈಸರ್ಗಿಕ ವಿಕೋಪಗಳಿಗೆ ತುತ್ತಾಗಿ ಕಾಲಗರ್ಭದಲ್ಲಿ ಲೀನವಾಗುತ್ತವೆ. ಇನ್ನು ಕೆಲವು ಸ್ಥಳೀಯ ಮೂಢನಂಬಿಕೆಗಳಿಗೆ ಆಹುತಿ ಆಗುತ್ತಿವೆ. ಈ ನಿಟ್ಟಿನಲ್ಲಿ ಸಂಬಂಧಿಸಿದ ಇಲಾಖೆಗಳು, ಸಂಘ ಸಂಸ್ಥೆಗಳು, ಜನರು ಇವುಗಳ ಸಂರಕ್ಷಣೆಯಡೆಗೆ ಗಮನಹರಿಸುವುದು ಅತ್ಯವಶ್ಯಕ.



## ಆಕರ ಗ್ರಂಥಗಳು

ಇಂದುಮತಿ ಪಾಟೀಲ, ೨೦೧೧, ಕಲಬುರ್ಗಿ ಜಿಲ್ಲಾ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆ.

ಕನ್ನಡ ವಿಷಯ ವಿಶ್ವಕೋಶ, ೨೦೦೯, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಕರ್ನಾಟಕ ಪರಂಪರೆ, ಸಂಪುಟ-೧, ೧೯೭೦, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅಭಿಮಾನಿ ಪ್ರಕಾಶನ, ಬೆಂಗಳೂರು.

ಕಲಬುರ್ಗಿ ಎಂ.ಎಂ., ೨೦೧೧, ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು, ಸ್ವಪ್ನ ಬುಕ್‌ಹೌಸ್, ಬೆಂಗಳೂರು.

ಕಡಪಟ್ಟಿ ಎಂ.ಎನ್., ಪ್ರಾಚೀನ ಕರ್ನಾಟಕದಲ್ಲಿ ಶೈವಧರ್ಮ (ಕರ್ನಾಟಕ ಸುವರ್ಣ ಮಹೋತ್ಸವ ಗ್ರಂಥಮಾಲೆ: ೨೨), ೨೦೦೮, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ.

ಕೊಸಾಂಬಿ ಡಿ.ಡಿ., ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರಿಕತೆ ಚಾರಿತ್ರಿಕ ರೂಪರೇಷೆ (ಅನುವಾದ: ವೇಣುಗೋಪಾಲ್ ಟಿ.ಎಸ್., ಶೈಲಜಾ), ೨೦೧೧, ಚಿಂತನ ಪುಸ್ತಕ ಜಯನಗರ, ೪ನೇ ಬ್ಲಾಕ್, ಬೆಂಗಳೂರು.

ಗಂಗಾನಾಯಕ ಕೆ.ಎನ್., (ಪ್ರಧಾನ ಸಂಪಾದಕರು), ಭಾರತಿ ಬಿ.ಆರ್ (ಸಂಪಾದಕರು), ರಾಷ್ಟ್ರಕೂಟರ ಶಾಸನಗಳು (ಸಂ-೧), ೨೦೧೧, ಕುವೆಂಪು ಕನ್ನಡ ಸಂಸ್ಥೆ, ಮೈಸೂರು ವಿಶ್ವವಿದ್ಯಾಲನಿಲಯ, ಮಾನಸಗಂಗೋತ್ರಿ, ಮೈಸೂರು.

ಗಂಗಾನಾಯಕ ಕೆ.ಎನ್., (ಪ್ರಧಾನ ಸಂಪಾದಕರು), ನಾಗಯ್ಯ ಜೆ.ಎಂ. (ಸಂಪಾದಕರು), ಕಲ್ಯಾಣ ಚಾಲುಕ್ಯರ ಶಾಸನಗಳು (ಸಂ-೧), ೨೦೧೧, ಕುವೆಂಪು ಕನ್ನಡ ಸಂಸ್ಥೆ, ಮೈಸೂರು ವಿಶ್ವವಿದ್ಯಾಲನಿಲಯ, ಮಾನಸಗಂಗೋತ್ರಿ, ಮೈಸೂರು.

ಗೋಪಾಲರಾವ್ ಎಚ್.ಎಸ್., ೧೯೯೩, ಕಲ್ಯಾಣ ಚಾಲುಕ್ಯರ ದೇವಾಲಯಗಳ ಒಂದು ಸಾಂಸ್ಕೃತಿಕ ಅಧ್ಯಯನ, ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ಗೋಪಾಲರಾವ್, ರಾಷ್ಟ್ರಕೂಟರ ಶಿಲ್ಪಕಲೆ ಸುವರ್ಣ ಕರ್ನಾಟಕ ಮಾಲೆ–೮, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಶ್ರೀಮತಿ ಎನ್. ಪದ್ಮಜಕುಮಾರ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು.

ಚನ್ನಕ್ಕ ಎಲಿಗಾರ, ಮಾಸ್ತಿಕಲ್ಲುಗಳು, ೧೯೭೭, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಚನ್ನಬಸಪ್ಪ ಪಾಟೀಲ, ಕರ್ನಾಟಕದ ಕೋಟೆಗಳು (ಸಂ–೧), ೧೯೯೯, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಿದಾನಂದಮೂರ್ತಿ ಎಂ., ೧೯೮೯, ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು, ಐಬಿಎಚ್ ಪ್ರಕಾಶನ, ಬೆಂಗಳೂರು.

ಚಿದಾನಂದಮೂರ್ತಿ ಎಂ., ೧೯೯೯, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಕ್ರಿ.ಶ. ೪೫೦–೧೧೫೦), ಸಪ್ನ ಬುಕ್‌ಹೌಸ್, ಬೆಂಗಳೂರು.

ತೆಲಗಾವಿ ಲಕ್ಷ್ಮಣ, ೨೦೦೪, ಮೌರ್ಯ ಮತ್ತು ಶಾತವಾಹನಯುಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ದೇವರಕೊಂಡಾರೆಡ್ಡಿ ಮತ್ತು ದೇವರಾಜಸ್ವಾಮಿ ಜಿ.ಕೆ. (ಸಂ), ೨೦೧೬, ಇತಿಹಾಸ ದರ್ಶನ (ಸಂ) ೩೧, ಕರ್ನಾಟಕ ಇತಿಹಾಸ ಅಕಾಡೆಮಿ (ರಿ) ಬೆಂಗಳೂರು.

ನಂಜುಂಡಸ್ವಾಮಿ ಎ.ಎಸ್., ೨೦೧೨, ರಾಷ್ಟ್ರಕೂಟ ಇತಿಹಾಸ (ಕರ್ನಾಟಕ ಇತಿಹಾಸ ಮಾಲಿಕೆ, ಪುಸ್ತಕ–೧, ಸಮಾಜ ಪುಸ್ತಕಾಲಯ, ಶಿವಾಜಿ ಬೀದಿ, ಧಾರವಾಡ.

ನರಸಿಂಹಮೂರ್ತಿ ಎ.ವಿ., ಗೋಪಾಲ್ ಆರ್., ೨೦೧೦, ಕರ್ನಾಟಕ ಪುರಾತತ್ವ ಕೆಲವು ಅಧ್ಯಯನಗಳು, ಪ್ರಸಾರಾಂಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮೈಸೂರು.

ನರಸಿಂಹಮೂರ್ತಿ ಎ.ವಿ., ಗೋಪಾಲ್ ಆರ್., ೨೦೧೦, ಕರ್ನಾಟಕ ವಾಸ್ತುಶಿಲ್ಪ ಉದ್ಯಾನ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ನಾಗಯ್ಯ ಜಿ.ಎಂ., ೧೯೮೫, ಆರನೆಯ ವಿಕ್ರಮಾದಿತ್ಯನ ಶಾಸನಗಳು, ವೀರಶೈವ ಅಕಾಡೆಮಿ, ನಾಗನೂರು ರುದ್ರಾಕ್ಷಿಮಠ, ಬೆಳಗಾವಿ.

ಪರಮಶಿವಮೂರ್ತಿ ಡಿ.ವಿ., ೨೦೧೧, ತುಱುಗೋಳ್, ಸಂಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಬಿದರಿ ಆಯ್.ಎಸ್., ೧೯೮೧ ಶಿಕ್ಷಣ ಮತ್ತು ಸಂಸ್ಕೃತಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಭಟ್‌ಸೂರಿ ಕೆ.ಜಿ. (ಸಂ), ೨೦೦೫, ಶಾಸನ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಹದೇವ ಸಿ., ವಾಸುದೇವ ಬಡಿಗೇರ, ರಮೇಶನಾಯಕ, ಕರ್ನಾಟಕ ದೇವಾಲಯ ಕೋಶ, "ಕಲಬುರ್ಗಿ ಜಿಲ್ಲೆ", ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಮೇಶನಾಯಕ, ೨೦೦೭, ಕರ್ನಾಟಕ ಪುರಾತತ್ವ ಮರುಚಿಂತನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಾಮಚಂದ್ರರಾವ್ ಎಸ್.ಕೆ., ೧೯೭೫, ಮೂರ್ತಿ ಶಿಲ್ಪ: ನೆಲೆ ಹಿನ್ನೆಲೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ರಾಮಲಿಂಗಪ್ಪ ಹೆಚ್., ಪ್ರಾಚೀನ ಭಾರತ, ೨೦೦೮, ನವಿತಾ ಪ್ರಕಾಶನ, ವಿನಯಮಾರ್ಗ ಎರಡನೇ ಹಂತ, ಸಿದ್ಧಾರ್ಥ ಬಡಾವಣೆ, ಮೈಸೂರು.

ರಾಮದಾಸ ರೆಡ್ಡಿ, ಕ್ಷೇತ್ರಕಾರ್ಯ (ಇತಿಹಾಸ ಮತ್ತು ಪುರಾತತ್ವ ಶೋಧಕಾರ್ಯ), ೨೦೧೧, ರೇಣುಕಾಶ್ರೀ ಪ್ರಕಾಶನ, ಯಲ್ಲಮ್ಮ ನಿಲಯ, ಕೆ.ಹೆಚ್.ಬಿ. ಕಾಲೋನಿ, ಹೂಟಹಳ್ಳಿ ಬಡಾವಣೆ, ಮೈಸೂರು.

ಲಿಂಗಯ್ಯ ಡಿ. ಹಾಗೂ ಚಕ್ಕರೆ ಶಿವಶಂಕರ್, ೨೦೦೮, ಸ್ಥಳನಾಮಗಳ ಅಧ್ಯಯನ ಲೇಖನ ಸಂಗ್ರಹ, ಕೃತಿಕ ಪ್ರಿಂಟ್ ಆ್ಯಂಡ್ ವಿನಾಯಕ ನಗರ, ಬೆಂಗಳೂರು.

ಶ್ರೀನಿವಾಸ ಪಾಡಿಗಾರ, ಪುರಾತತ್ವಶಾಸ್ತ್ರ ಪರಿಚಯ, ೧೯೮೭, ಚೈತನ್ಯ ಪ್ರಕಾಶನ, ಧಾರವಾಡ.

ಶ್ರೀನಿವಾಸ ಮೂರ್ತಿ ಎಚ್.ವಿ., ಇತಿಹಾಸ ಸಂಶೋಧನಾ ಸಮೀಕ್ಷೆ, ೨೦೦೮, ಸಾರಾ ಎಂಟರ್ ಪ್ರೈಸಸ್, ಸುಭಾಷನಗರ, ಬೆಂಗಳೂರು.

ಶೇಷಶಾಸ್ತ್ರಿ ಆರ್., ೨೦೦೪, ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಷ. ಶೆಟ್ಟರ್, ೨೦೧೪, ಹಳಗನ್ನಡ ಲಿಪಿ, ಲಿಪಿಕಾರ, ಲಿಪಿ, ವ್ಯವಸಾಯ ಅಭಿನವ ಪಬ್ಲಿಕೇಷನ್, ಬೆಂಗಳೂರು.

ಸಿ.ಪಿ.ಕೆ., ಶಾಸನಶಾಸ್ತ್ರ ಪ್ರವೇಶ, ೨೦೧೧, ಚೇತನ ಬುಕ್‌ಹೌಸ್, ಅಂಜನಾದ್ರಿ, ರೇಣುಕಾಚಾರ್ಯ ದೇವಸ್ಥಾನದ ರಸ್ತೆ, ಮೈಸೂರು.

ಸುಂದರ ಅ., ೧೯೭೧, ಇತಿಹಾಸ ಪೂರ್ವ ಕರ್ನಾಟಕ ಅಥವಾ ಕರ್ನಾಟಕದ ಪ್ರಾಗೈತಿಹಾಸ, ಐಬಿಎಚ್. ಪ್ರಕಾಶನ, ಬೆಂಗಳೂರು.

ಸೂರ್ಯನಾಥ ಕಾಮತ್, ೧೯೭೭, ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಎಂ.ಸಿ.ಪಿ, ಪಬ್ಲಿಕೇಷನ್ಸ್, ಬೆಂಗಳೂರು.

ಹನುಮಾಕ್ಷಿ ಗೋಗಿ, ೧೯೯೬, ಕಲಬುರ್ಗಿ ಜಿಲ್ಲೆಯ ಶಾಸನಗಳು, ಶಿವಚಂದ್ರ ಪ್ರಕಾಶನ, ಹುಬ್ಬಳ್ಳಿ.

ಹೊನ್ನೂರಸ್ವಾಮಿ ಹೆಚ್., ಸ್ಮಾರಕ ಶಿಲ್ಪಗಳ ಅಧ್ಯಯನ (ಮೊಳಕಾಲ್ಮೂರು ತಾಲ್ಲೂಕನ್ನು ಅನುಲಕ್ಷಿಸಿ), ೨೦೧೫, ನಯನ ಪ್ರಕಾಶನ, ಮೈಸೂರು.

**ಪಿಎಚ್.ಡಿ. ಸಂಶೋಧನ ಪ್ರಬಂಧಗಳು**

ಅರ್ಚನಾ ಸಿದ್ಧರಾಮಪ್ಪ, ಗುಲ್ಬರ್ಗಾ ಜಿಲ್ಲೆಯ ಕಲ್ಯಾಣ ಚಾಲುಕ್ಯರ ಶಾಸನಗಳು ಮತ್ತು ದೇವಾಲಯಗಳು, ೨೦೧೫, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕಲಬುರ್ಗಿ ಎಂ.ಎಂ., ಕವಿರಾಜ ಮಾರ್ಗ ಪರಿಸರದ ಕನ್ನಡ ಸಾಹಿತ್ಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಕಲ್ಯಾಣಮ್ಮ ಗುತ್ತೇದಾರ ಎಂ.ಎ., ೨೦೧೦, "ನಾಗಾವಿ ಒಂದು ಸಾಂಸ್ಕೃತಿಕ ಅಧ್ಯಯನ" ಸಂಶೋಧನ ಮಹಾಪ್ರಬಂಧ, ಕನ್ನಡ ಅಧ್ಯಯನ ಸಂಸ್ಥೆ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ.

ಬಾಲಪ್ಪ, ೨೦೧೫, "ತ್ಯಾಗ ಬಲಿದಾನ ಸ್ಮಾರಕಗಳು ಒಂದು ಐತಿಹಾಸಿಕ ಅಧ್ಯಯನ ವಿಶೇಷತೆ, ಗುಲ್ಬರ್ಗಾ ಮತ್ತು ಯಾದಗಿರಿ ಜಿಲ್ಲೆಗಳು", ಸಂಶೋಧನ ಮಹಾಪ್ರಬಂಧ, ಇತಿಹಾಸ ಮತ್ತು ಸಂಶೋಧನಾ ವಿಭಾಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ.

ರಮೇಶ ಎಂ. ಮಲ್ಲಾಬಾದ್, ೨೦೧೨, ಸಗರನಾಡು ಒಂದು ಐತಿಹಾಸಿಕ ಅಧ್ಯಯನ (ಆರಂಭ ಕಾಲದಿಂದ ಆಧುನಿಕ ಕಾಲದವರೆಗೆ) ಸಂಶೋಧನ ಮಹಾಪ್ರಬಂಧ ಇತಿಹಾಸ ಅಧ್ಯಯನ ಮತ್ತು ಸಂಶೋಧನ ವಿಭಾಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ.

**ಎಂ.ಫಿಲ್. ಸಂಶೋಧನ ಪ್ರಬಂಧಗಳು**

ನಿವೇದಿತಾ ಎಸ್.ಸ್ವಾಮಿ, ಚಿತ್ತಾಪೂರ ತಾಲ್ಲೂಕಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ) ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸಿದ್ದರಾಮ ಭೀಮಣ್ಣ, ಗುಲ್ಬರ್ಗಾ ಪರಿಸರದ ಶಾಸನಗಳು ಮತ್ತು ಸ್ಮಾರಕಗಳು (ಅಪ್ರಕಟಿತ), ೨೦೧೨, ಕನ್ನಡ ವಿಶ್ವವಿದ್ಯಾಲಯ, ಹಂಪಿ.

## ಪ್ರಾಥಮಿಕ ಆಕರಗಳು

Gulbarga District Gazetteer, 1967.

Gulbarga District Manual

## ಕರ್ನಾಟಕ ಇತಿಹಾಸ ದರ್ಶನ ಸಂಪುಟಗಳು

ಇತಿಹಾಸ ದರ್ಶನ ಸಂಪುಟ–೯, ೧೧, ೧೨, ೧೪, ೧೫, ೧೯, ೨೧

## ಆಂಗ್ಲ ಪುಸ್ತಕಗಳು

Gururajachar, 1974, Some aspects of Economic and Social life in Karnataka, Prasaranga University of Mysore, Mysore.

Gopal B.R., The Chalukyas of Kalyana and The Kalachuries, 1981, Karnataka University, Prasaranga, Dharawad.

Mahajan V.D., Ancient India, 1960, Schand & Company Pvt. Ltd. (An ISO 90001: 2008 company), Ramanagar, New Delhi.

Rajashekara S., 1991, Rashtrakuta Art in Karnataka, Dharwad, Sujatha Publication.

Shrinivas V. Padigar, 1996, Vishnu Cult in Karnataka, Directorate of Archaeology and Museums, Mysore.

Susmitha Babu. Majumdar, 2016, The Mauryas in Karnataka, Maha Bodi Book Agences 4A, Bankim Chatterji streat, Kolkata.




# ೧. ಕೋಷ್ಟಕ–ದೇವಾಲಯಗಳು

| ಕ್ರ. ಸಂ | ದೇವಾಲಯ ಹೆಸರು | ಸ್ಥಳ | ತಳವಿನ್ಯಾಸ | ಶೈಲಿ | ಕಾಲ ಶತಮಾನ | ಪಂಥ |
|---|---|---|---|---|---|---|
| ೧. | ಆನೇಶ್ವರ | ಊರ ಮುಂಭಾಗ | ತ್ರಿಕೂಟ;ಗರ್ಭಗೃಹ ಅರ್ಧಮಂಟಪ ನವರಂಗ | ರಾಷ್ಟ್ರಕೂಟ | ೯–೧೦ | ಶೈವ |
| ೨. | ಶಂಕರಲಿಂಗ | ಲಿಂಗಾಯತ ಓಣಿ | ಗರ್ಭಗೃಹ ಅಂತರಾಳ ರಂಗಮಂಟಪ | ಕಲ್ಯಾಣ ಚಾಲುಕ್ಯ | ೧೧–೧೨ | ಶೈವ |
| ೩. | ಅನಂತಶಯನ | ತುರುಕರ ಓಣಿ | ಗರ್ಭಗೃಹ ಅರ್ಧಮಂಟಪ ನವರಂಗ | ಕಲ್ಯಾಣ ಚಾಲುಕ್ಯ | ೧೧–೧೨ | ವೈಷ್ಣವ |
| ೪. | ಸೂರ್ಯನಾರಾಯಣ | ಕಾಳೇಶ್ವರ ದೇವಾಲಯ ಮುಂಭಾಗ | ತ್ರಿಕೂಟ:ಗರ್ಭಗೃಹ ಅರ್ಧಮಂಟಪ ನವರಂಗ | ಕಲ್ಯಾಣ ಚಾಲುಕ್ಯ | ೧೧–೧೨ | ವೈಷ್ಣವ |
| ೫. | ಚಂದ್ರಲಾ ಪರಮೇಶ್ವರಿ | ನದಿದಂಡೆ | ಗರ್ಭಗೃಹ ಅರ್ಧಮಂಟಪ ನವರಂಗ ಸಭಾಮಂಟಪ | ರಾಷ್ಟ್ರಕೂಟ | ೧೦ನೇ.ಶ | ಶಾಕ್ತ |
| ೬. | ಬ್ರಹ್ಮಲಾಂಬಿಕೆ | ಶಂಭುಲಿಂಗೇಶ್ವರ ದೇವಾಲಯ ಆವರಣ | ಗರ್ಭಗೃಹ ಅರ್ಧಮಂಟಪ ನವರಂಗ | ಕಲ್ಯಾಣ ಚಾಲುಕ್ಯ | ೧೦–೧೧ | ಶಾಕ್ತ |
| ೭. | ಮಲ್ಲಿನಾಥ | ಊರಿನ ನಡವೆ | ಗರ್ಭಗೃಹ ನವರಂಗ ತೆರೆದ ಮುಖ ಮಂಟಪ | ರಾಷ್ಟ್ರಕೂಟ | ೯ನೇ.ಶ | ಜೈನ |
| ೮. | ಪಾರ್ಶ್ವನಾಥ | ಪತಾಣರ ಓಣಿ | ತ್ರಿಕೂಟ:ಗರ್ಭಗೃಹ ಅಂತರಾಳ ನವರಂಗ ಮುಖಮಂಟಪ | ಕಲ್ಯಾಣ ಚಾಲುಕ್ಯ | ೧೦–೧೧ | ಜೈನ |

## ೨. ಕೋಷ್ಟಕ-ಮೂರ್ತಿಶಿಲ್ಪಗಳು

| ಕ್ರ.ಸಂ | ಮೂರ್ತಿಶಿಲ್ಪ ಹೆಸರು | ಸ್ಥಳ | ಕಾಲಮಾನ | ಪಂಥ |
|---|---|---|---|---|
| ೧. | ಶಿವಲ್ಲಿಂಗ | ಆನೇಶ್ವರ ದೇವಾಲಯ ಗರ್ಭಗೃಹದಲ್ಲಿ | ೧೨ನೇ ಶ. | ಶೈವ |
| ೨. | ನಂದಿಶಿಲ್ಪ | ಕಾಳೇಶ್ವರ ದೇವಾಲಯ ಮುಂಭಾಗ | ೧೦-೧೧ | ಶೈವ |
| ೩. | ಗಣೇಶ | ದಿಗ್ಗಾವಿಯ ಆಂಜನೇಯ ದೇವಾಲಯ ಪಕ್ಕ | ೧೦-೧೧ | ಶೈವ |
| ೪. | ಅನಂತಶಯನ | ತುರುಕರ ಓಣಿ | ೧೧-೧೨ | ವೈಷ್ಣವ |
| ೫. | ಗೌಡ | ಮಲ್ಲಿಕಾರ್ಜುನ ದೇವಾಲಯದ ತೊಲೆಯ ಮೇಲೆ | ೧೦-೧೧<br>೧೦-೧೧ | ವೈಷ್ಣವ<br>ಶಾಕ್ತ |
| ೬. | ಮಹಿಷ ಮರ್ದಿನಿ | ದಿಗ್ಗಾವಿ ಶಂಭು ಲಿಂಗೇಶ್ವರ ದೇವಾಲಯ ಆವರಣ | | |
| ೭. | ಸಪ್ತ ಮಾತೃಕೆಯರು | ಕೋಡ್ಲ, ಚೌಮಾಯೆ ದೇವಾಲಯ ಮುಂಭಾಗ | ೯-೧೦ | ಶಾಕ್ತ |
| ೮. | ಬುದ್ಧ | ಕನಗನಹಳ್ಳಿ ಭೀಮಾನದಿ ದಂಡೆಯ ದಿಬ್ಬದಲ್ಲಿ | ಕ್ರಿ.ಪೂ.೨ನೇ | ಇತರೆ ಪಂಥ |
| ೯. | ಪಾರ್ಶ್ವನಾಥ | ದಂಡೋತಿ ಪಠಾಣರ ಓಣಿ | ೧೦-೧೧ | ಜೈನ |
| ೧೦ | ಮಹಾವೀರ | ಬ್ರಾಹ್ಮಣರ ಓಣಿ | ೧೧-೧೨ | ಜೈನ |

## ೩. ಕೋಷ್ಟಕ–ಸ್ಮಾರಕ ಶಿಲ್ಪಗಳು

| ಕ್ರ.ಸಂ | ಸ್ಮಾರಕ ಶಿಲ್ಪಗಳ ಹೆಸರು | ದೊರೆತ ಸ್ಥಳ | ಕಾಲಮಾನ |
|---|---|---|---|
| ೧. | ವೀರಗಲ್ಲು | ನೀಲಕಂಠ ಕಾಳೇಶ್ವರ ದೇವಾಲಯದ ಮುಂಭಾಗ | ೧೦–೧೧ |
| ೨. | ವೀರಗಲ್ಲು | ಕೋಟೆ ಒಳಗಡೆ ಮಸೀದಿ ಹತ್ತಿರ | ೧೦–೧೧ |
| ೩. | ವೀರಗಲ್ಲು | ಮರೆಮ್ಮ ದೇವಾಲಯದ ಮುಂಭಾಗ | ೧೧–೧೨ |
| ೪. | ವೀರಗಲ್ಲು | ಸೇಡಂ ರಸ್ತೆಯ ಚೌಡ ಮಾಯೆ ಗುಡಿ ಹತ್ತಿರ | ೧೫–೧೬ |
| ೫. | ಒಕ್ಕೈಮಾಸ್ತಿಗಲ್ಲು | ಕೋಟೆ ಒಳಗಡೆ ಮಸೀದಿಯ ಹತ್ತಿರ | ೧೧–೧೨ |
| ೬. | ಮಹಾಸತಿಗಲ್ಲು | ಶಂಭುಲಿಂಗೇಶ್ವರ ದೇವಾಲಯದ ಆವರಣ | ೧೫–೧೬ |
| ೭. | ಶಾಸನ | ಮಲ್ಲಿಕಾರ್ಜುನ ಗುಡಿಯಲ್ಲಿ | ಕ್ರಿ.ಶ. ೧೧೬೩ |
| ೮. | ಶಾಸನ | ಹಳ್ಳಿಯ ಹೊರಗಿರುವ ಪಾಳು ದೇವಾಲಯದ ಸಮೀಪ ಬಿದ್ದಿರುವ ಕಲ್ಲಿನ ಮೇಲೆ | ಕ್ರಿ.ಶ. ೯೩೩ |

೨. ಶಂಭುಲಿಂಗೇಶ್ವರ ದೇವಾಲಯದ ತಲವಿನ್ಯಾಸ, ದಿಗ್ಗಾವಿ

48 X 51



೩. ಅರವತ್ತು ಕಂಬದ ದೇವಾಲಯದ ತಲವಿನ್ಯಾಸ



೪. ಸೂರ್ಯನಾರಾಯಣ ದೇವಾಲಯದ ತಲವಿನ್ಯಾಸ



೫. ಪಂಚಲಿಂಗೇಶ್ವರ ದೇವಾಲಯದ ತಲವಿನ್ಯಾಸ



# ಛಾಯಚಿತ್ರಗಳು



ಶಂಭುಲಿಂಗೇಶ್ವರ ದೇವಸ್ಥಾನದ ಮುಖಮಂಟಪ - ಕೋಡ್ಲಾ



ಪಂಚಲಿಂಗೇಶ್ವರ ದೇವಸ್ಥಾನದ ಮುಖಮಂಟಪ - ಸೇಡಂ



ಅನಂತಶಯ ದೇವಸ್ಥಾನದ ಪ್ರವೇಶ ದ್ವಾರ - ದಿಗ್ಗಾವಿ



ಚಂದ್ರಲಾಪರಮೇಶ್ವರಿ ದೇವಸ್ಥಾನ - ಸನ್ನತಿ



ಶಂಭುಲಿಂಗೇಶ್ವರ ದೇವಸ್ಥಾನದ ಶಿಖರಗಳು - ದಿಗ್ಗಾವಿ



ಕಳಿಂಗ ನಾಗರ ಶೈಲಿಯ ಶಿಖರ - ದಿಗ್ಗಾವಿ





ಶಿಥಿಲಗೊಂಡಿರುವ ಸೂರ್ಯನಾರಾಯಣ ದೇವಸ್ಥಾನದ ಮುಂಭಾಗ ಮತ್ತು ಹಿಂಭಾಗ - ಕಾಳಗಿ



ಸೂರ್ಯನಾರಾಯಣ ದೇವಸ್ಥಾನದ ನವರಂಗದಲ್ಲಿರುವ ಸ್ತಂಭ – ಕಾಳಗಿ



ಆಂಜನೇಯನ ದೇವಸ್ಥಾನದ ನವರಂಗದಲ್ಲಿನ ಸ್ತಂಭ – ಮಾನ್ಯಖೇಟ



ಶಂಭುಲಿಂಗೇಶ್ವರ ದೇವಸ್ಥಾನದ ನವರಂಗದಲ್ಲಿರುವ ಸ್ತಂಭಗಳು – ಕೋಡ್ಲಾ



ಮಲ್ಲಿನಾಥ ದೇವಸ್ಥಾನದ ನವರಂಗದಲ್ಲಿರುವ ಸ್ತಂಭಗಳು – ಮಾನ್ಯಖೇಟ


ಗರ್ಭಗೃಹದ ಶಿವಲಿಂಗ–ಲೋಕೇಶ್ವರ ದೇವಸ್ಥಾನ.ಹಂದರಕಿ


ಗರ್ಭಗೃಹದ ಶಿವಲಿಂಗ–ಸೂರ್ಯನಾರಾಯಣ ದೇವಸ್ಥಾನ.ಕಾಳಗಿ


ಗರ್ಭಗೃಹದಲ್ಲಿರು ಶಿವನ ರೂಪದ ಲಿಂಗ– ಮಲ್ಲಿಕಾರ್ಜುನ ದೇವಸ್ಥಾನ. ಕಾಳಗಿ


ಗಿರು ಚಿತ್ರವಿರುವ ಲಿಂಗ – ಆನೇಶ್ವರ ದೇವಸ್ಥಾನ ಮುಂಭಾಗ. ಹಂದರಕಿ


ಆಂಜನೇಯನ ಮೂರ್ತಿ – ದಿಗ್ಗಾವಿ


ಕೋಟೆ ಆಂಜನೇಯನ ಮೂರ್ತಿ – ಮಾನ್ಯಖೇಟ


ಅನಂತಶಯನ ವಿಗ್ರಹ – ದಿಗ್ಗಾವಿ


ನರಸಿಂಹ ತೀರ್ಥ – ಕಾಳಗಿ



ಗರ್ಭಗೃಹದಲ್ಲಿರುವ ಚೌಡಮಾಯೇ ಶಿಲ್ಪ – ಕೋಡ್ಲಾ



ಸರಸ್ವತಿ ಶಿಲ್ಪ – ಶಂಭುಲಿಂಗೇಶ್ವರ ದೇವಸ್ಥಾನದ ಆವರಣ. ಕೋಡ್ಲಾ



ಸಪ್ತಮಾತ್ರಿಕೆ ಶಿಲ್ಪ – ಕೋಡ್ಲಾ



ಸಪ್ತಮಾತ್ರಿಕೆ ಶಿಲ್ಪ – ಕಾಳಗಿ


ತೃಟಿತವಾಗಿರುವ ಪಾರ್ಶ್ವನಾಥನ ಮೂರ್ತಿ – ದಂಡೋತಿ


ತೃಟಿತವಾಗಿರುವ ಪಾರ್ಶ್ವನಾಥನ ಮೂರ್ತಿ – ದಂಡೋತಿ
ವೀರಭದ್ರ ದೇವಸ್ಥಾನ ಮುಂಭಾಗ


ಮಲ್ಲಿನಾಥನ ಮೂರ್ತಿ – ಮಾನ್ಯಖೇಟ


ಕಾಳಿಕ, ಪದ್ಮವತಿ ಮತ್ತು ಧರ್ಣೇಂದ್ರರರ ಮೂರ್ತಿಗಳು – ಮಾನ್ಯಖೇಟ



ಬುದ್ಧನ ಮೂರ್ತಿ – ಸನ್ನತಿ (ಕನಗನಹಳ್ಳಿ)



ಅಶೋಕ ಮತ್ತು ಅವನ ರಾಣಿಯರು ಇರುವ ಶಿಲ್ಪ – ಸನ್ನತಿ (ಕನಗನಹಳ್ಳಿ)



೬ನೇ ವಿಕ್ರಮಾದಿತ್ಯನ ರಾಣಿ ಮಲೆಯಮತಿಯ ಶಾಸನ – ದಿಗ್ಗಾವಿ



ಕ್ರಿ. ಶ. ೧೧೬೩ರ ಶಾಸನ – ಕಾಳಗಿ



ಕಾಳೇಶ್ವರ ದೇವಾಲಯ ಮುಂಭಾಗದ ವೀರಗಲ್ಲು–ಕಾಳಗಿ



ಮರೆಮ್ಮ ದೇವಾಲಯದ ಮುಂಭಾಗದ ವೀರಗಲ್ಲು–ದಿಗ್ಗಾವಿ



ಕಾಗಿಣಾ ನದಿ ದಂಡೆಯ ಮೇಲಿನ ವೀರಗಲ್ಲು –ಮಾನ್ಯಖೇಟ



ಕೋಟೆ ಒಳಗಡೆ ಇರುವ ಓಕ್ಳೈ ಮಾಸ್ತಿಗಲ್ಲು–ಮಾನ್ಯಖೇಟ


ಕೋಟೆ ಪ್ರವೇಶ ದ್ವಾರ-ಮಾನ್ಯ ಖೇಟ


ಕೋಟೆ ಒಳಗಿನ ಬುರುಜು-ಮಾನ್ಯಖೇಟ


ಕಂಚಿನ ಕೋಟೆ - ಅಲ್ಲೂರು


ಕೋಟೆ - ದಂಡೋತಿ

